


ಮಕ್ಕಳಿಗಾಗಿಯೇ ಹೊರಡುವ ಉತ್ತಮವರ್ಗದ ಸಚಿತ್ರ ಮಾಸಪತ್ರಿಕೆ.

ಕಟ್ಟು ೪] [೧ ರಿಂದ ೧೨ ಪುಸ್ತಕಗಳು

**ಸಂಪಾದಕ :—**
**ಸಿ. ಅಶ್ವತ್ಥನಾರಾಯಣರಾವ್, ಬಿ ಎ,**

**ಪ್ರಕಟನಾಲಯ,**
**ಬಳೇಪೇಟೆ, ಬೆಂಗಳೂರು ಸಿಟಿ**

# ಅ ನು ಕ್ರ ಮ ಣಿ ಕೆ .

---

## ಸೆಕೆಂಡರಿ ಎಡಿಷನ್

### ಆರೋಗ್ಯ



### ಜೀವನ ಚರಿತ್ರೆ



### ದೇಶಾಟನ



### ಭಾರತಚರಿತ್ರೆ ೪,೪೫,೬೬

## ವಿಜ್ಞಾನ



## ವಿಶೇಷ ಲೇಖನಗಳು




ಮಕ್ಕಳಿಗಾಗಿಯೇ ಹೊರಡುವ ಉತ್ತಮವರ್ಗದ ಸಚಿತ್ರ ಮಾಸಪತ್ರಿಕೆ.

ಕಟ್ಟು ೨] [೧ ರಿಂದ ೧೨ ಪುಸ್ತಕಗಳು

ಸಂಪಾದಕ :—
ಸಿ. ಅಶ್ವತ್ಥನಾರಾಯಣರಾವ್, ಬಿ ಎ,

ಪ್ರಕಟನಾಲಯ,
ಒಳೇಪೇಟೆ, ಬೆಂಗಳೂರು ಸಿಟಿ

# ಅ ನು ಕ್ರ ಮ ಣಿ ಕೆ .

---

## ಪ್ರೈ ಮ ರಿ ಎ ಡಿ ಷ ನ್



**ಮುಹಮ್ಮದೀಯ ಯುವತಿ**

ಚಿತ್ರಕಾರರು:—ಟಿ. ಭೀಮರಾವ್

“ಭಾರತಿ”ಯ ವಿಶ್ವಾಸದಿಂದ




ವಿದ್ಯಾ ಪರಾ ದೇವತಾ

ಕಟ್ಟು ೯ | ಶಕ-೧೮೫೭—ಜ್ಯೇಷ್ಠ—ಶುದ್ಧ—ಜೂನ್ ೧೯೩೫ | ಪುಸ್ತಕ ೧

# ನಮ್ಮ ಮೈಸೂರು

ದೇವುಡು

ಆಸೇತು ಹೈಮಾದ್ರಿ ಭರತ ಭೂಖಂಡದೊಳು
ಮೈಸೂರು ಮೆರೆಯುವುದು ಮಾದರಿಯ ರಾಜ್ಯ
ನಾಲ್ಮಡಿಯ ಕೃಷ್ಣನಾ ನಲ್ಮೆಯಾ ರಾಜ್ಯ
ಕರ್ಣಾಟ ಶಾರದೆಯ ತವರುಮನೆಯಾ ರಾಜ್ಯ
ಕಾವೇರಿ ತಾನಾಗಿ ಬಂದು ನೆಲಸಿದ ರಾಜ್ಯ
ಚಾಮುಂಡಿ ಹರಿಸಿರುವ ಚಿನ್ನದಾ ರಾಜ್ಯ
ಶಾಂತಿ ಧರ್ಮ ವಿಜ್ಞಾನ ಕಳೆಗಳಾ ರಾಜ್ಯ
ಸತ್ಯಮೇವೋದ್ಧರಾಮ್ಯಹಮೆಂಬ ಭೂಪತಿಯು
ಆನಂದ ಪರಿಪೂರ್ಣ ನಂದನದ ರಾಜ್ಯ
ಮೈಸೂರು ಮೆರೆಯುವುದು ಮಾದರಿಯ ರಾಜ್ಯ
ನಮ್ಮ ಮೈಸೂರು ರಾಮರಾಜ್ಯ
ನಮ್ಮ ಮೈಸೂರು ರಾಮರಾಜ್ಯ

# ದಡ್ಡನು ಮೀನು ಹಿಡಿದುದು

(ನಿಡಂಬೂರು ರಾಮಕೃಷ್ಣ)

ಅವನಿಗೂ ಹತ್ತು ಹದಿನಾರು ವರುಷವಾಯಿತು. ತಂದೆಯು ಒಂದು ದಿನ "ಎಲಾ, ಹೀಗೆ ಸುಮ್ಮನೆ ಮೈಗಳ್ಳನಂತೆ ಕೂತಿರುವ ಬದಲು ಕೆರೆಯಲ್ಲಿ ಮೀನಾದರೂ ಹಿಡಿದುಕೊಂಡು ಬರಬಾರದೇ?" ಎಂದನು. ಮಗನು ಆಗಲೆಂದು ಹೊರಟನು. ಗದ್ದೆಗಳ ಹತ್ತಿರ ನೀರು ತುಂಬಿತುಳು ಕುತ್ತಿದ್ದ ಚಿಕ್ಕದೊಂದು ಕಟ್ಟೆ ಇದ್ದಿತು. ಅದಕ್ಕೆ ಮಣ್ಣಿನ ಅಣೆಕಟ್ಟು. ಒಕ್ಕಲಿಗನ ಗದ್ದೆಗಳಿಗೆ ಅಣೆಕಟ್ಟೇ ಆಧಾರ.

ದಡ್ಡನು ಅಣೆಕಟ್ಟಿನ ಬಳಿಗೆ ಹೋದನು. ತುಂಬಿದ ನೀರಿನಲ್ಲಿ ಮೀನು ಹಿಡಿಯಬಾರದೆಂದು ಅವನು ಆ ಮಣ್ಣಿನ ಕಟ್ಟೆಯನ್ನು ನಾಲ್ಕೈದು ಕಡೆ ಅಗೆದು ಕಿತ್ತುಬಿಟ್ಟನು. ಕಟ್ಟೆಯ ನೀರೆಲ್ಲಾ ಸರ್‍ರನೆ ತಗ್ಗುಪ್ರದೇಶಕ್ಕೆ ಹರಿದುಹೋಯಿತು. ತಳದಲ್ಲಿ ತೆಳ್ಳಗೆ ಕೆಸರು ನಿಂತಿತು. ದಡ್ಡನು ಇಳಿದು ಕೈಯಿಂದ ಹುಡುಕಿ ಹುಡುಕಿ ಸಿಕ್ಕಿದ ಐದಾರು ಮೀನು ಗಳನ್ನು ಹಿಡಿಯಲ್ಲಿ ಹಿಡಿದುಕೊಂಡು ಮನೆಗೆ ಹಿಂತಿರುಗಿದನು.

ದಡ್ಡನು " ಇಗೋ ಅಪ್ಪ, ತಂದಿರುವೆನು ನೋಡು " ಎಂದು ಹೇಳಿ ಮೀನುಗಳನ್ನು ತಂದೆಯ ಮುಂದೆ ಇರಿಸಿದನು. ಅದನ್ನು ನೋಡಿ, ತಂದೆಯು ಸಂತೋಷಗೊಂಡು "ಶಾಬಾಸು, ಶಾಬಾಸು, ಶಾನೆ ವಾಸಿ, ಈ ಕೆಲಸವಾದರೂ ಮಾಡಿದೆಯಲ್ಲ. ಇನ್ನು ಮೇಲೆ ಭಯವಿಲ್ಲ" ಎಂದು ಮೆಚ್ಚಿ, ಇಷ್ಟುಹೊತು ಏನು ಆಯಿತು? ಎಂದು ಕೇಳಲು ಹುಡುಗನು ಅಪ್ಪಾ, ನಾನು ಆಗಲೇ ಬರುತ್ತಿದ್ದೆ. ನಮ್ಮ ಅಣೇ ನೀರೆಲ್ಲಾ ಹೊರಟು ಹೋಗಿ ತಳದ ಕೆಸರು ಕಾಣಿಸುವುದಕ್ಕೆ ತಡವಾಯಿತು. ಎಂದುತ್ತರ ಕೊಟ್ಟನು. ಅದಕ್ಕೆ ತಂದೆಯು ಎಲಾ ಪಾಪಿ, ಅಣೆ ನೀರೆಲ್ಲಾ ಹೋಯಿ ತೋ ಎನ್ನಲು ಮಗನು ಹೌದಪ್ಪಾ ನೀರೆಲ್ಲಾ ಹೋಯಿತು. ಕೆಸರು ಇನ್ನೂ ಇದೆ ಎಂದು ಮೆಲ್ಲಗೆ ಉತ್ತರವಿತನು. ಎಲ್ಲವನ್ನೂ ಕೇಳಿ ಗದ್ದೆಯ ಪೈರೆಲ್ಲಾ ನಷ್ಟವಾಗಿ ಹೋಯಿತಲ್ಲಾ ಎಂದು ತಂದೆ ದುಃಖಪಟ್ಟನು.

# ಮಾಡಿನೋಡುವ ಮಹೇಂದ್ರಜಾಲ

## ೧. ದೀಪವನ್ನು ತಲೆಕೆಳಗೆ ಮಾಡುವುದು.

(ಬೇಕಾದ ವಸ್ತುಗಳು : ಒಂದು ಮೇಣದ ಬತ್ತಿ ಚೂರು, ಒಂದು ದೀಪದ ಕಡ್ಡಿ ಪೆಟ್ಟಿಗೆ, ಒಂದು ಗುಂಡುಸೂಜಿ, ಒಂದು ಅಂಗೈಯ್ಯಗಲದ ರಟ್ಟು-ಅಟ್ಟೆ)

ಗುಂಡುಸೂಜಿಯಿಂದ ರಟ್ಟಿನಲ್ಲಿ ನೇರವಾಗಿ ಒಂದು ತೂತು ಕೊರೆ. ತೂತು ಸಣ್ಣಗಿರುವುದು ಒಳ್ಳೆಯದು. ಅನಂತರ ಮೇಣದ ಬತ್ತಿಯನ್ನು ಹಚ್ಚು. ಅದನ್ನು ಒಂದು ಎತ್ತರವಾದ ಸ್ಥಳದಲ್ಲಿಡು. ಗೋಡೆಗೆ ಬಹಳ ದೂರವಾಗಿಯೂ ಬೇಡ, ಬಹಳ ಸಮೀಪವಾಗಿಯೂ ಬೇಡ, ಹಾಗೆ ಇಟ್ಟಮೇಲೆ ನಿನ್ನ ಬಳಿಯಿರುವ ತೂತು ಕೊರೆದಿರುವ ರಟ್ಟನ್ನು ದೀಪಕ್ಕೂ ಗೋಡೆಗೂ ನಡುವೆ ಹಿಡಿ. ದೀಪದ ಬೆಳಕು ತೂತಿನಿಂದ ಹಾಯ್ದು ಗೋಡೆಯ ಮೇಲೆ ಬೀಳುವುದು ಆಗ ನೋಡು ಎಂತಹ ಇಂದ್ರಜಾಲವಾಗುವುದು ! ದೀಪದ ನೆರಳು ತಲೆಕೆಳಗಾಗಿ ಗೋಡೆಯ ಮೇಲೆ ಬೀಳುವುದು. ಇದನ್ನು ನೀನು ನೋಡಿಕೊಂಡ ಮೇಲೆ ಆ ರಟ್ಟನ್ನು ನಿನ್ನ ಕಣ್ಣಿಗೆ ಇಟ್ಟುಕೊಂಡು ನೋಡು ದೂರವನ್ನು ಸರಿಪಡಿಸಿಕೊಂಡು ನೋಡಿದರೆ ನಿನಗೂ ಹಾಗೆಯೇ ಕಾಣುವುದು. ಅದರ ಗುಟ್ಟು ತಿಳಿದು ಈ ಇಂದ್ರಜಾಲವನ್ನು ಎಲ್ಲರಿಗೂ ತೋರಿಸು.

## ೨. ತಿಳಿನೀರನ್ನು ಹಾಲುಮಾಡುವುದು.

(ಬೇಕಾದ ವಸ್ತುಗಳು : ಒಂದು ಬಿಳಿಯ ಶುಭ್ರವಾದ ಸೀಸೆ; ಒಂದಷ್ಟು ಸುಣ್ಣದ ತಿಳಿನೀರು, ಒಂದು ಪರಂಗಿಯ ಕೊಳವೆ ಅಥವಾ ನೆಲ್ಲುಹುಲ್ಲಿನ ಕಡ್ಡಿ.)

ಸುಣ್ಣದ ಮೇಲೆ ನಿಂತಿರುವ ತಿಳಿಯಾದ ನೀರನ್ನು ತೆಗೆದಿಟ್ಟುಕೋ. ಅದನ್ನು ಬೇಕಾದರೆ ಒಂದೆರಡು ಸಲ ಶೋಧಿಸಿಯೂ ಬಿಡು. ಅದನ್ನು ಒಂದು ಸೀಸೆಗೆ ತುಂಬಿ ಎಲ್ಲರಿಗೂ ತೋರಿಸು. ಅದು ಶುದ್ಧವಾದ ನೀರಿನಂತೆಯೇ ಇರುವುದು. ಅದಕ್ಕೆ ನೆಲ್ಲು ಹುಲ್ಲಿನ ಅಥವಾ ಪರಂಗಿಯ ಕೊಳವೆಯನ್ನು ಇಟ್ಟು ಊದುತ್ತ ಬಾ. ಅದು ಬರುಬರುತ್ತ ಬೆಳ್ಳಗಾಗಿ ಹಾಲಿನಂತಾಗುವುದು.

ಇದನ್ನು ಮಾಡುವಾಗ ಒಂದು ವಿಷಯ ನೆನೆಪಿನಲ್ಲಿರಲಿ. ಸೀಸೆಯಲ್ಲಿ ಸುಣ್ಣದ ತಿಳಿನೀರು ಬಹಳ ಹೊತ್ತು ಇದ್ದರೆ ಅದು ಹೆಪ್ಪುಕಟ್ಟಿಕೊಳ್ಳುವುದು. ಆಗ ನಿನ್ನ ಗುಟ್ಟು ಬಯಲಾಗುವುದು. ಎಚ್ಚರಿಕೆ

(ಜೊತೆಗೆ ಈ ಮಹೇಂದ್ರಜಾಲ ಮಾಡುವಾಗ ನೀನು ಮಂತ್ರಹೇಳುವನಂತೆ ಬಾಯಾಡಿಸುತ್ತ ಒಂದು ಕಡ್ಡಿಯನ್ನು ಇಟ್ಟುಕೊಂಡು ಅದನ್ನು ಕೈಯಲ್ಲಿ ತಿರುಗಿಸುತ್ತಿರು ಇಲ್ಲದಿದ್ದರೆ ಅದರ ಕರಾಮತ್ತೇ ಕೆಟ್ಟುಹೋದೀತು !)

## ಕಣ್ಣಿದ್ದವರಿಗೆ ಖಂಡುಗಹಣ

ಸ್ವಿಟ್ಜರ್‌ಲ್ಯಾಂಡ್ ಎಂಬುದು ಯೂರೋಪಿನಲ್ಲಿರುವ ದೇಶ. ಅದು ಫ್ರಾನ್ಸ್, ಜರ್ಮನಿಗಳ ನಡುವೆ, ಇಟಲಿಗೆ ಬಡಗಲಾಗಿ ಬೆಲ್ಜಿಯಂಗೆ ತೆಂಕಲಾಗಿ ಇದೆ. ಅಲ್ಲಿ ಸುಮಾರು ೮೦ ವರ್ಷಗಳ ಹಿಂದೆ ಮೇರಿಯನ್ ಎಂಬ ಎಂಜನಿಯರನು ಇದ್ದನು. ಅಲ್ಲಿರುವ ಗಣಿಗಳಿಂದ ಆಸ್‌ಫಾಲ್ಟ್ ತೆಗೆಸುವುದು ಅದನ್ನು ಸಾಗಿಸುವುದು ಅವನ ಕೆಲಸ.

ದಿನ ದಿನವೂ ಈ ಕೆಲಸವು ನಡೆಯುತ್ತಲೇ ಇರುವುದು. ಆಸ್‌ಫಾಲ್ಟನ್ನು ಗಾಡಿಗೆ ತುಂಬಿ ಕಳುಹಿಸುವಾಗ ಎಷ್ಟೇ ಚೆನ್ನಾಗಿ ಭರ್ತಿಮಾಡಿದ್ದರೂ ಜಲ್ಲಿಕಲ್ಲುಗಳ ಗಾಡಿಯಿಂದ ಜಲ್ಲಿಕಲ್ಲುಗಳು ಉದುರಿಹೋಗುವಂತೆ ಒಂದೊಂದು ತುಂಡು ಆಸ್‌ಫಾಲ್ಟ್ ಕೆಳಕ್ಕೆ ಬಿದ್ದುಹೋಗುವುದು. ಅದನ್ನು ಯಾರೂ ಲೆಕ್ಕಿಸುತ್ತಲೇ ಇರಲಿಲ್ಲ

ಒಂದು ದಿನ ಹೀಗೆ ಕೆಳಗೆ ಬಿದ್ದ ಆಸ್‌ಫಾಲ್ಟಿನ ತುಂಡು ಮೇರಿಯನ್‌ನ ಕಣ್ಣಿಗೆ ಬಿತ್ತು. ಅವನು ಎಲ್ಲರಂತೆ ನೋಡಿಕೊಂಡು ಹೋದನು. ಹಿಂತಿರುಗಿ ಬರುವಾಗಲೂ ಆ ತುಂಡು ಅಲ್ಲಿಯೇ ಬಿದ್ದಿತ್ತು ಆದರೆ ಬಿಸಿಲಿನ ಝಳಕ್ಕೆ ಕರಗಿ ನೀರಾಗಿ ಸುತ್ತಲೂ ಹರಡಿಕೊಂಡಿದೆ. ನೆಲದಲ್ಲಿರುವ ಬಿರುಕುಗಳಿಗೆಲ್ಲ ಚೆನ್ನಾಗಿ ಗಾರೆಹಾಕಿ ಇಡಿದಂತಾಗಿದೆ. ಮರುದಿನವೂ ಅದು ರಸ್ತೆಯಲ್ಲಿ ಬಂದು ಹೋಗುವ ಗಾಡಿ, ಮನುಷ್ಯರು ಮೊದಲಾದವರ ತುಳಿತಕ್ಕೆ ಸಿಕ್ಕಿಸಿಕ್ಕಿ ಚೆನ್ನಾಗಿ ದಮ್ಮಸ್ಸು ಮಾಡಿದಂತೆ ಆಗಿ ನೆಲವನ್ನು ಹಿಡಿಯುತ್ತ ಬರುತ್ತಿರುವಂತೆ ಕಾಣಿಸಿತು.

ಮೇರಿಯನ್‌ನಿಗೆ ಆಗ ಒಂದು ಯೋಚನೆಯು ಹೊಳೆಯಿತು. "ಒಂದು ತುಂಡು ಆಸ್‌ಫಾಲ್ಟ್ ನೆಲಕ್ಕೆ ಬಿದ್ದು ಅಷ್ಟಗಲಕ್ಕೆ ಹರಡಿಕೊಂಡು ಕುಳಿತಿದೆ. ಅದರಂತೆ, ಬೀದಿಗೆಲ್ಲ ಏಕೆ ಹಾಕಬಾರದು? ಇದರಿಂದ ರಸ್ತೆಯು ಮಟ್ಟವಾಗುವುದು, ಹೋಗಿಬರುವ ಗಾಡಿಗಳಿಗೆ ಅನುಕೂಲವಾಗುವುದು ಇದನ್ನು ಪರೀಕ್ಷೆಮಾಡಿ ನೋಡಬೇಕು'' ಎನ್ನಿಸಿತು. ಗಾಡಿಗಳ ಹಿಂದೆ ಹೋಗುವಾಗ ಒಂದೊಂದು ತುಂಡನ್ನು ಬೇಕೆಂದು ತಳ್ಳುತ್ತಾ ಬಂದನು. ಅವೂ ಹಿಂದಿನ ತುಂಡಿನಂತೆಯೇ ನೆಲದ ಮೇಲೆ ಭದ್ರವಾಗಿ ಕುಳಿತವು. ಅವನಿಗೆ ಈ ಕೆಲಸವು ಸಾಧ್ಯವಾಗುವುದೆಂದು ನಂಬುಗೆಯಾಯಿತು.

ಆತನು ತನ್ನ ಅಭಿಪ್ರಾಯವನ್ನು ಹಲವರ ಮುಂದಿಟ್ಟನು ಎಲ್ಲರೂ. ಚೆನ್ನಾಗಿದೆಯೆಂದರೂ ಯಾವ ಸರ್ಕಾರವೂ ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಕೊನೆಗೆ ಫ್ರೆಂಚ್ ಸರ್ಕಾರವು ನೋಡೋಣವೆಂದು ಅರ್ಧನಂಬುಗೆಯಿಂದ ಅಂಗೀಕರಿಸಿತು ಪ್ಯಾರಿಸ್ಸಿನಲ್ಲಿ ಒಂದು ಬೀದಿಗೆ ಆಸ್‌ಫಾಲ್ಟ್ ಹಾಕಿಸಿದರು. ''ಅದು ಸಾಧ್ಯ ರಸ್ತೆಯ ಧೂಳು ಅಡಗುವುದು. ರಸ್ತೆ ರಿಪೇರಿಯ ಖರ್ಚು ಕಡಿಮೆಯಾಗುವುದು'' ಎಂದು ಕಂಡುಬಂತು. ಪ್ಯಾರಿಸ್ಸಿನ ರಸ್ತೆಗಳಿಗೆಲ್ಲ ಆಸ್‌ಫಾಲ್ಟ್ ಬಂತು. ಇನ್ನೆರಡುವರ್ಷಗಳಲ್ಲಿ ಲಂಡನ್ನಿನಲ್ಲಿಯೂ ಈ ರಸ್ತೆಗಳು ಬಂದುವು. ಮೇರಿಯನ್‌ನಿಗೆ ಕೀರ್ತಿಯೂ ಬಂತು: ಐಶ್ವರ್ಯವೂ ಬಂತು.

## ಒ ಗ ಟ

೧. ಗಂಡ ಹೆಂಡಿರ ಹೆಸರು ಹಿಂದುಮುಂದಾಗಿ ನನ್ನ ಹೆಸರು. ರೆಕ್ಕೆಯಿಲ್ಲವಾದರೂ ಮುಗಿಲ ಮೇಲೇರಿ ಕುಳಿತಿರುವನು ನನ್ನ ಮೆಟ್ಟಲು ಬಂದವರ ಆಹುತಿಯ ಮಾಡುವೆನು.

೨. ಹೆಂಗುಸರು ಮುಡಿಯುವರು ಹೂವಲ್ಲ.

ತೋಟದಲ್ಲಿ ಬೆಳೆಯುವರು ಸೊಪ್ಪಲ್ಲ.

ಗಿಡವಾಗಿ ಕೀಳುವರು ಕೊತ್ತುಂಬ್ರಿಯಲ್ಲ. ಹೇಳಬಲ್ಲಜಾಣರಿಗೆ ಇದು ಅರಿದಲ್ಲ.

ಟಿ. ಸಂಜೀವರಾವ್,

೩ ಕಾಸಿನ ಕುಡುಕೆಯಲ್ಲಿ ಎಣ್ಣೆತಂದರೆ ಎಲ್ಲರೂ ಹಚ್ಚಿಕೊಂಡು ಇನ್ನು ಉಳಿದಿದೆ.

ಬಿ. ಎಸ್'. ಶೇಷಯ್ಯಂಗಾರ್'

೪. ಗಿಲಗಿಲ ಮರವೆ ಗಿಲಕಿಮರವೆ ಅಂದಚೆಂದದ ಹೂ, ಮುಡಿಯಲುಬಾರದು

ಎಂ. ಎಸ್'. ಮಾಧವರಾವ್',

೫. ಮನೆಗೆಲ್ಲ ಬೆಳದಿಂಗಳು ಹಾಕೋರುಂಟು ತೆಗಿಯೋರಿಲ್ಲ.

ನಿರ್ಮಲಬಾಯಿ,

೬ ಮಳೆ ಇಲ್ಲದೆ ಬೆಳೆ ಕೊಯುವವನು ತಾಳ ಮೇಳ ಇಲ್ಲದೆ ಕುಣಿಯುವನು, ಇವರು ಯಾರು,

ಎಲ್'. ಕಣಮಪ್ಪ.

## ನಗೆಗಡಲು

೧ ನ್ಯಾಯಾಧೀಶ:—(ಕಳ್ಳನನ್ನು ಕುರಿತು) ಎಲಾ, ಇವರ ಅಂಗಡಿಯಿಂದ ಜವಳಿಯನ್ನು ಕದ್ದೆಯೇನೋ?

ಕಳ್ಳ—ಹೌದು ಸ್ವಾಮಿ, ಅದು ನನ್ನ ತಪ್ಪಲ್ಲ ಅಂಗಡಿಯವರದೇ ತಪ್ಪು

ನ್ಯಾಯಾಧೀಶ—ಹೇಗೆ?

ಕಳ್ಳ—ಪ್ರತಿಯೊಂದು ಗೋಡೆಗಳ ಮೇಲೆಯೂ, ಪತ್ರಿಕೆಯಲ್ಲಿಯೂ. 'ಜವಳಿಯನ್ನು ತೆಗೆದುಕೊಂಡು ಹೋಗಿ, ಇದೇ ಸುಸಮಯ' ಎಂದು ಪ್ರಕಟಿಸಿದ್ದಿತು.

o o o o o o

೨. ಮಗ:—ಅಪ್ಪಾ, ನಿನಗೆ ಕಣ್ಣುಮುಚ್ಚಿಕೊಂಡು ಸೈನ್' ಹಾಕುವುದಕ್ಕೆ ಬರುತ್ತೋ?

ತಂದೆ—ಬರುತ್ತೇ ಮಗು, ಏಕೆ?

ಮಗ—ಹಾಗಾದರೆ ಈ ಪ್ರೋಗ್ರೆಸ್' ಕಾರ್ಡಿಗೆ ಸೈನ್' ಹಾಕು, ಕೆ. ಜಯ

## ಚಿತ್ರಲಿಪಿ

 ಲದ  ನಾದ  ನು

 ರೊಡನೆ  ಕ್ಕೆ

  ಯಲ್ಲಿ   ವು

ಸಿಕ್ಕಿತು ಅದನ್ನು  ಲು, ಅವನ 

ಕೊಂಕ್ಕಿಡಿತುಸಿ. ಆಗ ಅವನು  ನನ್ನು  ಸಿಬಿಡು

ಕೊಂಡಿ ಬಂದನು.

## ಚಿ ತ್ರ ಪ ರಿ ಚ ಯ

ಈ ಸಲದ ವರ್ಣಚಿತ್ರವು ಒಬ್ಬ ಮಹಮ್ಮದೀಯ ಯುವತಿಯದು ಆ ಜಾತಿಯವರಲ್ಲಿ ಹೆಂಗುಸರು ಈಚೆಗೆ ಬರುವುದಿಲ್ಲ. ಬಡವರು ಯತ್ನವಿಲ್ಲದೆ ಹೊರಗೆ ಬೇಕಾಗಿ ಬಂದರೆ, ಬುರುಕಿಯನ್ನು ಹಾಕಿಕೊಂಡು ಬರುತ್ತಾರೆ.

ಉಡುಗೆ ತೊಡುಗೆಗಳಲ್ಲಿ ಮಹಮ್ಮದೀಯರು ಬಹಳ ಶುಚಿ ರುಚಿಯುಳ್ಳವರು ಹೆಂಗುಸರೂ ಕೂಡ ಗಂಡುಸರಂತೆ ಉದ್ದವಾದ ತೆಳ್ಳನೆಯ ಜುಬ್ಬಗಳನ್ನು ತೊಟ್ಟು ಅದರ ಮೇಲೆ ಅಂದವಾದ ಮೋಟಂಗಿಗಳನ್ನು ತೊಟ್ಟುಕೊಳ್ಳುತ್ತಾರೆ. ಕೈವರೆಗೆ ಬರುವ ಉದ್ದವಾದ ತೋಳುಗಳೂ, ಅದರ ಮೇಲೆ ನಾನಾವಿಧವಾದ ವೊಡವೆಗಳು ಇರುತ್ತವೆ. ಅವರ ಅಲಂಕಾರಗಳು ನಮಗೆ ವಿಚಿತ್ರವಾಗಿ ಕಂಡುಬಂದರೂ ಬಲು ಸೊಗಸಾಗಿದ್ದು ಮನೋಹರವಾಗಿರುತ್ತವೆ.

ಮೂಗಿಗೂ ಕಿವಿಗೂ ಅವರು ಹಲವು ಆಭರಣಗಳನ್ನು ಇಟ್ಟುಕೊಳ್ಳುತ್ತಾರೆ. ಕಿವಿಯಲ್ಲಂತೂ ಸುಮಾರು ಹತ್ತು ಹನ್ನೆರಡು ಒಡವೆಗಳನ್ನು ಇಟ್ಟುಕೊಳ್ಳುತ್ತಾರೆ. ಮೂಗಿಗೆ ಎಡಕ್ಕೊಂದು ಬಲಕ್ಕೊಂದು ನಡುವೆ ಬುಲಾಕು ಇಟ್ಟುಕೊಳ್ಳುವರು.

ಈ ಚಿತ್ರದಲ್ಲಿ ನೋಡು ಈ ಆಭರಣಗಳೆಲ್ಲ ಇವೆ. ಜೊತೆಗೆ ಮಹಮ್ಮದೀಯ ಸ್ತ್ರೀಯರು ತೊಡುವ ಉಡುಗೆಯೂ ಚೆನ್ನಾಗಿ ಕಂಡು ಬರುತ್ತಿದೆ ಎಲ್ಲದಕ್ಕಿಂತಲೂ ವಿಶೇಷವಾಗಿ ಆಕೆಯು ಹಾಕಿಕೊಂಡಿರುವ ತೆಳುವಾದ ಹೊದೆದುಕೊಳ್ಳುವ ಬಟ್ಟೆಯನ್ನು ನೋಡು. ಆಕೆಯು ಗಂಡ, ತಂದೆ, ಅಣ್ಣತಮ್ಮಂದಿರು ಇವರಲ್ಲದ ಇತರ ಗಂಡುಸರನ್ನು ಕಂಡರೆ ಸಾಕು, ಬುರುಕಿಯನ್ನು ಎಳೆದುಕೊಳ್ಳುವಳು. ಮಹಮ್ಮದೀಯರಲ್ಲಿ ಗಂಡುಸರು ಹೆಂಗುಸರೊಡನೆ ಮಾತನಾಡಬೇಕಾದರೆ ಸಾಮಾನ್ಯವಾಗಿ ಮುಖನೋಡಿ ಮಾತನಾಡುವುದಿಲ್ಲ. ಅವರು ತಲೆಬಗ್ಗಿಸಿಕೊಂಡು ಕಣ್ಣಿನಿಂದ ನೆಲವನ್ನು ನೋಡುತ್ತ ಬಹು ಗೌರವವಾಗಿ ಮಾತನಾಡಿಸುತ್ತಾರೆ

---

ಚಿತ್ರಲಿಪಿಯನ್ನು ಈಗ ನಾವು ಬರೆದು ಓದುವುದು ಆಟವಾಗಿದೆ. ಆದರೆ ಒಂದಾನೊಂದು ಕಾಲದಲ್ಲಿ ಜನರು ಬರೆಯುತ್ತಿದ್ದುದು ಓದುತ್ತಿದ್ದುದು ಇದೇ ಲಿಪಿಯನ್ನು ಹಿಂದೆ ಸುಮಾರು ೫-೬ ಸಾವಿರ ವರ್ಷಗಳ ಹಿಂದೆ ಈಜಿಪ್ಟಿನವರು ಬರೆದು ಓದುತ್ತಿದ್ದ ಚಿತ್ರಲಿಪಿಯ ಮಾದರಿಯನ್ನು ಇಲ್ಲಿ ಕೊಟ್ಟಿದೆ





ಭೂತವು ಬರಹೇಳಿ ಸನ್ನೆಮಾಡಿತು. ಹ್ಯಾಂಲೆಟ್ಟನು ಹೊರಟನು. ಮಿತ್ರರು ತಡೆದರೂ ಕೇಳಲಿಲ್ಲ.

# ಹ್ಯಾಮ್‌ಲೆಟ್ ಅಥವಾ ಡೆನ್ಮಾರ್ಕಿನ ಯುವರಾಜ

ಡೆನ್ಮಾರ್ಕ್ ದೇಶವು ಪ್ರಸಿದ್ಧವಾಗಿದ್ದ ಕಾಲದಲ್ಲಿ ಅಲ್ಲಿ ಹ್ಯಾಂಲೆಟ್ಟನೆಂಬ ದೊರೆ ಯಿದ್ದನು. ಆತನು ರೂಪವಂತನು. ಗುಣವಂತನು ವಿದ್ಯಾವಂತನು. ಆತನಿಗೆ ಗರ್‌ಟ್ರೂಡ್ ಎಂಬ ಹೆಂಡಿತಿಯೂ, ಕ್ಲಾಡಿಯಸ್ ಎಂಬ ತಮ್ಮನೂ ಇದ್ದರು. ಒಂದು ದಿನ ಅವನು ಮಧ್ಯಾಹ್ನದ ಸಮಯದಲ್ಲಿ ತೋಟದಲ್ಲಿ ಮಲಗಿ ನಿದ್ರಿಸುತ್ತಿರುವಾಗ ವಿಷವೇರಿ ಸತ್ತು ಹೋದನು. ಹಾವು ಕಡಿಯಿತೆಂದು ಸುದ್ದಿಯಿದ್ದರೂ, ಏನೋ ಮೋಸ ನಡೆದಿರ ಬಹುದು ಎಂದು ಅನೇಕರಿಗೆ ಅನುಮಾನವಿತ್ತು.

ಗಂಡ ಸತ್ತ ಕೆಲವು ದಿನಗಳೊಳಗಾಗಿ ಆ ರಾಣಿಯು ತನ್ನ ಮೈದುನನನ್ನೇ ಮದುವೆಯಾದಳು ಇದರಿಂದ ಪ್ರಜೆಗಳಿಗೆ ವ್ಯಥೆಯಾಗಿ, ಅವರಿಗೆ ಇದ್ದ ಅನುಮಾನವು ಇನ್ನೂ ಬಲವಾಯಿತು. ಈ ಅಕಾರ್ಯದಿಂದ ಯುವರಾಜನಾದ ಹ್ಯಾಂಲೆಟ್ಟನಿಗೆ ಬಹಳ ದುಃಖವಾಯಿತು. ಅವನಿಗೆ ದುಃಖವಾದಷ್ಟು ಇನ್ನಾರಿಗೂ ಆಗಲಿಲ್ಲ. ತಂದೆಯ ಮರಣದಿಂದ ಬಂದ ದುಃಖದ ಜೊತೆಗೆ ತಾಯಿಯ ಅಕಾರ್ಯದಿಂದ ಬಂದ ದುಃಖವೂ ಸೇರಿ ಅವನಿಗೆ ಮೊಂಕುಹಿಡಿಯಿತು.

ಒಂದು ದಿನ ಅವನಿಗೆ ಕಾವಲುಗಾರರ ಕಡೆಯಿಂದ ಒಂದು ವಿಚಿತ್ರದ ಸುದ್ದಿ ಬಂತು. ಅದು ನಿಜವೋ ಸುಳ್ಳೋ ಪರೀಕ್ಷಿಸಬೇಕೆಂದು ತಾನೇ ಹೊರಟನು. ಮಧ್ಯ ರಾತ್ರಿಯಲ್ಲಿ ಯುವರಾಜನು ಕಾವಲುಗಾರರು ಹೇಳಿದಂತೆ ಒಂದು ಭೂತವು ತನ್ನ ಕಡೆಗೆ ಬರುತ್ತಿರುವುದನ್ನು ಕಂಡನು. ಅದು ನೋಡುವುದಕ್ಕೆ ತನ್ನ ತಂದೆಯಂತೆಯೇ ಇದೆ. ಅದೇ ಗಡ್ಡಮೀಸೆಗಳು! ಅಡಿಯಿಂದ ಮುಡಿಯವರೆಗೆ ಧರಿಸಿದ್ದ ಕವಚವೂ ತಂದೆ ಯದೇ! ಅದೂ ಹ್ಯಾಂಲೆಟ್ಟನನ್ನು ಬಾ ಎಂದು ಸನ್ನೆಮಾಡಿತು. ಅದರ ದೈನ್ಯವನ್ನು ನೋಡಿ ತಡೆಯಲಾರದೆ ಧೈರ್ಯಗೊಂಡು ಹ್ಯಾಂಲೆಟ್ಟನು ಅದರ ಹಿಂದೆ ಹೋದನು.

ಭೂತವು ಅವನನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಯಿತು. ಅಲ್ಲಿ ತನ್ನ ತಮ್ಮನು ತನ್ನನ್ನು ಹೇಗೆ ನಿರ್ದಯನಾಗಿ ವಿಷಹಾಕಿ ಕೊಂದನು ಎಂಬುದನ್ನು ವಿಸ್ತಾರವಾಗಿ ಹೇಳಿತು. "ನನ್ನ ರಾಜ್ಯವನ್ನೂ ನಿನ್ನ ತಾಯಿಯನ್ನೂ ಅಪಹರಿಸು ವುದಕ್ಕೆ ಮಾಡಿದ ದುಷ್ಕೃತ್ಯವಿದು!" ಎಂದೂ ಹೇಳಿ "ಹ್ಯಾಂಲೆಟ್ಟ್! ನಿನಗೆ ನಿನ್ನ ತಂದೆಯ ಮೇಲೆ ಪ್ರೀತಿಯಿದ್ದುದೇ ನಿಜವಾಗಿದ್ದರೆ, ನೀನು ಈ ಸೇಡು ತೀರಿಸು ಆದರೆ




ಹ್ಯಾಂಲೆಟ್ಟನಿಗೆ ಅದೇ ಯೋಚನೆಯಾಗಿ ಹೋಯಿತು

ನಿನ್ನ ತಾಯಿಯ ಮೇಲೆ ಮಾತ್ರ ಕೈಯೆತ್ತಬೇಡ. ಅವಳ ಪಾಪವನ್ನು ದೇವರು ನೋಡಿ ಕೊಳ್ಳಲಿ" ಎಂದು ಹೇಳಿ ಮಾಯವಾಯಿತು. ಹ್ಯಾಂಲೆಟ್ಟನೂ ತನ್ನ ತಂದೆಯನ್ನು ಕೊಂದವನ ಮೇಲೆ ಹಗೆ ತೀರಿಸಿಕೊಳ್ಳುವುದಾಗಿ ಪ್ರತಿಜ್ಞೆಮಾಡಿಕೊಂಡನು.

ತಾಯಿಯ ದುರ್ನಡತೆ, ಚಿಕ್ಕಪ್ಪನ ಘಾತುಕತನ, ಪಿಶಾಚಿಯ ದರ್ಶನ ಇವೆಲ್ಲವೂ ಸೇರಿ ಹ್ಯಾಂಲೆಟ್ಟನಿಗೆ ಹುಚ್ಚು ಹಿಡಿದಂತಾಯಿತು. ಅದೇ ಸೋಗುಹಾಕಿ ಈ ಹೊಸ ರಾಜರಾಣಿಯರ ರಹಸ್ಯವನ್ನು ಭೇದಿಸಬೇಕೆಂದುಕೊಂಡು, ಅವನು ನಿಜವಾಗಿಯೂ ಹುಚ್ಚನೇ ಆಗಿ ಹೋದಂತೆ ನಟಿಸಲು ಆರಂಭಿಸಿದನು ವೇಷ, ಭಾಷೆಗಳೆಲ್ಲವೂ ಹುಚ್ಚ ನಂತಿರಲು ಆ ರಾಜರಾಣಿಯರು ಮೋಸಹೋದುದು ಏನಾಶ್ಚರ್ಯ!

ರಾಜರಾಣಿಯರು ಹ್ಯಾಂಲೆಟ್ಟನಿಗೆ ಬುದ್ಧಿ ಹೇಳಿ ಸರಿಮಾಡಲು ಯತ್ನಿಸಿದರು. ಹಬ್ಬವಾಗಲಿ ಹರಿದಿನವಾಗಿ ಅವನು ಒಂದೇ ಸಮನಾಗಿ ದುಃಖದುಡುಗೆಯಾದ ಕಪ್ಪು ಬಟ್ಟೆಗಳನ್ನೇ ಹಾಕಿಕೊಂಡು ತಿರುಗುತ್ತಿರುವುದು ಅವರಿಗೆ ಸಮಾಧಾನವಾಗಲಿಲ್ಲ. ಅವ ರೆಷ್ಟು ಹೇಳಿದರೂ ಅವನು ಕೇಳಲಿಲ್ಲ. ಜೊತೆಗೆ ಹುಚ್ಚಿನ ವೇಷವೂ ಬಂತು.

ರಾಣಿಗೆ ಆ ಹುಚ್ಚನ್ನು ಕಂಡು ವ್ಯಥೆಯಾಯಿತು. ಏನಿರಬಹುದು ಎಂದು ಪರೀ ಕ್ಷಿಸಿ ನೋಡಿದಳು. ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು. ಪೊಲೋನಿ ಯಸ್ಸ್ ಎಂಬ ಮಂತ್ರಿಯು "ಇದು ಪ್ರೇಮೋನ್ಮಾದ! ನನ್ನ ಮಗಳು ಒಫೇಲಿಯಾ ಮೇಲೆ ಅವನಿಗೆ ವಿಶ್ವಾಸವಿದೆ. ಅವನು ಈ ಕಾಗದವನ್ನು ಅವಳಿಗೆ ಬರೆದಿದ್ದ ಅವಳು ಓದುತ್ತಿದ್ದಳು. ನನ್ನ ಕಣ್ಣಿಗೆ ಅದು ಬಿತ್ತು. ಅದನ್ನು ಈಸಿಕೊಂಡು ತಂದಿದ್ದೇನೆ ಇದೋ" ಎಂದು ಒಂದು ಕಾಗದವನ್ನೂ ತೋರಿಸಿದನು. ಅದರಲ್ಲಿ ಹ್ಯಾಂಲೆಟ್ಟನು "ಸೂರ್ಯ ಚಂದ್ರರ ಸಾಕ್ಷಿಯಾಗಿಯೂ ನಾನು ನಿನ್ನನ್ನು ಪ್ರೀತಿಸುತ್ತೇನೆ. ನಂಬು" ಎಂದು ಬರೆದುಕೊಂಡಿದ್ದನು. ರಾಣಿಯು ಆ ಕಾಗದವನ್ನು ನೋಡಿ ಪೋಲೋನಿಯ ಸ್ಸನು ಹೇಳಿದಂತೆಯೇ ಇರಬಹುದು ಎಂದುಕೊಂಡಳು.

ಆದರೆ ಹ್ಯಾಂಲೆಟ್ಟನಿಗೆ ಹಿಡಿದಿದ್ದುದು ಮನೋವ್ಯಥೆ, ತಂದೆಯನ್ನು ಕೊಂದವ ನನ್ನು ಕೊಲ್ಲುವುದು ಹೇಗೆ? ಎಂಬ ಚಿಂತೆ! ಆ ಚಿಂತೆಯಲ್ಲಿ ತನ್ನ ಪ್ರೀತಿಪಾತ್ರಳಾದ ಒಫೇಲಿಯಾ ಕೂಡ ಅವನಿಗೆ ಬೇಕಾಗಲಿಲ್ಲ. ಆದರೂ ಒಂದೊಂದು ವೇಳೆ ಆ ದಿವ್ಯ ಸುಂದರಿಯನ್ನು ತಾನು ಪ್ರೀತಿಸುತ್ತಿದ್ದುದು, ಅವಳು ತನ್ನನ್ನು ಪ್ರೀತಿಸುತ್ತಿದ್ದುದು ನೆನೆ ಪಿಗೆ ಬರುವುದು. ಆಗ ಅವನಿಗೆ ಅಯ್ಯೋ! ಅವಳನ್ನು ತೊರೆದೆನಲ್ಲ ಎನ್ನಿಸುವುದು. ಅಂತಹ ಕಾಲದಲ್ಲಿ ಆ ವ್ಯಥೆಯನ್ನು ತಡೆಯಲಾರದೆ ಬರೆದಿದ್ದ ಪತ್ರವದು. ಆದರೆ ಹೆಣ್ಣಿನ ವ್ಯಥೆಯನ್ನು ಮುಯ್ಯಿನ ವ್ಯಥೆಯು ಮುಳುಗಿಸಿತ್ತು ಎಂಬುದು ಮಾತ್ರ ಯಾರಿಗೂ ತಿಳಿದಿರಲಿಲ್ಲ.




ನೀನು ಮಾಡಿದುದು ಪಾಪ ! ಕೂಡಲೇ ಆ ಹಾದಿಯನ್ನು ಬಿಡು. ಮತ್ತೆ ಸರಿಯಾಗು.

ಆ ಭೂತವು ಹೇಳಿದ್ದುದನ್ನು ಮರೆಯುವುದು ಅವನಿಗೆ ಸಾಧ್ಯವೇ ಆಗಲಿಲ್ಲ. ಹಗಲೂ ಇರುಳೂ ಅದನ್ನೇ ಕುರಿತು ಚಿಂತಿಸುವನು. ಒಂದೊಂದು ವೇಳೆ, ಸೈತಾನನು ತನ್ನ ತಂದೆಯಂತೆ ವೇಷಹಾಕಿಕೊಂಡು ಬಂದು ತನಗೆ ಇಲ್ಲದುದನ್ನೆಲ್ಲ ಹೇಳಿ ಮಾಡಿ ಪಾಪಮಾಡಿಸುತ್ತಿದೆಯೋ ಎನ್ನಿಸುವುದು. ಈ ಅನುಮಾನದಿಂದ ಅವನಿಗೆ "ಪ್ರತ್ಯಕ್ಷ ವಾದರೂ ಪ್ರಮಾಣಿಸಬೇಕು." ಎನ್ನಿಸಿತು.

ಆ ವೇಳೆಗೆ ರಾಜಧಾನಿಗೆ ಒಂದು ನಾಟಕದ ಕಂಪೆನಿಯವರು ಬಂದರು. ಅವರನ್ನು ಹಿಡಿದು ಹ್ಯಾಂಲೆಟ್ಟನು ಒಂದು ನಾಟಕವನ್ನು ಆಡಿಸಿದನು "ಒಳ್ಳೆಯ ದೊರೆಯೊಬ್ಬನು. ಅವನೇ ಇಂದ್ರಚಂದ್ರನೆಂದು ಹೊಗಳುತ್ತಿರುವ ಅವನ ಹೆಂಡಿತಿ, ಇಬ್ಬರೂ ಉದ್ಯಾನದಲ್ಲಿ ವಿಹರಿಸುತ್ತಿದ್ದಾರೆ ದೊರೆಯು ಆಯಾಸ ಪರಿಹಾರಕ್ಕಾಗಿ ಅಲ್ಲಿದ್ದ ಒಂದು ಕಲ್ಲಿನ ಮೇಲೆ ಮಲಗುತ್ತಾನೆ. ಗಾಢನಿದ್ರೆ ಬರುತ್ತದೆ. ಸಮಯವನ್ನು ಕಾದಿದ್ದ ಆ ದೊರೆಯ ತಮ್ಮನು ಬಂದು ಅವನ ಕಿವಿಯಲ್ಲಿ ವಿಷಮಯವಾದ ಮೂಲಿಕೆಯ ರಸವನ್ನು ಹಿಂಡು ತ್ತಾನೆ. ಅದು ದೇಹವನ್ನೆಲ್ಲ ಒಂದು ಗಳಿಗೆಯೊಳಗೆ ವ್ಯಾಪಿಸಿ ಅವನನ್ನು ಕೊಂದುಬಿಡು ತ್ತದೆ. 'ನೀನು ಸತ್ತರೆ ನಾನು ಗಂಡುಸರ ಮುಖವನ್ನೇ ನೋಡುವುದಿಲ್ಲ' ಎಂದು ಪ್ರಮಾಣಮಾಡಿದ್ದ ರಾಣಿಯು ಆ ಘಾತುಕನ ಕೈಹಿಡಿಯುತ್ತಾಳೆ" ಇದು ಆ ನಾಟಕದ ಕಥೆ.

ನಾಟಕದ ಕಥೆಗೂ ನಡೆದ ಕಥೆಗೂ ಬಹಳ ಹೋಲಿಕೆಯಿತ್ತು. ಪಾಪವನ್ನು ಮಾಡಿದವರು ಪಾಪಮಾಡುವವರನ್ನು ಕಂಡರೆ ಭೀತಿಪಡುವುದು ಲೋಕದ ವಾಡಿಕೆ. ಆದರಿಂದ ಈ ನಾಟಕದ ಕಥೆಯನ್ನು ಕಂಡರೆ ಕ್ಲಾಡಿಯಸ್ಸನು ಗಾಬರಿಯಾಗಬೇಕು. ಹಾಗೆ ಗಾಬರಿಯಾದರೆ ಭೂತವು ಹೇಳಿದುದು ನಿಜ ಇದೇ ಸರಿಯಾದ ಪರೀಕ್ಷೆಯೆಂದು ಹ್ಯಾಂಲೆಟ್ಟನು ನಿಶ್ಚಯಿಸಿಕೊಂಡನು.

ಈ ನಾಟಕವನ್ನು ಹೊಸರಾಜರಾಣಿಯರ ಎದುರಿನಲ್ಲಿ ಹ್ಯಾಂಲೆಟ್ಟನು ಆಡಿಸಿದನು. ಘಾತುಕನು ದೊರೆಯ ಕಿವಿಯಲ್ಲಿ ವಿಷಮೂಲಿಕೆಯ ರಸವನ್ನು ಹಿಂಡುವುದನ್ನು ಕಂಡ ಅರಸನಿಗೆ ತಾನು ಮಾಡಿದ್ದುದು ನೆನೆಪಾಯಿತು ಆ ಭಯಂಕರ ಸಂಗತಿಯು ಅವನ ಮನಸ್ಸನ್ನು ಕಲಕಿಬಿಟ್ಟಿತು. ಅಲ್ಲಿಂದ ಮುಂದೆ ನಾಟಕವನ್ನು ನೋಡಲಾರದೆ ಅವನು ಎದ್ದು ಹೊರಟುಹೋದನು. ಹ್ಯಾಂಲೆಟ್ಟನಿಗೆ ಭೂತದ ಮಾತು ನಿಜವೆಂದು ಗೊತ್ತಾ ಯಿತು ಹೊಸ ಅರಸನು ಹ್ಯಾಂಲೆಟ್ಟನ ಮೇಲೆ ಕೋಪಮಾಡಿಕೊಂಡು ಅವನಿಗೆ ವಿವೇಕ ಹೇಳಿ ಬಾರೆಂದು ಅವನ ತಾಯಿಯನ್ನು ಕಳುಹಿಸಿದನು. ಅವಳೂ ತನ್ನ ಮಗನ ಕಡೆ ಸೇರಿ, ಇಬ್ಬರೂ ತನಗೆ ದ್ರೋಹಮಾಡಿಯಾರೆಂದು ಹೆದರಿ, ಅವರೇನು ಮಾತನಾಡು ವರೋ ಕೇಳಿಬಾರೆಂದು ಒಬ್ಬನನ್ನು ಕಳುಹಿಸಿದ್ದನು.




ಒಫೇಲಿಯಳಿಗೆ ಹುಚ್ಚು ಹಿಡಿಯಿತು.

ಅಲ್ಲಿ ತಾಯಿಯು ಮಗನಿಗೆ ಬುದ್ಧಿ ಹೇಳುವುದಕ್ಕೆ ಬದಲು ತಾಯಿಗೇ ಮಗನು ಬುದ್ಧಿ ಹೇಳುವುದಕ್ಕೆ ಆರಂಭಿಸಿದನು. "ನೀನು ನನ್ನ ತಂದೆಗೆ ದ್ರೋಹಮಾಡಿದ್ದೀಯೆ !" ಎಂದು ದೂಷಿಸಿ, ಎದ್ದು ಹೋಗಬೇಕೆಂದುಕೊಂಡವಳನ್ನು ಕೈಹಿಡಿದು ಕುಳ್ಳಿರಿಸಿ ಕೊಂಡನು. ರಾಣಿಯು ಮಗನಿಗೆ ಹುಚ್ಚೆಂದು ನಂಬಿದ್ದಳಾಗಿ 'ಅಯ್ಯೋ' ಎಂದು ಕಿರಿಚಿಕೊಂಡಳು. ತೆರೆಯ ಮರೆಯಲ್ಲಿದ್ದವನೂ ಯಾರಾದರೂ ಬನ್ನಿ ಎಂದು ಕೂಗಿ ಕೊಂಡನು. ಅರಸನೇ ಅಲ್ಲಿರಬಹುದೆಂದು ಹ್ಯಾಂಲೆಟ್ಟನು ತನ್ನ ಕತ್ತಿಯಿಂದ ತಿವಿದು ತೆರೆಯ ಹಿಂದೆ ಇದ್ದವನನ್ನು ಕೊಂದನು ಶವವನ್ನು ಎಳೆದು ನೋಡಿದರೆ ಅವನು ಪೊಲೋನಿಯುಸ್, ಒಫೇಲಿಯಾ ತಂದೆ.

ಮಗನು ತಾಯಿಯನ್ನು ಬಹಳವಾಗಿ ನಿಂದಿಸಿದನು 'ಗಂಡನನ್ನು ಕೊಂದ ಘಾತಕ ನೊಂದಿಗೆ ನೀನು ಹೇಗೆ ಸಂಸಾರ ಮಾಡಿಕೊಂಡಿರುವೆ? ನನಗೆ ಹುಚ್ಚು ಇಲ್ಲ ಗಿಚ್ಚೂ ಇಲ್ಲ. ಇನ್ನೂ ಮುಂದೆ ಯಾದರೂ ನಾನು ಹೇಳುವಂತೆ ಕೇಳು. ಈ ಪಾಪಿಯನ್ನು ತೊರೆದು ಹಿಂದಿನ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿಕೊ" ಎಂದು ಹೇಳಿಕಳುಹಿಸಿದನು

ರಾಜನಿಗೆ ಹ್ಯಾಂಲೆಟ್ಟನ ಮೇಲೆ ಮತ್ಸರವು ಹುಟ್ಟಿತು. ಉಪಾಯವಾಗಿ ಅವ ನನ್ನು ಕೊಲ್ಲಿಸಬೇಕೆಂದುಕೊಂಡನು. "ಪೊಲೋನಿಯಸ್ಸನ ಕೊಲೆಮಾಡಿದನೆಂದು ಗದ್ದಲ ವಾಗುವುದು" ಎಂದು ರಾಣಿಗೆ ನೆಪಹೇಳಿ, ಅವನನ್ನು ಇನ್ನೊಬ್ಬ ಸಾಮಂತನ ಬಳಿಗೆ ಕಳುಹಿಸಿದನು. ಅವನಿಗೆ "ಏನಾದರೂ ಮಾಡಿ ಇವನನ್ನು ತೀರಿಸಿಬಿಡು" ಎಂದು ಗುಟ್ಟಾಗಿ ಪತ್ರವನ್ನೂ ಬರೆದಿದ್ದನು. ದಾರಿಯಲ್ಲಿ ಆ ಪತ್ರವು ಹ್ಯಾಂಲೆಟ್ಟನ ಕೈಗೆ ಸಿಕ್ಕಿತು. ಅದರಲ್ಲಿದ್ದ ತನ್ನ ಹೆಸರಿಗೆ ಬದಲಾಗಿ ಪತ್ರವನ್ನು ತರುವವರ ಹೆಸರನ್ನು ಬರೆದು ಹಾಗೆಯೇ ಇಟ್ಟುಬಿಟ್ಟನು. ಅಷ್ಟರಲ್ಲಿ ಕಡಲುಗಳ್ಳರು ಬಂದು ಇವರಿದ್ದ ಹಡಗಿನ ಮೇಲೆ ಬಿದ್ದರು ಹ್ಯಾಂಲೆಟ್ಟನು ಅವರೊಡನೆ ಕಾದಾಡುತ್ತ ಅವರ ಹಡಗಿಗೆ ನುಗ್ಗಿದನು. ಡೆನ್ಮಾರ್ಕಿನ ಹಡಗು ತಲೆತಪ್ಪಿಸಿಕೊಂಡು ಹೋಯಿತು ಕಡಲುಗಳ್ಳರು ಅವನ ಪರಾಕ್ರಮಕ್ಕೆ ಮೆಚ್ಚಿ ಅವನು ಯಾರೆಂಬುದನ್ನು ವಿಚಾರಿಸಿ ಗೌರವದಿಂದ ಅವನನ್ನು ಡೆನ್ಮಾರ್ಕಿಗೆ ತಂದು ಬಿಟ್ಟರು.

ಅವನು ರಾಜಧಾನಿಗೆ ಬಂದು ಅರಮನೆಗೆ ಬರುವ ವೇಳೆಗೆ ಒಫೇಲಿಯಾ ಶವವನ್ನು ಸಮಾಧಿಮಾಡಲು ಎಲ್ಲವೂ ಸಿದ್ಧವಾಗಿತ್ತು. ಅವಳಿಗೆ ತಂದೆಯು ಸತ್ತುದು ಕಾರಣ ವಾಗಿ ಹುಚ್ಚುಹಿಡಿದು ಹೋಗಿತ್ತು.

ಆ ಹುಚ್ಚಿನಲ್ಲಿ ಅವಳು ಹಾಡುಗಳನ್ನು ಹೇಳಿಕೊಂಡು ತಿರುಗುವಳು. ಸಿಕ್ಕಿ ಸಿಕ್ಕಿದ ಹೂಗಳನ್ನೆಲ್ಲ ಕೊಯ್ದುಕೊಂಡು ಕೈಗೆ ಸಿಕ್ಕಿದ ಸೊಪ್ಪುಸೆದೆಗಳನ್ನು ಹಾಕಿ ಅದನ್ನು ಸಿಕ್ಕಿದ ಕಡೆ ತೋರಿದ ಕಡೆ ಹಾಕಿ ಆನಂದಿಸುವಳು. ಕೈಗೆ ಸಿಕ್ಕಿದ ಹೂಗಳನ್ನೆಲ್ಲ ಮುಡಿ



ಸಮಾಧಿಯ ಹಳ್ಳದಲ್ಲಿಯೇ ಹ್ಯಾಂಲೆಟ್ಟನೂ ಲಯರ್ಟಿಸ್ಸನೂ ಹೋರಾಡಿದರು.

ಲಲ್ಲಿ ತುಂಬಿಕೊಂಡು ಅಲೆಯುತ್ತ ಆ ದಾರಿಯಲ್ಲಿ ಬಂದವರಿಗೆ ಒಂದಿಷ್ಟು ಕೊಟ್ಟು "ಇದನ್ನು ನಮ್ಮ ತಂದೆಯ ಸಮಾಧಿಗೆ ಇಟ್ಟುಬನ್ನಿ" ಎಂದು ಕೇಳಿಕೊಳ್ಳುವಳು.

ಹೀಗೆ ಅಲೆಯುತ್ತಿದ್ದ ಆಕೆಯನ್ನು ಕಂಡು ಎಲ್ಲರೂ ಮರುಗುವರು ದಿವ್ಯಸುಂದರಿಯಾದ ಹೆಣ್ಣು, ಮಾನಮರ್ಯಾದೆಗಳಿಂದ ಇದ್ದವಳು, ಹೀಗೆ ಹುಚ್ಚು ಹುಚ್ಚಾಗಿ ನಿಂತಲ್ಲಿ ನಿಲ್ಲದೆ ಅಲೆಯುತ್ತಿದ್ದರೆ ಯಾರು ನೋಡಿ ಸೈರಿಸಬಹುದು? ರಾಣಿಯಂತೂ ಅವಳಿಗಾಗಿ ಬಹಳ ವ್ಯಥೆಪಡುವಳು. ತನ್ನ ಸೊಸೆಯಾಗಬೇಕಾಗಿದ್ದವಳು, ಹ್ಯಾಂಲೆಟ್ಟನು ದೊರೆಯಾದರೆ ರಾಣಿಯಾಗಿ ತನ್ನಂತೆ ಶೋಭಿಸಬೇಕಾಗಿದ್ದವಳು, ಹೀಗೆ ಹುಚ್ಚು ಹಿಡಿದು ಅಲೆಯುತ್ತಿದ್ದರೆ ಅವಳಿಗೆ ಎಷ್ಟು ಸಂಕಟವಾಗಬೇಕು? ಅವಳೂ ಸಮಾಧಿಯ ಬಳಿಗೆ ಬಂದಿದ್ದಳು.

ಒಫೇಲಿಯಳು ಒಂದು ದಿನ ಹೂವಿನ ಹಾರವನ್ನು ಹಾಕಬೇಕೆಂದು ಒಂದ ಮರದ ಮೇಲೆ ಹತ್ತಿದಳು ಅವಳಿದ್ದ ಕೊಂಬೆಯು ಮುರಿದು ಬಿದ್ದು ಕೆಳಗೆ ಇದ್ದ ಕೊಳದಲ್ಲಿ ಅವಳು ಬಿದ್ದು ಮುಳುಗಿ ಹೋದಳು, ಅವಳ ಅಣ್ಣ ಲಯರ್ಟಿಸ್ಸಿನು ಸಮಾಧಿಯಲ್ಲಿಟ್ಟಿದ್ದ ಶವವನ್ನು ಕಟ್ಟಿಕೊಂಡು ಬಹುವಾಗಿ ಗೋಳಾಡುತ್ತ ಇರುವುದನ್ನು ಕಂಡು ಹ್ಯಾಂಲೆಟ್ಟನಿಗೂ ಹಿಂದಿನ ಪ್ರೇಮವು ಮತ್ತೆ ತಲೆದೋರಿತು ತಾನೂ ಬಹಳವಾಗಿ ಗೋಳಿಡುತ್ತ ಸಮಾಧಿಗೆ ಧುಮುಕಿದನು. ಅಲ್ಲಿ ಒಫೇಲಿಯಾ ಅಣ್ಣನು ಇವನನ್ನು ಕಂಡು, "ಪಾಪಿ! ನನ್ನ ತಂದೆಯನ್ನೂ ತಂಗಿಯನ್ನೂ ತಿಂದುಕೊಂಡ ರಾಕ್ಷಸ" ಎಂದು ಇವನ ಮೇಲೆ ಬಿದ್ದು ಹೋರಾಡಿದನು. ಅವರಿವರು ಬಂದು ಸಮಾಧಾನ ಮಾಡಿದರು.

ಕ್ಲಾಡಿಯಸ್ಸನು (ಹೊಸರಾಜ) ಇದನ್ನು ತಿಳಿದು ಹ್ಯಾಂಲೆಟ್ಟನನ್ನು ಕೊಲ್ಲುವುದಕ್ಕೆ ಇದೇ ಉಪಾಯವೆಂದು ಲಯರ್ಟಿಸ್ಸನನ್ನು ರೇಗಿಸಿದನು. "ಅವನನ್ನು ವಿನೋದಯುದ್ಧಕ್ಕೆಂದು ಕರೆದು ಈ ವಿಷಬೋಳಿದಿರುವ ಖಡ್ಗದಿಂದ ಹೊಡೆದ ಹಾಕು. ನಿನ್ನ ತಂದೆಯ ಕೊಲೆಗೆ ತಕ್ಕ ಪ್ರತೀಕಾರವಾಗುವುದು. ಏನು ಬಂದರೂ ನನಗಿರಲಿ" ಎಂದು ಪ್ರೇರಿಸಿದನು.

ಲಯರ್ಟಿಸ್ಸನಿಗೂ ತಂದೆಯನ್ನು ಕೊಂದವನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಆಶೆಯಾಯಿತು. ಅವನೂ ಒಪ್ಪಿದನು. ಅರಸನು ಹರಿತವಾದ ಕತ್ತಿಯೊಂದಕ್ಕೆ ವಿಷಬೋಳಿಸಿ ಅದನ್ನು ಗುಟ್ಟಾಗಿ ಲಯರ್ಟಿಸ್ಸನಿಗೆ ಕೊಟ್ಟನು ಲಯರ್ಟಿಸ್ಸನು "ವಿನೋದಕ್ಕಾಗಿ ಖಡ್ಗಯುದ್ಧದ ಆಟವಾಡೋಣ ಬಾ" ಎಂದು ಹ್ಯಾಂಲೆಟ್ಟನನ್ನು ಕರೆದನು. ಕೃತ್ರಿಮವಿದೆಯೆಂಬ ಸಂಶಯವೂ ಇಲ್ಲದ ಅವನು ಒಪ್ಪಿ ಹರಿತವಿಲ್ಲದ ಕತ್ತಿಯನ್ನು ತೆಗೆದುಕೊಂಡು ಬಂದನು. ರಾಜರಾಣಿಯರೂ ಇತರರ ದೊಡ್ಡಮನುಷ್ಯರೂ




ಹ್ಯಾಂಲೆಟ್ಟನು ವಿಷಬೋಳಿದಿದ್ದ ಕತ್ತಿಯಿಂದಲೇ ಕ್ಲಾಡಿಯಸ್ಸನನ್ನು ತಿವಿದು ಕೊಂದನು.

ಈ ಯುದ್ಧವನ್ನು ನೋಡುವುದಕ್ಕೆ ಬಂದರು. ಮೊದಮೊದಲು ಲಯರ್ಟೆಸ್ಸನು ಸೋತಂತೆ ನಟಿಸಿದನು. ಹ್ಯಾಂಲೆಟ್ಟನ ಕೈ ಬಲವಾಯಿತು. ದೊರೆಯು ಯುವರಾಜನು ಗೆಲ್ಲುವನು ಎಂದು ಬಹುಸಂತೋಷವನ್ನು ನಟಿಸಿದನು. "ಹ್ಯಾಂಲೆಟ್ಟನೇ ಗೆಲ್ಲುವುದು. ಅಲ್ಲವೆನ್ನುವವರು ಯಾರು? ಮುಂದೆ ಬನ್ನಿ" ಎಂದು ಸೈಕಟ್ಟುವನು. ರಾಣಿಯೂ ಮಗನು ಗೆಲ್ಲುವನೆಂದು ಬಹುಸಂತೋಷವಾಗಿದ್ದಳು. ದೊರೆಯು ಒಂದುವೇಳೆ ಹ್ಯಾಂಲೆಟ್ಟನೇ ಗೆದ್ದು ಬಿಟ್ಟರೆ ಎಂದು ಒಳಗೊಳಗೆ ಹೆದರಿ ವಿಷಮಿಶ್ರವಾದ ಪಾನಕವನ್ನು ತರಿಸಿ ಇಟ್ಟಿದ್ದನು. ಗೆದ್ದು ಬಂದ ಹ್ಯಾಂಲೆಟ್ಟನಿಗೆ "ಪಾಪ! ಆಯಾಸಪಟ್ಟಿದ್ದೀಯೆ!" ಎಂದು ಆ ವಿಷಪಾನಕವನ್ನು ಕುಡಿಸುವುದು. ಹೇಗಾದರೂ ಆ ದಿನ ಹ್ಯಾಂಲೆಟ್ಟನು ಸಾಯುವಂತೆ ಮಾಡುವುದು ಎಂದು ಅವನ ಎಣಿಕೆ.

ಹೀಗಾಗುತ್ತಿರುವಾಗ ಲಯರ್ಟೆಸ್ಸನು ತನ್ನ ಕತ್ತಿಯಿಂದ ಒಂದೆರಡು ಸಲ ಹ್ಯಾಂಲೆಟ್ಟನನ್ನು ನಿಜವಾಗಿಯೂ ತಿವಿದು ಘಾತಿಸಿದನು. ತೀವ್ರವಾದ ವೇದನೆಯಿಂದ ರೇಗಿ ಹ್ಯಾಂಲೆಟ್ಟನೂ ಅದೇ ಕತ್ತಿಯನ್ನು ಕಿತ್ತುಕೊಂಡು ಅದರಿಂದಲೇ ಅವನನ್ನೂ ಘಾತಿಸಿಬಿಟ್ಟನು. ಇಷ್ಟರಲ್ಲಿ ದೊರೆಯು ಹ್ಯಾಂಲೆಟ್ಟನಿಗೆಂದು ಸಿದ್ಧಪಡಿಸಿದ್ದ ವಿಷ ಪಾನಕವನ್ನು ಕುಡಿದು ರಾಣಿಯು ಕುಳಿತು ಕುಳಿತಿದ್ದ ಹಾಗೇ ಚೀರಿ ಪ್ರಾಣಬಿಟ್ಟಳು. ಲಯರ್ಟೆಸ್ಸನು ಘಾಯದಿಂದ ಇನ್ನು ತಾನು ಉಳಿಯುವಹಾಗಿಲ್ಲವೆಂದು ಗೊತ್ತಾಗುತ್ತಲೂ ದೊರೆಯು ಮಾಡಿದ ದ್ರೋಹವನ್ನು ಹೇಳಿಬಿಟ್ಟನು.

ಹ್ಯಾಂಲೆಟ್ಟನು ರೇಗಿ ಮೇಲೆ ಬಿದ್ದು ಕ್ಲಾಡಿಯಸ್ಸನನ್ನು ಕೊಂದನು

ಇನ್ನು ಕೊಂಚ ಹೊತ್ತಿನೊಳಗಾಗಿ ತಾನೂ ತೀರಿಕೊಂಡನು



## ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚಕ್ರಬಂಧದ ಕಾಗದವನ್ನು ಹರಿದುಕೊಂಡು ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕುದು.

೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕುದು.

೩. ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರ ಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು.

೪. ಮೊದಲನೆಯ ಬಹುಮಾನ ಎರಡುರೂಪಾಯಿ. ಎರಡನೆಯ ಬಹುಮಾನ ಒಂದು ರೂಪಾಯಿ. ಮೂರನೆಯ ಬಹುಮಾನ ಎಂಟಾಣೆ. ನಾಲ್ಕನೆಯ ಬಹುಮಾನ :- ಪುಸ್ತಕದ ಬಹುಮಾನ ೨೦

೫. ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕುದು.

೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೧೫ನೆಯ ತಾರೀಖಿನೊಳಗೆ ಬರಬೇಕು.

## ಚೌಕಬಂಧ ಸ್ಪರ್ಧೆ

೧—೨—೩ ತಾವರೆ
೪—೫—೬ ದಯೆ
೭—೮ ಯುದ್ಧ
೯—೧೦ ಮನುಷ್ಯ
೧೪—೧೫ ಸನ್ಯಾಸಿ
೧—೮ ಚೂರು
೨—೫—೧೨—೧೫ ಬೆಂಗಾಡು
೧೩—೧೦—೬ ಕೊನೆಯ ಗತಿ.

| | | | | |
|---|---|---|---|---|
| | ೧ | ೨ | ೩ | |
| ೪ | | ೫ | | ೬ |
| ೭ | ೮ | | ೯ | ೧೦ |
| ೧೧ | | ೧೨ | | ೧೩ |
| | ೧೪ | ೧೫ | ೧೬ | |




ಬದುಕಿರುವ ಗಿಡದಲ್ಲಿ ಹೊಸ ಚಿಗುರು ಹುಟ್ಟುವುದು ಹಣ್ಣೆಲೆಯು ಉದುರುವುದು ಎರಡೂ ಉಂಟಲ್ಲವೆ? ಹಾಗೆ ಹೊಸದು ಬರುವುದು ಹಳೆದು ಓಡುವುದು ಇವೆರಡೂ ಸೃಷ್ಟಿಯ ನಿಯಮ. ಅಂತೆಯೇ ಹಳೆಯವರ್ಷವು ಮುಗಿದು ಹೊಸವರ್ಷವು ಬಂದಿತು.

ನಾನೂ ಬಹಳ ಯೋಚನೆ ಮಾಡಿದೆ. ಹೋದ ವರ್ಷದಂತೆ ಈ ವರ್ಷವೂ ಅಣ್ಣನ ಮಾತುಗಳಲ್ಲಿ ಯಾವುದಾದರೂ ಒಂದು ವಿಷಯವನ್ನು ಕುರಿತು ಬರೆಯುತ್ತ ಹೋಗಬೇಕೆಂದು ಎನ್ನಿಸಿತು ಈಗಿನ ಕಾಲವನ್ನು ಎಲ್ಲರೂ ವಿಜ್ಞಾನದ ಯುಗವೆನ್ನುತ್ತಾರೆ. ಹಾಗೆಂದರೇನು? ಎಂಬುದನ್ನು ಹೇಳೋಣ ಎನ್ನಿಸಿತು. ಹೇಳೋಣ ಎಂದು ಹೊರಟದ್ದೇನೆ.

ಮನುಷ್ಯನು ತನ್ನ ಸುತ್ತಲೂ ಇರುವ ಪದಾರ್ಥಗಳನ್ನು ತಿಳಿದುಕೊಳ್ಳಬೇಕೆಂದು ಬಹುಕಾಲದಿಂದಲೂ ಯತ್ನಿಸುತ್ತಿದ್ದಾನೆ. ಅದರಂತೆ ಈಗಲೂ ಯತ್ನಮಾಡುತ್ತಿದ್ದಾನೆ. ನೀನೂ ಕೂಡ, ಗಿಡವೆಲ್ಲಿಂದ ಬಂತು? ಹೂವು ಏಕೆ ಹುಟ್ಟುತ್ತದೆ? ಸೂರ್ಯನು ಸಂಜೆಯಾದರೆ ಎಲ್ಲಿಗೆ ಹೋಗುತ್ತಾನೆ? ಎಂದು ಮೊದಲಾಗಿ ಕೇಳುವುದಿಲ್ಲವೆ? ಹಾಗೆಯೇ ಬುದ್ಧಿವಂತರು ಅನೇಕ ತರವಾಗಿ ಪ್ರಶ್ನೆಗಳನ್ನು ಹಾಕಿಕೊಂಡು ಅವಕ್ಕೆ ಉತ್ತರವನ್ನು ಹುಡುಕುತ್ತಿದ್ದಾರೆ. ಅದರ ಫಲವಾಗಿ ಹೊಸ ಹೊಸ ಸಂಗತಿಗಳು ಎಷ್ಟೋ ತಿಳಿದು ಬಂದಿವೆ. ಅದರಿಂದ ಪ್ರಪಂಚಕ್ಕೆ ಅನುಕೂಲವೂ ಆಗಿದೆ ಪ್ರತಿಕೂಲವೂ ಆಗಿದೆ.

ಈ ವಿಜ್ಞಾನಯುಗದಲ್ಲಿ ಮನುಷ್ಯನು ಬುದ್ಧಿಯನ್ನು ಉಪಯೋಗಿಸುವುದರ ಫಲವಾಗಿ ಯಂತ್ರಗಳು ಬಂದಿವೆ ಹಾಲು ಕರೆಯುವುದು, ಮೊಸರು ಕಡೆಯುವುದು ಮೊದಲಾದ ಸಣ್ಣಪುಟ್ಟ ಕೆಲಸಗಳಿಂದ ಹಿಡಿದು ನಲವತ್ತಂಕಿ ಐವತ್ತಂಕಿಯ ಲೆಕ್ಕಗಳನ್ನು ಮಾಡುವ ಕಷ್ಟದ ಕೆಲಸಗಳ ವರೆಗೆ ಎಲ್ಲ ಕೆಲಸಗಳನೂ ಮಾಡುವ ಯಂತ್ರಗಳು ಹುಟ್ಟಿವೆ. ಹಾಕಿಕೊಳ್ಳುವ ಬಟ್ಟೆ ತಿನ್ನುವ ಆಹಾರ, ಕುಡಿಯುವ ನೀರು, ರಾತ್ರಿಯ

ದೀಪ, ಇವೆಲ್ಲಕ್ಕೂ ಯಂತ್ರಗಳ ಸಂಬಂಧವಿದೆ. ಅದರಿಂದ ಇದನ್ನು ಯಂತ್ರಯುಗ ಎಂದೂ ಕರೆಯುತ್ತಾರೆ.

ವಿಜ್ಞಾನ ಯುಗವು ಗುಟ್ಟನ್ನು ರಟ್ಟುಮಾಡಿ ಉಪಯೋಗಿಸಿಕೊಳ್ಳುವ ಯುಗ. ಇದುವರೆಗೆ ಆಕಾಶದಲ್ಲಿ ಹಾರುವ ಗುಟ್ಟು ಹಕ್ಕಿಗೆ ಮಾತ್ರ ತಿಳಿದಿತ್ತು. ಸುಮಾರು ಇನ್ನೂರು ವರ್ಷ ಶ್ರಮಪಟ್ಟು ಮನುಷ್ಯನು ಆ ಗುಟ್ಟನ್ನು ಭೇದಿಸಿದನು. ಆ ಗುಟ್ಟು ತಿಳಿಯುವುದಕ್ಕೆ ಎಷ್ಟೋಜನರು ಬಲಿಯಾದರು. ಎಷ್ಟೋ ಕೋಟಿಗಟ್ಟಲೆ ಹಣವು ಖರ್ಚಾಯಿತು. ಕೊನೆಗೆ ಮನುಷ್ಯನು ಅದನ್ನು ಸಾಧಿಸಿದನು. ಈಗ ಮನುಷ್ಯನು ಹಕ್ಕಿಗಳಂತೆ ಲೀಲಾಜಾಲವಾಗಿ ಬೇಕೆಂದೆಡೆಗೆ ಹಾರಿಹೋಗಬಲ್ಲ ವಿಮಾನಗಳನ್ನು ಕಟ್ಟಿದ್ದಾನೆ. ಅದರಲ್ಲಿ ಹತ್ತಿಪ್ಪತ್ತು ಜನರು ಕುಳಿತು ಗಂಟೆಗೆ ೨೦೦-೩೦೦ ಮೈಲಿಗಳಂತೆ ದೇಶದಿಂದ ದೇಶಕ್ಕೆ ಕುಡಿದು ನೀರು ಅಲ್ಲಾಡದಂತೆ ಹೋಗಿಬರಬಹುದು. ಬೆಟ್ಟಗಳನ್ನು ಹತ್ತಬೇಕಾದರೆ ನಮಗೆ ಎಷ್ಟು ಶ್ರಮ! ಈ ವಿಮಾನಗಳನ್ನು ಉಪಯೋಗಿಸಿದರೆ ಒಂದುಗಂಟೆಯೊಳಗಾಗಿ ಬೇಕಾದರೆ ಹಿಮವತ್ಪರ್ವತವನ್ನೂ ಹತ್ತಿಬಿಡಬಹುದು

ಇದಿಷ್ಟೂ ಅನುಕೂಲ. ವಿಮಾನವು ಬೇಕೆನ್ನುವಾಗ ಮನಸ್ಸು ಹೇಳುವ ಕಥೆ ಅದೇ ಬೇಡವೆಂದಾಗ ಮನಸ್ಸು ಏನೆನ್ನುವುದು ಬಲ್ಲೆಯಾ? ‘ ಅಯ್ಯೊ ಹಾಳು ವಿಮಾನ ಅದೊಂದು ಮೃತ್ಯು. ಈಗ ಅದರಲ್ಲಿ ಬಾಂಬುಗಳನ್ನು ತುಂಬಿ ಯುದ್ಧಕ್ಕೆ ಕಳುಹಿಸುವರು. ಆಗ ಗೊತ್ತೆ? ಹತ್ತುನಿಮಿಷದೊಳಗೆ ಪ್ಯಾರಿಸ್ ಲಂಡನ್ ಮೊದಲಾದ ಒಂದು ಕೋಟಿ, ಒಂದೂವರೆ ಕೋಟಿ ಜನರಿರುವ ಮಹಾನಗರಗಳನ್ನು ಒಂದಿಷ್ಟು ಗುರುತೂ ಇಲ್ಲದಂತೆ ನಾಶಮಾಡಿಬಿಡುವುದು ’ ಎನ್ನುವುದು. ಅದರಿಂದ ನೀನು ಒಂದನ್ನು ಮಿತಿ ಮೀರಿ ಹೋಗಗಳಲೂ ಬೇಡ ತೆಗಳಲೂ ಬೇಡ.

ಅದಿರಲಿ ಈಗ ಈ ವಿಜ್ಞಾನಯುಗದ ಪರಿಚಯಕ್ಕೆ ಬೇಕಾದ ಹಲವು ಅಂಶಗಳನ್ನು ನಿನಗೆ ಒಂದೊಂದು ಕಥೆಯಾಗಿ ಅಣ್ಣನ ಮಾತಿನಲ್ಲಿ ಬರೆಯುವೆನು. ಅವೆಲ್ಲವೂ ವಿಜ್ಞಾನವೆಂಬ ಗಡಿಯಾರದ ಹಲವು ಚಕ್ರಗಳಂತೆ. ಅದರಿಂದ ಮನಸ್ಸಿಟ್ಟು ಓದು.

ಷೇಕ್ಸ್‌ಪಿಯರನ ಕಥೆಗಳು ನಿನಗೆ ಏನೆನ್ನಿಸಿದುವು? ಚೆನ್ನಾಗಿವೆಯೆ? ಈ ಸಲ ಚೌಕಬಂಧ ಸ್ಪರ್ಧೆಯನ್ನು ನಾನೂ ಮಾಡಿದ್ದೇನೆ. ನೀನು ಸ್ಪರ್ಧೆಗೆ ನಿಂತು ಗೆಲ್ಲಬೇಕು. ಈ ಕಾಲದಲ್ಲಿ ನೀನು ಮುಂದೋ ನಾನು ಮುಂದೋ ಎಂದು ಹುರುಡಿನಿಂದ ಓಡುತ್ತಿರಬೇಕು. ಆ ಹುರುಡು, ಹುರುಪು, ಈಗಿನಿಂದ ಹುಡುಗರಿಗೆ ಬರಲಿ ಎಂದು ಈ ಹೊಸ ವರ್ಷದಿಂದ ನಾನೂ ಆರಂಭಿಸಿದ್ದೇನೆ. ಅದರ ಸಂಪೂರ್ಣ ಉಪಯೋಗವನ್ನು ಪಡೆದುಕೊಳ್ಳುವುದು ನಿನ್ನ ಕೈಯಲ್ಲಿದೆ.

ನನ್ನಿಂದ ಇದು ಸಾಧ್ಯ ಎಂದು ನಗುತ್ತ ಹೊರಡು, ಎಲ್ಲವೂ ಸಾಧ್ಯವೇ ಆಗುವುದು.

ಇತಿ, ಅಣ್ಣ—

## ವಿಶೇಷಗಳೂ—ವಿಚಿತ್ರಗಳೂ

ರೋಗಿಗಳಿಗೆ ಶಸ್ತ್ರಚಿಕಿತ್ಸೆ ನಡೆಸಬೇಕಾದಾಗ (ಕುಯ್ಯಬೇಕಾದಾಗ) ಪುರಾತನ ಕಾಲದಲ್ಲಿ ಮದ್ಯ, ಮೂಲಿಕೆಗಳ ರಸಗಳನ್ನು ಕೊಟ್ಟು ಜ್ಞಾನ ತಪ್ಪಿಸುತ್ತಿದ್ದರು. ಈಜಿಪ್ಟಿನ ವೈದ್ಯರು (೬೦೦೦ ವರ್ಷಗಳ ಹಿಂದಿನವರು) ತಲೆಯಲ್ಲಿ ಒಂದು ಕಡೆ ಗುರುತಿಟ್ಟು ಹೊಡೆದು ಜ್ಞಾನತಪ್ಪಿಸುತ್ತಿದ್ದರಂತೆ.

o o o o

ನಾವು ಉಸಿರಾಡುವ ಗಾಳಿಯಲ್ಲಿ ಆಕ್ಸಿಜನ್ ಎಂಬ ಒಂದು ವಾಯುವಿರುತ್ತದೆ. ಇದು ಗಾಳಿಯಲ್ಲಿ ಎಷ್ಟಿರಬೇಕೋ ಅಷ್ಟು ಇಲ್ಲದಿದ್ದರೆ ಬುದ್ಧಿಯು ಕೆಟ್ಟುಹೋಗುತ್ತದೆಯಂತೆ! ಒಬ್ಬ ವಿದ್ಯಾವಂತನು ಆಕ್ಸಿಜನ್ ಕಡಿಮೆಯಿದ್ದ ಕಾಲದಲ್ಲಿ ನಾಲ್ಕನ್ನು ನಾಲ್ಕರಿಂದ ಗುಣಿಸಿದರೆ ಹನ್ನೆರಡು ಆಗುವುದು ಎಂದು ಜಗಳ ಕಾದನಂತೆ

o o o o

ಕ್ಯಾಲಿಫೋರ್ನಿಯದಲ್ಲಿ ಎಣ್ಣೆಯ ಬಾವಿಗಳಿವೆ. ಅವುಗಳಲ್ಲಿ ಬಹಳ ಆಳವಾದುದು ೧೧೦೦೦ ಅಡಿ ಕೆಳಗಿದೆ ಎಂದರೆ ೨ ಮೈಲಿಗಿಂತ ಕೊಂಚ ಹೆಚ್ಚು.

o o o o

ಬಿಳಿಯ ಬಣ್ಣದ ಮೊಲ, ಬೆಕ್ಕು ಮೊದಲಾದ ಪ್ರಾಣಿಗಳಿಗೆ ಕಣ್ಣು ಚೆನ್ನಾಗಿ ಕಾಣಿಸುವುದಿಲ್ಲ: ಕಿವಿಯು ಚೆನ್ನಾಗಿ ಕೇಳಿಸುವುದಿಲ್ಲ.

o o o o o o

ಚಳಿಯು ಹೆಚ್ಚಾದರೆ ಗಿಡಗಳು ಸತ್ತುಹೋಗುತ್ತವೆ ಗಿಡಗಳೆಲ್ಲ ಆಗಿರುವುದು ಸಣ್ಣ ಸಣ್ಣ ಚೀಲಗಳಂತಿರುವ ಪದಾರ್ಥಗಳಿಂದ ಆ ಚೀಲವೊಂದೊಂದರಲ್ಲೂ ನೀರಿದೆ. ಆ ನೀರು ಚಳಿಯು ಹೆಚ್ಚಾದಾಗ ಹೆಪ್ಪುಕಟ್ಟಿಕೊಂಡು ಗಟ್ಟಿಯಾಗುವುದು. ಆಗ ಅದಕ್ಕೆ ಹೆಚ್ಚು ಜಾಗವು ಬೇಕಾಗುವುದು ಅದು ಹಿಗ್ಗಿದಾಗ ಆ ಚೀಲವು ಫಟ್ಟನೆ ಒಡೆದು ಹೋಗುವುದು: ಗಿಡವು ಸಾಯುವುದು.

o o o o o

ಹಳೆಯದಾದ ಮೇಲೆ ಸಿನೀಮಾ ಫಿಲ್ಮುಗಳಿಂದ ಬೆಳ್ಳಿಯನ್ನು ತೆಗೆಯುತ್ತಾರೆ. ಸುಮಾರು ೨೫೦ ಅಡಿ ಫಿಲ್ಮಿನಿಂದ ಸುಮಾರು ೫ ರೂಪಾಯಿ ತೂಕ ಬೆಳ್ಳಿಯು ಬರುವುದಂತೆ

o o o o

ಮೀನಿನ ಕಿವಿಯಲ್ಲಿ ನೋಡಿದರೆ ಅದರ ವಯಸ್ಸೆಷ್ಟು ಎಂಬುದು ತಿಳಿಯುವುದಂತೆ!

ಮೀನುಗಳಲ್ಲಿ ಒಂದು ಜಾತಿಯಿದೆ. ಅದಕ್ಕೆ ಎಲೆಕ್ಟ್ರಿಕ್ ಈಲ್ ಎಂದು ಹೆಸರು. ಅವುಗಳಲ್ಲಿ ದೊಡ್ಡ ದೊಡ್ಡವು ಒಬ್ಬ ಮನುಷ್ಯನಿಗೆ ಹೊಡೆದರೆ ಅವನು ಆ ಎಲೆಕ್ಟ್ರಿಸಿಟಿಯ ಷಾಕಿನ ಜೋರನ್ನು ತಡೆಯಲಾರದೆ ಸತ್ತುಹೋಗುವನಂತೆ !

o o o o

ಚಂದ್ರನಲ್ಲಿರುವ ಪರ್ವತಗಳು ಸುಮಾರು ೨೫೦೦೦ ಅಡಿ ಎತ್ತರವಾಗಿವೆಯೆಂದೂ ಅಲ್ಲಿರುವ ಹಳ್ಳಗಳು ೨೪೦೦ ಅಡಿ ಆಳವಾಗಿವೆಯೆಂದೂ ವಿದ್ವಾಂಸರು ಊಹಿಸಿದ್ದಾರೆ.

o o o o o o

ಜೇಡರ ಹುಳುಗಳಲ್ಲಿ ಹೆಣ್ಣು ಹುಳುವು ಕಟ್ಟುವ ಗೂಡು (ಬಲೆ) ಹೆಚ್ಚು ವಿಸ್ತಾರ ವಾಗಿಯೂ ಬಲವಾಗಿಯೂ ಇರುವುದು

o o o o

ಅಮೇರಿಕದಲ್ಲಿ ಗಂಡುಸರ ಸರಾಸರಿ ಎತ್ತರವು ಐದು ಅಡಿ ಎಂಟು ಇಂಚು ಮಾತ್ರ.

o o o o o o

ಹಾವು ಮೊದಲಾದ ವಿಷಜಂತುಗಳ ವಿಷವು ಆ ಜಾತಿಯನ್ನು ಕೊಲ್ಲುವುದಿಲ್ಲ. ಆದರೆ ಚೇಳಿನ ಜಾತಿ ಮಾತ್ರ ಹಾಗಲ್ಲ. ಒಂದು ಚೇಳು ಇನ್ನೊಂದು ಚೇಳನ್ನು ಕುಟು ಕಿದರೆ ಕ.ಟುಕಿಸಿಕೊಂಡ ಚೇಳು ಸತ್ತುಹೋಗುವುದು.

o o o o o o

ಮನುಷ್ಯ ದೇಹದಲ್ಲಿ ಸುಮಾರು ಆರರಲ್ಲಿ ಐದುಪಾಲು ಇದ್ದಲು ಮತ್ತು ನೀರು ಸುಣ್ಣ, ರಂಜಕ, ಉಪ್ಪು, ಕಬ್ಬಿಣ, ಸಕ್ಕರೆ, ಗಂಧಕ, ಪೊಟಾಸಿಯಂ, ಮ್ಯಾಗ್ನೀ ಸಿಯಂ, ಫ್ಲೋರಿನ್, ನೈಟ್ರೊಜನ್, ಅಯೋಡಿನ್ ಇವೆಲ್ಲ ಸೇರಿ ಒಂದುಪಾಲು.

o o o o

ಯುಗೋಸ್ಲೇವಿಯದಲ್ಲಿ ಒಂದು ಸರೋವರವಿದೆ. ಅದರಲ್ಲಿ ಒಂದು ಜಾತಿಯ ಮೀನಿದೆ. ಅದರಿಂದ ಉಗುರಿಗೆ ಹಾಕುವ ಪಾಲಿಷ್ ತಯಾರಾಗುತ್ತದೆ. ಆ ಮೀನು ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲ.

o o o o o o

ಈಗ ಪ್ರಪಂಚದಲ್ಲಿರುವ ವಜ್ರಗಳನ್ನೆಲ್ಲ ಸೇರಿಸಿ ಬೆಲೆ ಕಟ್ಟಿದರೆ ಅದು ೨೨೦೦೦ ಕೋಟಿ ರೂಪಾಯಾಗುವುದಂತೆ.

o o o o

ಕ್ರಿಮಿಕೀಟಗಳಿಗೂ ಒಂದು ಭಾಷೆಯಿದೆಯಂತೆ.

o o o o o o

ದಕ್ಷಿಣ ಪೆಸಿಫಿಕ್ ಸಾಗರದಲ್ಲಿ ಚಿಪ್ಪಿನ ಮೀನಿನ ಜಾತಿಯೊಂದಿದೆ. ಅದರ ಚಿಪ್ಪನ್ನು ಅಲ್ಲಿನವರು ಸ್ನಾನದ ಕಡಾಯಿ ಆಗಿ ಉಪಯೋಗಿಸುವರಂತೆ!.

ಮಕ್ಕಳ ಪುಸ್ತಕ—



ಸಾವಿತ್ರಿ

ಚಿತ್ರಕಾರರು:—ಚಂ. ರಾಮರಾವು

"ಭಾರತಿ"ಯ ವಿಶ್ವಾಸದಿಂದ

Printed at the Makkala Pustaka Press, Bangalore City




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ|| — ಆಷಾಢ - ಜುಲೈ ೧೯೩೫ | ಪುಸ್ತಕ ೨

# ಆಟದ ಬೊಂಬೆ

ಕೆ. ಶ್ರೀಕಂಠೇಶ್ವರ

ಕೈಹಿಡಿದು ಕುಣಿ
ಮಾತು ಬರದ ಗಿಣಿ
ಬಂತು ನನ್ನ ಮುದ್ದು
ಕಾಲು ಗೆಜ್ಜೆ ಸದ್ದು

ಬೀಳಬೇಡ ಬೊಂಬೆ
ನಿನ್ನ ಕೇಳಿಕೊಂಬೆ
ಕುಣಿದ ಮೇಲೆ ಅಡಿಗೆ
ಮಾಡಿಯಿಡುವೆ ನಿನಗೆ

ಊಟ ಮುಗಿಯೆ ಗದ್ದೆ।
ಮಾಡಬಹುದು ನಿದ್ದೆ!
ಮೊಂಡಿ ಹಾಕಬೇಡ
ಚಂಡಿಯಾಗಬೇಡ

ಹಾಗೆ! ಮುದ್ದು ಮಣಿ
ಥಕ್ಕೆ ಥೈನೆ ಕುಣಿ

## ಮಾಡುವುದಕ್ಕೊಂದು ಕೆಲಸ

### ವಾಯುವಿಮಾನ-ನಿಂತು ಕುಣಿಯುವ ಬಟ್ಟೆ




ಚೌಕವಾಗಿರುವ ಒಂದು ಕಾಗದವನ್ನು ತೆಗೆದುಕೊಂಡು ಅದಕ್ಕೆ ಎ. ಬಿ ಸಿ. ಡಿ. ಎಂದು ಗುರ್ತುಮಾಡಿ ಅದನ್ನು ಒಂದನೇ ಚಿತ್ರದಲ್ಲಿರುವಂತೆ ಮೂಲೆಯ ಮೇಲೆ ಮಡಿಸು ಎರಡು ಮಡಕೆಗಳೂ ಸೇರುವ ಕಡೆಗೆ ಓ ಎಂದು ಗುರ್ತಿಡು.

ಅದನ್ನು ಎರಡನೇ ಚಿತ್ರದಲ್ಲಿರುವಂತೆ ಮಡಿಸಿಕೊಂಡು, ಓ ಎಂಬಲ್ಲಿ ಕಾಗದವನ್ನು ಹಿಡಿದುಕೊಂಡು ಬಿ ಮೂಲೆಯು ಏ ಮೂಲೆಯೊಡನೆ ಡಿ ಮೂಲೆಯು ಸಿ ಮೂಲೆಯೊಡನೆ ಸೇರುವಂತೆ ಮಡಿಸಿ ಮೂರನೆಯ ಚಿತ್ರದಂತೆ ಮಾಡು.

ಅಲ್ಲಿಂದ ಮುಂದಕ್ಕೆ ಕಾಗದವನ್ನು ತಲೆಕೆಳಗುಮಾಡಿ ಮೇಲೆ ಇರುವ ಓ ಮೂಲೆಗೆ ಬಿ. ಸಿ. ಮೂಲೆಗಳನ್ನು ಸೇರಿಸು (ಚಿತ್ರ ನಾಲ್ಕು) ಆಗ ಇ ಎಫ್ ಎಂಬ ಇನ್ನೆರಡು ಮೂಲೆಗಳೂ ಬರುವುವು. ಅನಂತರ ಓ ಮೂಲೆಯ ಎದುರು ಮೂಲೆಗೆ ಪಿ. ಎಂದು ಹೆಸರಿಟ್ಟು ಬಿ. ಸಿ. ಮೂಲೆಗಳನ್ನು ಅರ್ಧಕ್ಕೆ ಮಡಿಸಿ ಪಿ. ಮೂಲೆಗೆ ಸೇರಿಸು (ಚಿತ್ರ ಐದು)

ಅನಂತರ ಇ-ಪಿ-ಎಫ್-ಪಿ ಎಂಬ ಅಂಚುಗಳನ್ನು ಓ-ಪಿ-ರೇಖೆಯ ಮೇಲೆ ಬರುವಂತೆ ಮಡಿಸಿ ಬಿಚ್ಚಿದರೆ ಪಿ. ಜಿ. ಪಿ ಎಚ್ ಎಂಬ ಮಡಿಕೆಗಳು ಬೀಳುವುವು. (ಚಿತ್ರ ಆರು ಏಳು.)

ಅದೇ ರೀತಿಯಾಗಿ ಓ-ಇ-ಓ ಎಫ್ ಅಂಚುಗಳನ್ನು ಕೂಡ ಓ ಪಿ ರೇಖೆಯ ಮೇಲೆ ಬರುವಂತೆ ಮಡಿಸಿ ಬಿಚ್ಚಬೇಕು. ಆಗ ಓ-ಜೆ-ಓ-ಕೆ ಎಂಬ ಮಡಿಕೆಗಳಾಗುವುವು. (ಚಿತ್ರ ಎಂಟು.)

ತರುವಾಯ ಇ ಮೂಲೆಯನ್ನು ಮೊದಲಿನ ಪಿ-ಜಿ-ಓ-ಜೆ ಎಂಬ ಮಡಿಕೆಯ ಗುರುತಿನ ಮೇಲೆ ಮಡಿಸಿ(ಚಿತ್ರ ಒಂಭತ್ತು)ಒ ಕಡೆಗೆ ಮಡಿಸಿ ಹೀಗೆಯೇ ಎಫ್ ಮೂಲೆಯನ್ನು ಮಡಿಸಿ ಅನಂತರ ಓ ಮೂಲೆಯನ್ನು ಹಿಂದಕ್ಕೆ ಮಡಿಸಿ (ಚಿತ್ರ ಹತ್ತು.)

ಇನ್ನೊಂದು ಉದ್ದವಾದ ಕಾಗದವನ್ನು ತೆಗೆದುಕೊಂಡು ಅದನ್ನು ಹನ್ನೊಂದನೆಯ ಚಿತ್ರದಲ್ಲಿರುವಂತೆ ಹಕ್ಕಿಯ ಬಾಲದ ಹಾಗೆ ಕತ್ತರಿಸಿ ಅದರ ಇನ್ನೊಂದು ಕೊನೆಯನ್ನು ಹತ್ತನೆಯ ಚಿತ್ರದಲ್ಲಿರುವ ಪಿ ತೂತಿಗೆ ಸೇರಿಸು. ಆಗ ವಾಯುವಿಮಾನವು ಚಿತ್ರ ಹನ್ನೆರಡರಂತೆ ಆಗುವುದು.

ಎ, ಡಿ, ಮೂಲೆಗಳನ್ನು ಹಿಡಿದು ಮೇಲಕ್ಕೆತ್ತಿ ಪಿ ಬಳಿ ಹಿಡಿದು ಗಾಳಿಯಲ್ಲಿ ಎತ್ತಿ ಬಿಸಾಡಿದರೆ ಹಕ್ಕಿಯಂತೆ ಹಾರುವುದು.

ಮೊದಲಿನಂತೆಯೇ ಚೌಕವಾದ ಕಾಗದವನ್ನು ತೆಗೆದುಕೊಂಡು ಏಳನೆಯ ಚಿತ್ರ ವಾಗುವವರೆಗೆ ಮಡಿಸು. ಅದನ್ನು ೧೩ನೆಯ ಚಿತ್ರದಂತೆ ಮಾಡಿಕೊ.

ಅನಂತರ ಡಿ ಮೂಲೆಯನ್ನು ಪೂರ್ಣವಾಗಿ ಬಿಚ್ಚಿದರೆ ೧೪ ನೆಯ ಚಿತ್ರದ ಪಿ ಎಫ್, ಜಿ ಎಚ್ ಜೆ ಎಂಬ ಮಡಿಕೆಯು ಗುರ್ತು ಕಾಣಿಸುವುದು ತರುವಾಯ ಜಿ ಎಚ್ ಮಡಿಕೆಯ ಮೇಲೆ ಕಾಗದವನ್ನು ಮಡಿಸಿ ಡಿ ಮೂಲೆಯು ಎಡಕ್ಕೆ ತೆಗೆದುಕೊ (ಚಿತ್ರ ೧೫.) ಎಚ್-ಜೆ ಗುರ್ತು ಹಿಡಿದು ಮತ್ತೆ ಮಡಿಸಿ ಡಿ ಯನ್ನು ಕೆಳಕ್ಕೆ ಬರುವಂತೆ ಮಾಡಿ ಹದಿನಾರನೆಯ ಚಿತ್ರದಂತೆ ಮಾಡು.

ಅನಂತರ ಡಿ ಯನ್ನು ಮತ್ತೆ ಬಲಪಕ್ಕಕ್ಕೆ ಮಡಿಸಿ ಚಿತ್ರ ೧೭ ಹೀಗೆಯೇ ಎ ಬಿ ಸಿ ಮೂಲೆಗಳನ್ನು ಕೂಡ ಚಿ ೧೪ ರಿಂದ ೧೭ರ ವರೆಗೆ ಡಿ ಮಡಿಸದಂತೆಯೇ ಮಾಡಿಸು.

ಆಗ ಕಾಗದವು ೧೮ ನೆಯ ಚಿತ್ರದಲ್ಲಿ ಇರುವಂತಾಗುವುದು. ಎ ಡಿ, ಮೂಲೆಯನ್ನು ಒಂದು ಪಕ್ಕಕ್ಕೂ ಸಿ ಬಿ ಮೂಲೆಯನ್ನು ಮತ್ತೊಂದು ಪಕ್ಕಕ್ಕೂ ಹತ್ತೊಂಭತ್ತನೇ ಚಿತ್ರದಲ್ಲಿರುವಂತೆ ಸೇರಿಸಿ ಹಿಡಿದುಕೊಂಡು ಪಿ ಮೂಲೆಯಲ್ಲಿರುವ ರಂಧ್ರದಿಂದ ಗಾಳಿಯನ್ನು ಊದಿದರೆ ಅದು ಉಬ್ಬಿ ಚಿತ್ರ ೨೦ ರಂತಾಗುವುದು.

ಅದರಲ್ಲಿ ನೀರು ತುಂಬಿ ಎಂ ಎಂಬ ದೀಪಜ್ವಾಲೆಯ ಮೇಲೆ ಎಸ್ ಎಸ್ ಹಗ್ಗ ಕಟ್ಟಿ ಜೋಲಾಡ ಬಿಟ್ಟರೆ ನೀರು ಕಾಯುವುದು.



## ಚಿತ್ರಲಿಪಿ

 ನ  ನು  ಗೆ

ಹೆ ಹೋರದಟುನು  "ಯಲ್ಲಿ  ಯ

 ಯೂ ಅದ್ಪು ಇದ್ದವುಲ್ಲಿ 

ಯುನ್ನು  ಸಿಗೆ  ಆನಿಂದತ 

ವನ್ನು ಬ ಪದದಡೆಕೊಂದು ನುಡು.

---

## ಒಗಟೆ

೧. ಒಬ್ಬನ ಹೆಸರು ಗಿಳಿ. ಮತ್ತೊಬ್ಬನ ಹೆಸರು ನಾಯಿ ಎಂದಾಗುತ್ತದೆ ಗಿಳಿ ಪುರಾಣ ಹೇಳುತ್ತದೆ. ನಾಯಿ ಕೇಳುತ್ತದೆ. ಇವರೂ ಯಾರು ?

೨. ನಾನು ಬಾಯಲ್ಲಿರತಕ್ಕವಳ ಗಂಡನ ಅಪ್ಪ ನನ್ನ ಹೆಸರೇನು ?

೩. ಬಾಯಲ್ಲಿ ತಿನ್ನುವುದು. ಬೆನ್ನಿನಲ್ಲಿ ಉಗುಳುವುದು. ಇದು ಯಾವುದು.

೪. ಐದು ಅಕ್ಷರದ ಒಂದು ದೊಡ್ಡ ಕೆರೆ. ಎರಡಕ್ಷರ ಗ್ರಾಮದೇವತೆಗೆ ಹೆಸರಾಗುತ್ತದೆ. ಮೂರಕ್ಷರ ಎರಡು ಪರ್ವತಗಳ ಮಧ್ಯಕ್ಕೆ ಹೆಸರಾಗುತ್ತದೆ. ಈ ಕೆರೆಯ ಹೆಸರೇನು

ಕೆ. ವೆಂಕೋಬರಾವ್

# ವಿಶೇಷಗಳೂ - ವಿಚಿತ್ರಗಳೂ

---

ಹಿಂದಿನ ಕಾಲದಲ್ಲಿ ಡಮಾಸ್ಕಸ್ ಪಟ್ಟಣದ ಕತ್ತಿಗಳು ಬಹಳ ಪ್ರಸಿದ್ಧವಾಗಿದ್ದುವು. ಆ ಕತ್ತಿಗಳನ್ನು ಮಾಡುವುದಕ್ಕೆ ಬುದ್ಧಿವಂತಿಕೆಯೂ ಶ್ರಮವೂ ಬಹಳ ಬೇಕಾಗಿತ್ತು. ಮೊದಲು ಕಬ್ಬಿಣವನ್ನು ಉದಯಿಸುವ ಸೂರ್ಯನ ಬಣ್ಣಕ್ಕೆ ಕಾಸಿ ಅದನ್ನು ಬದುಕಿರುವ ಆಫ್ರಿಕದ ಗುಲಾಮನ ಮೈಗೆ ಚುಚ್ಚುವರಂತೆ. ಅದನ್ನು ಹಾಗೆ ಆರು ಸಲ ಮಾಡಿ ಏಳನೆಯ ಸಲ ಮನುಷ್ಯನ ತಲೆಯನ್ನು ಕತ್ತರಿಸಿದರೆ ಆ ಕತ್ತಿಯ ಬಾಯಿ ಮುಕ್ಕಾಗುತ್ತಿರಲಿಲ್ಲವಂತೆ. ಆ ಡಮಾಸ್ಕಸಿನ ಕತ್ತಿಯನ್ನು ಗುಂಡಗೆ ಬಗ್ಗಿಸಿದರೆ ಅದು ಮುರಿಯುತ್ತಿರಲಿಲ್ಲವಂತೆ

ಕತ್ತಿಯನ್ನು ಕೆಂಪಗೆ ಕಾಸಿ ಅದನ್ನು ಒಬ್ಬ ಕುದುರೆಯ ಸವಾರನ ಕೈಯಲ್ಲಿ ಕೊಡುವುದು. ಅವನು ಅದನ್ನು ಝಳಪಿಸುತ್ತಾ ನಾಗಾಲೋಟದಲ್ಲಿ ಕುದುರೆಯನ್ನು ಓಡಿಸುವುದು. ಹೀಗೆ ಮಾಡಿಯೂ ಅದಕ್ಕೆ ಹದಕೊಡುತ್ತಿದ್ದರಂತೆ.

ಈಗಲೂ ಡಮಾಸ್ಕಸ್ ಕತ್ತಿಗಳಿವೆ. ಅವು ಗಾಳಿಯಲ್ಲಿ ಹಾರಾಡುತ್ತಿರುವ ಹೆಂಗುಸಿನ ಕೂದಲನ್ನು ಕತ್ತರಿಸಬಲ್ಲವಂತೆ

o o o o o o

ಕ್ಯಾರೆಟ್ಸ್ (ಕೆಂಪು ಮೂಲಂಗಿ) ಎಂಬ ಗಡ್ಡೆಗಳಲ್ಲಿ ಕ್ಯಾರೋಟೀನ್ ಎಂಬ ಪದಾರ್ಥವಿದೆ. ಅದನ್ನು ದೇಹವು ವೈಟಮಿನ್ ಎ ಆಗಿ ಮಾಡಿಕೊಳ್ಳುತ್ತದೆ. ಈಗ ಈ ಪದಾರ್ಥವನ್ನು ಬೇರೆ ಮಾಡಿ ಮಾತ್ರೆಗಳನ್ನು ಮಾಡಿದ್ದಾರೆ. ವೈಟಮಿನ್ ಎ ಬೇಕಾದವರು ಇವುಗಳನ್ನು ತಿಂದರೆ ಸಾಕು.

o o o o o

ನ್ಯೂಯಾರ್ಕ್‌ನಲ್ಲಿ ಒಂದು ಮೊಟ್ಟೆಯಲ್ಲಿ ಅರ್ಧ ಅಂಗುಲ ತೂತು ಹೊಡೆದು, ಅದಕ್ಕೆ ಗ ಜನ್ನು ಸೇರಿಸಿಟ್ಟು, ಅದರಲ್ಲಿ ಮರಿಯು ಬೆಳೆಯುವುದನ್ನು ಪರೀಕ್ಷಿಸಿದ್ದಾರೆ.

o o o

ಸಮುದ್ರದ ಏಡಿಗಳು ೧೨ ಸಾವಿರ ಮೈಲಿ ದೂರ ಹೋಗಿರುವುದು ತಿಳಿದು ಬಂದಿದೆ.

ಅಮೇರಿಕದಲ್ಲಿ ೮ ಕೋಟಿ ಪೋಲಿ ಬೆಕ್ಕುಗಳಿವೆಯಂತೆ.

೦ ೦ ೦ ೦ ೦ ೦

ಅಮೇರಿಕ ಎಂಬ ಹೆಸರು ಅಮೇರಿಗೋ ವೆಸ್‌ಪಕ್ಕಿ ಎಂಬುವನಿಂದ ಬಂತು ಎಂದು ಎಲ್ಲರೂ ಭಾವಿಸಿದ್ದರು. ಈಗ "ಹಾಗಲ್ಲ ಅಮೆರಿಕ್‌ಕ ಎಂಬ ಮಾತಿನಿಂದ ಬಂದಿದೆ. ಅದಕ್ಕೆ ಹೊಳೆಯುವ ಸೂರ್ಯನ ದೇಶ ಎಂದು ಅರ್ಥ" ಎಂದು ಇನ್ನೊಬ್ಬರು ಹೇಳಿದ್ದಾರೆ.

೦ ೦ ೦ ೦ ೦

ಮೆಕ್ಸಿಕೋ ಖಾರಿಯಲ್ಲಿ ಒಂದು ಜಾತಿಯ ಮೀನಿವೆ ಅವು ಸಂಜೆಯ ಹೊತ್ತಿನಲ್ಲಿ ಒಂದು ಸದ್ದು ಮಾಡುತ್ತವೆ ಆ ಸದ್ದು ಸಣ್ಣ ಗಂಟೆಗಳ ಸದ್ದಿನಂತೆ ಇರುತ್ತದೆ.

೦ ೦ ೦ ೦

ರಷಿಯದಲ್ಲಿ ಒಂದು ಮಗುವು ಹುಟ್ಟಿತು. ಅದಕ್ಕೆ ತಲೆಯಲ್ಲಿ ಮಿದುಳೇ ಇರಲಿಲ್ಲ. ಅದು ಹದಿನಾರು ಘಂಟೆಗಳ ಕಾಲ ಮಾತ್ರ ಬದುಕಿತ್ತು.

೦ ೦ ೦ ೦ ೦

ಗೂಬೆಗಳಿಗೆ ಕಿವಿಯ ಮೇಲೆ ಮುಚ್ಚಿಕೊಳ್ಳುವುದಕ್ಕೆ ಅನುಕೂಲವಾದ ಹೊದಿಕೆಯಿದೆಯಂತೆ! ಅದರಿಂದ ತನಗೆ ಸದ್ದು ಕೇಳುವುದು ಬೇಡವಾದಾಗ ಅದು ಕಿವಿಯನ್ನು ಮುಚ್ಚಿಕೊಳ್ಳುವುದಂತೆ.

೦ ೦ ೦ ೦

ಲ್ಯಾಪ್‌ಲಾಂಡಿನಲ್ಲಿ ಚಳಿಯೂ ಹಿಮಗಾಳಿಯೂ ಬಹಳ ಹೆಚ್ಚು. ಅದಕ್ಕಾಗಿ ನೆಲದೊಳಗೆ ನೆಲಮಾಳಿಗೆಗಳಂತೆ ಮನೆಗಳನ್ನು ಕಟ್ಟುತ್ತಾರೆ.

೦ ೦ ೦

ಹಿಮವು ಬಹಳ ಬೀಳುವ ದೇಶಗಳಲ್ಲಿ ಬೆಟ್ಟದ ಮೇಲಿನಿಂದ ಹಿಮನದಿಗಳು ಇಳಿಯುತ್ತವೆ. ಆ ನದಿಗಳು ಒಮ್ಮೊಮ್ಮೆ ಮೇಲಿನಿಂದ ಧುಧುಮ್ಮನೆ ಧುಮಿಕಿ ದಾರಿಯಲ್ಲಿರುವ ಬಂಡೆ ಮರ ಎಲ್ಲವನ್ನೂ ಉರುಳಿಸಿ ಅನರ್ಥಮಾಡುತ್ತವೆ. ಅಂತಹ ಅನರ್ಥವನ್ನು ತಪ್ಪಿಸಲು ಈಗ ಆ ಹಿಮನದಿಗಳಿಗೆ ಭಾರಿಯ ಫಿರಂಗಿಗಳನ್ನು ಹೊಡೆದು ಅದನ್ನು ಚದುರಿಸಿ, ಅನಂತರ ಮಣ್ಣುತುಂಬಿ ಹಾಕಿದ ಹಾಗೆ ಆ ಹಿಮವನ್ನು ಅತ್ತ ತೆಗೆದುಹಾಕುತ್ತಾರೆ ಹೀಗೆ ಮಾಡಿ ಹಿಮನದಿಗಳ ಭಯವನ್ನು ಈಚೆಗೆ ತಪ್ಪಿಸಿದ್ದಾರೆ.

# ಚಿತ್ರಪರಿಚಯ

ಈ ಸಲದ ವರ್ಣಚಿತ್ರವು ಸಾವಿತ್ರಿಗೆ ಸಂಬಂಧಪಟ್ಟುದು. ಸಾವಿತ್ರಿಯು ಭರತ ಖಂಡದ ಪುರಾಣಗಳಲ್ಲಿ ಭಾರಿಯ ಗೌರವವನ್ನು ಉಳ್ಳವಳು. ಯಮನ ದರ್ಶನವನ್ನು ಮಾಡಿ ಉಳಿದವರು ಮೂವರು. ಮಾರ್ಕಂಡೇಯ, ನಚಿಕೇತ, ಸಾವಿತ್ರಿ ಇವರು ಆ ಮೂವರು. ಮಾರ್ಕಂಡೇಯನು ಶಿವನ ಅನುಗ್ರಹವನ್ನು ಪಡೆದು ಯಮನಿಂದ ಉಳಿದನು ನಚಿಕೇತನು ಯಮನನ್ನು ಗುರುವಾಗಿ ವರಿಸಿ ಆತನಿಂದ ಬ್ರಹ್ಮವಿದ್ಯೆಯ ಪಡೆದು ಉದ್ಧಾರವಾದನು ಸಾವಿತ್ರಿಯು ತನ್ನ ಪಾತಿವ್ರತ್ಯದ ಧರ್ಮದಿಂದ ಯಮನನ್ನು ಮೆಚ್ಚಿಸಿ ತನ್ನ ಗಂಡನನ್ನು ಉಳಿಸಿಕೊಂಡಳು.

ಸಾವಿತ್ರಿಯ ಕಥೆಯು ಮಹಾಭಾರತದಲ್ಲಿ ಅರಣ್ಯಪರ್ವತದಲ್ಲಿದೆ. ಆಕೆಯು ಒಬ್ಬ ದೊರೆಯ ಮಗಳು ಒಳ್ಳೆಯ ವಿದ್ಯಾವತಿ. ಆಕೆಯು ಹುಡುಕಿ ಒಬ್ಬ ಉತ್ತಮನಾದ ವರನನ್ನು ಹುಡುಕಿ ಮದುವೆಮಾಡಿಕೊಂಡಳು. ಆತನ ಹೆಸರು ಸತ್ಯವಾನನೆಂದು ಆತನೂ ಒಬ್ಬ ದೊರೆಯ ಮಗ ಆದರೆ ದಾಯಾದಿಗಳು ಆತನ ತಂದೆಯ ರಾಜ್ಯವನ್ನು ಕಿತ್ತುಕೊಂಡು ಆತನನ್ನು ಓಡಿಸಿಬಿಟ್ಟಿದ್ದರು. ಆತನು ತಾಯಿತಂದೆಗಳ ಸೇವೆ ಮಾಡಿಕೊಂಡು ಕಾಡಿನಲ್ಲಿ ಋಷಿಗಳ ನಡುವೆ ಇದ್ದನು

ಸಾವಿತ್ರಿಯು ಆತನನ್ನು ಮದುವೆಯಾದಳು. ಆದ ಒಂದು ವರ್ಷಕ್ಕೆ ಸರಿಯಾಗಿ ಆತನಿಗೆ ಮೃತ್ಯುವು ಬಂತು, ಹಾಗಾಗುವುದೆಂದು ಆಕೆಗೆ ತಿಳಿದಿತ್ತು. ಆದರಿಂದ ಆ ವೇಳೆಗೆ ಆಕೆಯು ಆತನ ಜೊತೆಯಲ್ಲಿಯೇ ಇದ್ದಳು. ಅಂತಹ ಧರ್ಮಪರಾಯಣೆಯಾದವಳು ಜೊತೆಯಲ್ಲಿರುವಾಗ, ಯಮದೂತರು ಬರುವುದೆಂತು? ಆದರಿಂದ ಯಮನೇ ಬಂದನು.

ಯಮನು ಪಾಶವನ್ನು ಬೀಸಿ ಪ್ರಾಣವನ್ನು ಎಳೆದುಕೊಳ್ಳಬೇಕು. ಅದರಂತೆ ಪಾಶವನ್ನು ಬೀಸಿದರೆ ಅದು ಆಕೆಯ ಪ್ರಭಾವದಿಂದ ಸುಟ್ಟುಹೋಯಿತು. ಅಂತಹ ಧರ್ಮಿಷ್ಠೆಯನ್ನು ಕಂಡು ಯಮನಿಗೂ ಸಂತೋಷವಾಯಿತು. ಆತನು ಆಕೆಗೆ ಮೂರು ವರಗಳನ್ನು ಕೊಟ್ಟನು. ಮೂರನೆಯ ವರದಲ್ಲಿ ತಾನು ಬಂದಿರುವ ಕೆಲಸವನ್ನು ಮರೆತು ಆಕೆಗೆ ನೂರು ಜನ ಸುಪುತ್ರರಾಗುವಂತೆ ವರವನ್ನು ಅನುಗ್ರಹಿಸಿದನು. ಅದರಿಂದ ಯತ್ನವಿಲ್ಲದೆ ಆಕೆಗೆ ಗಂಡನ ಜೀವವನ್ನು ಕೊಡಬೇಕಾಯಿತು.

ಈಕೆಯ ಕಥೆಯನ್ನು ಕೇಳದವರೇ ಇಲ್ಲ. ಎಷ್ಟೋ ಜನರು ಈ ಕಥೆಯನ್ನು ನಾಟಕವಾಗಿ ಬರೆದಿದ್ದಾರೆ. ಹಾಗೆಯೇ ಪದ್ಯಗಳಲ್ಲಿಯೂ ಬರೆದಿದ್ದಾರೆ. ಹಿಂದಿನ ಪ್ರಸಿದ್ಧ ಕವಿ ಬಸವಪ್ಪ ಶಾಸ್ತ್ರಿಗಳು ಈ ಕಥೆಯನ್ನು ಷಟ್ಪದಿಯಾಗಿ ಬರೆದಿದ್ದಾರೆ

# ಸೃಷ್ಟಿಯ ಚರಿತ್ರೆ

ಈ ಪ್ರಪಂಚವು ಹೇಗೆ ಹುಟ್ಟಿತು? ಹೇಗೆ ಇದೆ? ಎಂಬ ಪ್ರಶ್ನೆಗಳು ಹಲವು ಕಾಲದಿಂದ ಜನರ ಮನಸ್ಸನ್ನು ಹಿಡಿದಿವೆ. ಈ ಪ್ರಶ್ನೆಗಳಿಗೆ ಒಂದೊಂದು ಜನಾಂಗದವರು ಒಂದೊಂದು ರೀತಿಯಾಗಿ ಉತ್ತರ ಕೊಟ್ಟಿದ್ದಾರೆ. ಈಗ ಮುಂದೆ ಬರೆಯುವ ಉತ್ತರವು ಯೂರೋಪಿಯನ್ನರು ಈಗ ಹೇಳುತ್ತಿರುವ ರೀತಿ.

ಈಗ ನಿಮ್ಮ ಮನೆಯನ್ನು ನೋಡು. ನೀನು, ನಿನ್ನ ಅಣ್ಣ, ನಿನ್ನ ಅಕ್ಕ, ನಿಮ್ಮ ತಂದೆ ತಾಯಿ, ಮೊದಲಾದವರೆಲ್ಲ ಸೇರಿ ಒಂದು ಕುಟುಂಬವಾಗಿದ್ದೀರಿ. ಹಾಗೆಯೇ ಒಬ್ಬ ಸೂರ್ಯನಿದ್ದರೆ, ಅವನ ಸುತ್ತಲೂ ಗ್ರಹಗಳು, ಅವಕ್ಕೆ ಉಪಗ್ರಹಗಳು ಇವೆಲ್ಲ ಇರುತ್ತವೆ. ಅವೆಲ್ಲ ಸೇರಿ ಒಂದು "ವಿಶ್ವ" ಅಥವಾ ಸೂರ್ಯನ ಕುಟುಂಬ. ಇಂತಹ ಸೂರ್ಯ ಕುಟುಂಬಗಳು ಎಷ್ಟೋ ಸಹಸ್ರ ಇವೆ ಅವೆಲ್ಲ ಸೇರಿ ಒಂದು ಬ್ರಹ್ಮಾಂಡ.

ಸೂರ್ಯನು ಆದುದು ಹೇಗೆ? ಎಂದರೆ, ಅದೇ ಒಂದು ಕಥೆ. ಯಾವುದಾದರೂ ಒಂದು ರಾತ್ರಿ ನಕ್ಷತ್ರಗಳು ಬೆಳಗುವಾಗ ತಲೆಯೆತ್ತಿ ನೋಡು. ಆಗ ತೆಳುವಾದ ಪರೆಯಂತೆ ಹಬ್ಬಿರುವ ಮೋಡವೊಂದು ಕಾಣುವುದು. ಅದನ್ನು ನಮ್ಮಲ್ಲಿ ತಾರಾಪಥವೆನ್ನುತ್ತಾರೆ ಅದನ್ನು ಇಂಗ್ಲೀಷಿನಲ್ಲಿ ನೆಬುಲಿ ಎನ್ನುತ್ತಾರೆ ಆ ನೆಬುಲಿಯೇ ನಕ್ಷತ್ರಗಳನ್ನು ಮಾಡುವ ಕಾರ್ಖಾನೆ. ಅಲ್ಲಿ ಒಂದು ಸುಳಿಯು ಹುಟ್ಟಿ ತಿರುಗುವುದಕ್ಕೆ ಆರಂಭಿಸುವುದು. ಅದು ತಿರುತಿರುಗುತ್ತಾ ಒಂದು ಉಂಡೆಯಾಗುವುದು. ಅದು ಸೂರ್ಯ.



ಮಗ್ಗುಲಲ್ಲಿರುವ ಚಿತ್ರನೋಡು. ಮೊದಲನೆಯದು ನೆಬುಲಿ ಎರಡನೆಯದು ಸುಳಿ ಆರಂಭವಾಗುವ ಚಿತ್ರ. ಮೂರನೆಯದು ಸೂರ್ಯನಾಗುತ್ತಿರುವ ಚಿತ್ರ.

ಹೀಗೆ ತಯಾರಾದ ಸೂರ್ಯನಿಂದ ಕಣಗಳು ಸಿಡಿದು ಹಾರಿಹೋಗುವುವು. ಆ ಕಣಗಳು ಒಂದೊಂದು ಗ್ರಹವಾಗಿ ಅವು ಆ ಸೂರ್ಯನ ತಿರುಗುವುವು. ಅವುಗಳಿಂದ

ಹಾರಿಹೋದ ಕಣಗಳು ಉಪಗ್ರಹಗಳಾಗುವುವು. ಈ ಗ್ರಹಗಳೂ ಉಪಗ್ರಹಗಳೂ ಸೂರ್ಯನ ಸುತ್ತಲೂ ತಿರುಗುವುವು.

ನಮ್ಮ ಭೂಮಿಯೂ ಹೀಗೆಯೇ ಸೂರ್ಯನಿಂದ ಸಿಡಿದುಬಂದ ಒಂದು ತುಂಡು ಇದು ಸಿಡಿದುಬಂದಾಗ ಉರಿಯುವ ಅಗ್ನಿಪಿಂಡವಾಗಿತ್ತು. ಬರುಬರುತ್ತ ಆರಿತು. ಹಾಗೆ ಆರುತ್ತಿರುವಾಗ ಇದರಿಂದ ಒಂದು ತುಂಡು ಹಾರಿಹೋಗಿ ಚಂದ್ರನಾಯಿತು.

ಇದಿಷ್ಟು ನಡೆದುದು ಕೋಟ್ಯಂತರ ವರ್ಷಗಳ ಹಿಂದೆ. ಸೂರ್ಯನು ಹುಟ್ಟಿ ೫೦ ಲಕ್ಷ ಲಕ್ಷ ವರ್ಷಗಳಾದುವಂತೆ. ಭೂಮಿಯು ಹುಟ್ಟಿ ೧೫೦ ಸಾವಿರ ಲಕ್ಷ ವರ್ಷಗಳಾದವಂತೆ.

ಭೂಮಿಯು ಬಹುಕಾಲದವರೆಗೆ ಆರಲಿಲ್ಲ. ಉರಿಯುತ್ತಲೇ ಇತ್ತು. ಉರಿಯು ಆರಿದ ಮೇಲೂ ಬಿಸಿಯೂ ಬಹಳ ಕಾಲವಿತ್ತು. ಬಿಸಿಯಿಂದ ವಾಯುಮಂಡಲವಾಗಿ ಭೂಮಿಯು ಸುತ್ತಲೂ ಮುಚ್ಚಿತಂತೆ. ಆ ವಾಯುವಿನಲ್ಲಿ ಇದ್ದ ನೀರಿನ ಆವಿಯು ಮೋಡವಾಗಿ ಮಳೆಗರೆಯಿತಂತೆ ಆ ಮಳೆಯಿಂದ ಮೊದ ಮೊದಲು ಹಳ್ಳಕೊಳ್ಳ ಆದುದು. ಅನಂತರ ಭೂಗೋಳದ ಒಳಗಿದ್ದ ಬಿಸಿಯು ಆಗಾಗ ಕೆರಳಿ ಅದು ಹೊರಕ್ಕೆ ಬಂದಾಗ ಕಾಣಿಸಿಕೊಂಡ ಅಗ್ನಿಪರ್ವತಗಳು, ಆಗಾಗ ನಡೆಯುವ ಭೂಕಂಪಗಳು, ಇವುಗಳೆಲ್ಲ ಸೇರಿ ಭೂಮಿಯನ್ನು ಬೆಟ್ಟ, ಹಳ್ಳ, ಬಯಲು ಮಾಡಿದುವು ಹಳ್ಳದಲ್ಲಿ ನೀರು ನಿಂತು ಸಮುದ್ರವಾಯಿತು. ಮಗ್ಗುಲಲ್ಲಿರುವುದು ಮೊದಲನೆಯ ಸಮುದ್ರವು ಹೇಗಿತ್ತು ಎಂಬುದನ್ನು ತೋರಿಸುವ ಚಿತ್ರ.



ಭೂಮಿಯು ಆರಿದ ಮೇಲೆ ಅಲ್ಲಿ ಮೊದಲು ಸಸ್ಯಗಳು ಹುಟ್ಟಿದುವು ಅವೇ ಬೆಳೆದು ಮರಗಳೂ ಹೆಮ್ಮರಗಳೂ ಆದುವು. ಸಸ್ಯಗಳಲ್ಲಿ 'ಯೂಗ್ಲಿನಾ' ಎಂಬ ಒಂದು ಸಸಿಯು ಹುಟ್ಟಿತು. ಅದು ಸಸಿಯೂ ಅಹುದು, ಜಂತುವೂ ಅಹುದು. ಆ ಯೂಗ್ಲಿನಾ ಇಂದ ಜಂತುಗಳು ಬಂದುವು. ಪಕ್ಕದಲ್ಲಿರುವ ಚಿತ್ರವು ಆ ಮೊದಲನೆಯ ಸಸ್ಯಜಂತುವು ಬೆಳೆದುಬಂದು ಮಾನವನಾದುದು ಹೇಗೆ ಎನ್ನುವುದನ್ನು ತೋರಿಸುತ್ತದೆ, ಅದನ್ನು ನೋಡು.

# జంతు వికాస చక్ర










































ఆధునిక మానవుడు
వాక్ప్రారంభము
నరవానరావస్థ
జీవించియున్న చతుష్పాదాలలో అత్యంత ప్రాచీనమైన కంగారు
స్థలచర జీవములు
ఉష్ణ రక్తము
శిశుజననము
స్తన్యపానము
ఆచ్ఛాదిత అండప్రారంభము
కాళ్లు చేతులు
జలచర జీవములు
కీళ్లతో కూడిన వెన్నెముకారంభము
వెన్నునాడి
దవడ ఎముకలు మొదలగుట
పువార ప్రారంభము
విభాగిత జీవములు
శిరో పుచ్ఛముల ప్రారంభము
అణుసంఘటనము జీవవ్యాపార విభజనము
శారీరకోశము, రక్తనాళములు
నాడీ ప్రారంభము, జీర్ణనాళనిర్మాణము
జీవాణువు

ಚಿತ್ರಪಟದ ಎಡಭಾಗದಲ್ಲಿ ಕೆಳಗಡೆ ಜೀವಾಣುವು ಎಂದು ಬರೆದಿರುವುದೇ ಯೂಗ್ಲಿನಾ ಅದರಿಂದ ದಾಳಿಂಬರೆಕಾಯಿನ ಹಾಗೆ ಇರುವ ಜಂತುವೊಂದು ಹುಟ್ಟಿ ಅಲ್ಲಿಂದ ಮೂಲಂಗಿಗಿಡಗಳ ಹಾಗೆ ತಲೆಯ ಮೇಲೆ ಕೊಂಬುಗಳು ಉಳ್ಳ ಪ್ರಾಣಿಗಳು ಆದುವು. ಆಗ ಆ ಜಂತುವಿಗೆ ರಕ್ತ ಮೂಳೆ ಇವೆಲ್ಲ ಹುಟ್ಟಿದುವು. ಇಲ್ಲಿಂದಲೇ ಸಣ್ಣ ಹುಳುಗಳೂ ಚಿಟ್ಟೆಗಳೂ ಹುಟ್ಟಿರುವುದು ಅಲ್ಲಿಂದ ಮುಂದೆ ಬೆನ್ನೆಲುಬು, ಕೀಲುಗಳು ಉಳ್ಳ ಜಂತುಗಳಾಗಿ ಬರುಬರುತ್ತ ಮೀನುಗಳು ಆದುವು. ಅಲ್ಲಿನವರೆಗೂ ಸೃಷ್ಟಿಯೆಲ್ಲ ನೀರಿನಲ್ಲಿಯೇ !

ಆ ಮೇಲೆ ಕಪ್ಪೆ, ಮೊಸಳೆ ಮೊದಲಾದವು ಹುಟ್ಟಿದುವು. ಇವು ನೀರಿನಲ್ಲಿಯೂ ನೆಲದಲ್ಲಿಯೂ ಇರಬಲ್ಲವು. ಇವಕ್ಕೆಲ್ಲ ರಕ್ತವು ಬಿಸಿಯಿಲ್ಲ. ತಣ್ಣಗಿರುವ ರಕ್ತ. ಮತ್ತು ಇವು ಮೊಟ್ಟೆಯಿಂದ ಮರಿಮಾಡುವ ಜಾತಿ. ಅಲ್ಲಿಂದ ಮುಂದೆ ಬಿಸಿರಕ್ತವಿರುವ ಜಾತಿಯು ಬಂದಿತು. ಆಕಾಶದಲ್ಲಿ ಹಾರಾಡುವ ಹಕ್ಕಿಗಳೂ ಮರಿಗಳಿಗೆ ಹಾಲು ಕೊಡುವ ಜಾತಿಯ ಬೆಕ್ಕು, ಕರಡಿ, ಹಸು, ಕುದುರೆ ಮೊದಲಾದ ಪ್ರಾಣಿಗಳೂ ಹುಟ್ಟಿದುವು. ಈ ಪ್ರಾಣಿಗಳಲ್ಲಿ ಕೊನೆಯ ಬೆಳವಣಿಗೆಯ ಘಟ್ಟ ಕಪಿಗಳು. ಕಪಿಗಳು ಅಂಗಾಂಗಗಳಲ್ಲಿಯೂ ಬುದ್ಧಿಯಲ್ಲಿಯೂ ಮಾನವರನ್ನು ಬಹುವಾಗಿ ಹೋಲುತ್ತವೆ. ಈಗಿನ ಶಾಸ್ತ್ರಜ್ಞರು ಕಪಿಗಳ ಜಾತಿಯು ಬರುಬರುತ್ತ ಮಾನವ ಜಾತಿಯಾಯಿತು ಎನ್ನುತ್ತಾರೆ.



ಮಾನವರಲ್ಲಿ ಮೊದ ಮೊದಲು ಕಾಡುಜನರು'' ಆ ಮೇಲೆ ಮಾತನಾಡುವವರು, ಆನಂತರ ಬೇಟೆಯಾಡಿ ಹಸಿಮಾಂಸವನ್ನು ತಿನ್ನುವವರು ಆನಂತರ ಮಂದೆಗಳ ಹಿಂದೆ ಅಲೆಯುವವರು, ಒಂದು ಕಡೆ ನಿಂತು ಬೇಸಾಯಮಾಡುವರು ಹೀಗೆ ಮಾನವ ಜಾತಿಯು ಉತ್ತಮವಾಗುತ್ತ ಬಂದಿತು. ಕೊನೆಗೆ ಪಟ್ಟಣಗಳನ್ನು ಕಟ್ಟಿದವರೂ ಯಂತ್ರಗಳನ್ನು ನಿರ್ಮಿಸಿದವರೂ ಹುಟ್ಟಿದರು.

ಹೀಗೆ ಬೆಳೆದು ಬಂದ ಜೀವವು ಮನುಷ್ಯನಾಗಿ, ಕುರ್ಚಿಮೇಜು ಹಾಕಿಕೊಂಡು ಕುಳಿದು ಓದುವವರೆಗೂ ಬಂದಿದ್ದಾನೆ ಎಂದು ಈಗಿನವರು ಹೇಳುತ್ತಾರೆ.

ಕಪಿಯು ಮನುಷ್ಯನಾಗಿ ಸುಮಾರು ೪೦ ಸಾವಿರವರ್ಷ ವಾಯಿತೆಂದು ಊಹಿಸಿದ್ದಾರೆ. ವ್ಯವಸಾಯವು ಆರಂಭವಾಗಿ ಸುಮಾರು ೭೦೦೦ ವರ್ಷವಾಯಿತು ಎಂದೂ ಹೇಳುತ್ತಾರೆ.

ಇದುವರೆಗೆ ಹೇಳಿದ ಈ ಕಥೆಗೆ ಹಲವು ಸಾಕ್ಷಿಗಳು ಸಿಕ್ಕಿವೆ ಅದರಲ್ಲಿ ಗರ್ಭದಲ್ಲಿರುವ ಪಿಂಡ ಮತ್ತು ಶಿಶುಗಳ ಬೆಳವಣಿಗೆಯನ್ನೂ ದೇಹದ ರಚನೆಯನ್ನೂ ತೋರಿಸುವ ಶಾಸ್ತ್ರಗಳ ಸಾಕ್ಷಿಯೂ ಬಹಳ ಬಲವಾದುದು. ಒಂದು ಚಿತ್ರದಲ್ಲಿ ಗರ್ಭದ ಪಿಂಡವು ಬೆಳೆಯುವುದನ್ನು ತೋರಿಸಿದೆ. ಅದರಲ್ಲಿ ಎಡದಿಂದ ಬಲಕ್ಕೆ ಬಂದರೆ ಮೊದಲನೆಯದು ಮಾನವಪಿಂಡ, ಎರಡನೆಯದು ಬೆಕ್ಕು, ಮೂರನೆಯದು ಹಲ್ಲಿ ನಾಲ್ಕು ಐದನೆಯವು. ಮೀನುಗಳು ಒಂದೊಂದಕ್ಕೂ ಎಷ್ಟು ಹೋಲಿಕೆಯಿದೆ ನೋಡು ಮುಂದಿನ ಚಿತ್ರದಲ್ಲಿ ಎರಡು ಸಾಲಿವೆ. ಮೇಲಿನ ಸಾಲು ಶಿಶುಗಳು ಕೆಳಗಿನ ಸಾಲು ಬೆಳೆದವರು



ನಡುವೆ ನಿಂತಿರುವ ಚಿತ್ರವು ಮಾನವನದು ಇತ್ತಕಡೆಯೆರಡೂ ಅತ್ತಕಡೆಯೆರಡೂ, ವರಸೆಯಾಗಿ ಗಿಬ್ಬನ್, ಚಿಂಪಾಂಜಿ, ಗೋರಿಲ್ಲ, ಒರಾಂಗೊ ಟಾಂಗ್‌ಗಳು. ನೋಡು ಒಂದನ್ನೊಂದು ಎಷ್ಟು ಮಟ್ಟಿಗೆ ಹೋಲುತ್ತವೆ.



ಈ ಹೋಲಿಕೆಯು ಇನ್ನೂ ಚೆನ್ನಾಗಿ ತೋರುವುದು ಅಸ್ಥಿಪಂಜರಗಳಲ್ಲಿ ಈ ಚಿತ್ರದಲ್ಲಿ ನೋಡು ಅಸ್ಥಿಪಂಜರಗಳು ಎರಡು ಮಗ್ಗುಲು ಮಗ್ಗುಲಾಗಿ ನಿಂತಿವೆ. ಮೊದಲನೆಯದು ಮನುಷ್ಯನದು ಎರಡನೆಯದು ಗೋರಿಲ್ಲಾದು

ಇನ್ನೂ ಮುಂದೆ ಹೋಗಿ ತಲೆಬುರುಡೆಗಳನ್ನು ಪರೀಕ್ಷಿಸಿದರೆ ಈ ಹೋಲಿಕೆಯು ಇನ್ನೂ ಸ್ಪಷ್ಟವಾಗುವುದು. ಮೊದಲನೆಯದು ಕಪಿಯ ಬುರುಡೆ. ಅದಕ್ಕೆ ಮಿದುಳು



ಚಿಕ್ಕದು. ಆದರಿಂದ ಹಣೆಯೂ ಚಿಕ್ಕದು. ಎರಡನೆಯದು ಮೊದಮೊದಲು ಕಾಲದ ಮನುಷ್ಯ. ಮೂರನೆಯದು ಈಗಿನ ಮನುಷ್ಯ

ಅಲ್ಲಿಂದ ಮುಂದೆ ಹೋಗಿ ಹಸ್ತಗಳನ್ನು ಪರೀಕ್ಷಿಸೋಣ. ಕೊನೆಯದು ಮನುಷ್ಯನ ಹಸ್ತ. ಮಿಕ್ಕವು ಕಪಿಗಳ ಹಸ್ತಗಳು.



ಇದಿಷ್ಟೇ ಈಗಿನವರು ಹೇಳುವ ಮಾತನ್ನು ನಂಬಲು ಸಾಕು ಆದರೆ ಇದರ ಜೊತೆಗೆ ವಿದ್ವಾಂಸರು ಶ್ರಮಪಟ್ಟು ಬಹಳ ಹುಡುಕಿದುದರ ಫಲವಾಗಿ ಇನ್ನು ಕೆಲವು ಸಂಗತಿಗಳು ಗೊತ್ತಾಗಿವೆ. ಡಾಕ್ಟರ್ ಡುಬಾಯಿಸ್ ಎಂಬುವರು ಜಾವಾ ದ್ವೀಪದಲ್ಲಿ ಇದ್ದಾಗ ಅವರಿಗೆ ಒಂದು ತಲೆಬುರುಡೆಯು ಸಿಕ್ಕಿತು. ಅದನ್ನು ಪರೀಕ್ಷಿಸಿ ಕಪಿಗೂ ಮನುಷ್ಯನಿಗೂ ನಡುವೆ ಇದ್ದ ಮನುಷ್ಯ ಕಪಿಯದು ಅದು ಎಂದು ಗೊತ್ತುಮಾಡಿದರು. ಹಾಗೆಯೇ ಪಾಲ್ ಡಿಚೇಲೂ ಎಂಬುವರು ಆಫ್ರಿಕಾದಲ್ಲಿ ಗೋರಿಲ್ಲವನ್ನು ಕಂಡರು. ಈ ಗೋರಿಲ್ಲ, ಆದಿಕಾಲದ ಮನುಜ, ಇವರೆಲ್ಲ ಈ ವಿಕಾಸವಾದವು ಸತ್ಯವೆನ್ನಲು ಸಾಕ್ಷಿ.



ಪಾಲ್ ಡಿಚೆಲೂ



ಡಾ|| ಡುಬಾಯಿಸ್



ಕೆಳದವಡೆಯ ಎಲುಬುಗಳು



# ಇಬ್ಬರು ರಾಜರು

ಇಂಡಿಯಕ್ಕೆ ಪೂರ್ವದಲ್ಲಿ ಬಂಗಾಳ ಕೊಲ್ಲಿಗೆ ಆಚೆ ಸಯಾಂ ರಾಜ್ಯವಿದೆ. ಇದುವರೆಗೆ ಆ ರಾಜ್ಯವನ್ನು ಪ್ರಜಾಧಿಪೋ ಎಂಬ ರಾಜನು ಆಳುತ್ತಿದ್ದನು. ಆ ರಾಜ್ಯದಲ್ಲಿ ಅಧಿಕಾರವೆಲ್ಲವೂ ಮಂತ್ರಿಗಳದು. ಮಂತ್ರಿಗಳನ್ನು ಜನರು ಚುನಾಯಿಸುವರು.



ಪ್ರಜಾಧಿಪೋ ರಾಜ

ಕೆಲವು ಕಾಲದ ಹಿಂದೆ ಈ ದೊರೆ ರಾಜ್ಯದ ಅಡಳಿತವು ಸರಿಯಾಗಿಲ್ಲ ಎನ್ನಿಸಿತು. ಅದಕ್ಕಾಗಿ ಮಂತ್ರಿಗಳನ್ನು ಕುರಿತು, “ ರಾಜ್ಯದ ಆಡಳಿತವು ಸರಿಹೋದರೆ ಸಮು ಇಲ್ಲವಾದರೆ ನಾನು ರಾಜತ್ವವನ್ನು ಬಿಟ್ಟು ಬಿಡುತ್ತೇನೆ” ಎಂದು ಎಚ್ಚರಿಕೆ ಕೊಟ್ಟರು. ಆದರೂ ಮಂತ್ರಿಗಳು ಸರಿಹೋಗಲಿಲ್ಲ. ಅದಕ್ಕಾಗಿ ರಾಜ್ಯವನ್ನೇ ಬಿಟ್ಟುಕೊಟ್ಟರು.

ಈಗ ಆ ರಾಜ್ಯಕ್ಕೆ ಆ ಪ್ರಜಾಧಿಪೋ ರಾಜನ ತಮ್ಮನ ಮಗ ಆನಂದ ಮಹಿರಾ ಎಂಬ ಸಣ್ಣವಯಸ್ಸಿನ ಹುಡುಗನಿಗೆ ಪಟ್ಟ ಕಟ್ಟಿದ್ದಾರೆ.



ಆನಂದ ಮಹಿರಾ ರಾಜ

# ಸುಪ್ಪಾರಕ ಜಾತಕ



ಪೂರ್ವಕಾಲದಲ್ಲಿ ಭರುವೆಂಬರಾಜನು ಭರುರಾಜ್ಯವನ್ನಾಳುತ್ತಿದ್ದನು. ಆ ರಾಜ್ಯದಲ್ಲಿ ಭರುಕಚ್ಛವಟ್ಟಣವೆಂದು ಪ್ರಸಿದ್ಧವಾದ ರೇವುಪಟ್ಟಣ. ಅಲ್ಲಿದ್ದ ಕರ್ಣಧಾರಿಗೆ (ನಾವಿಕಾಧಿಪತಿ) ಬೋಧಿಸತ್ವನು ಪುತ್ರನಾಗಿ ಅವತರಿಸಿದನು. ಸುಂದರನಾಗಿಯೂ ಸುವರ್ಣದಂತೆ ಮಿರುಗುವ ಶರೀರಿಯಾಗಿಯೂ ಇದ್ದುದರಿಂದ ಅವನಿಗೆ ಸುಪ್ಪಾರಕನೆಂದು ಹೆಸರಿಟ್ಟರು. ಅವನಿಗೆ ಹದಿನಾರು ವರ್ಷ ವಯಸ್ಸಾಗುವ ವೇಳೆಗೆ ಹಡಗು ನಡೆಸುವ ವಿದ್ಯೆಯಲ್ಲಿ ಪ್ರವೀಣನಾದನು ಆ ವಟ್ಟಣದವರೆಲ್ಲ ಅವನನ್ನು ಕಂಡು ಸಂತೋಷಪಟ್ಟರು. ಅವನು ಕೆಲವು ದಿವಸಗಳ ಮೇಲೆ ತನ್ನ ತಂದೆಯು ಕಾಲವಾಗಲು ತಾನೇ ಕರ್ಣಧಾರಿಯಾಗಿ ನಿಂತು ಅನೇಕ ಸಮುದ್ರಗಳಲ್ಲಿ ಸಂಚಾರ ಮಾಡಿ ಖ್ಯಾತಿಯನ್ನು ಪಡೆದನು. ಅವನ ನಾವೆಯು ಒಂದು ದಿವಸವಾದರೂ ಸಮುದ್ರದಲ್ಲಿ ದಾರಿ ತಪ್ಪಲಿಲ್ಲ, ಕಷ್ಟಕ್ಕೆ ಸಿಕ್ಕಲಿಲ್ಲ.




ಒಂದು ಸಾರಿ ಸಮುದ್ರದ ಮೇಲೆ ಪ್ರಯಾಣಮಾಡುತ್ತಿರುವಾಗ ಉಪ್ಪು ನೀರು ಸಿಡಿದು ಎರಡು ಕಣ್ಣುಗಳೂ ಕುರುಡಾದುವು. ಅಂದಿನಿಂದ ಕರ್ಣಧಾರಿಯ ಕೆಲಸವನ್ನು ಬಿಟ್ಟು ಆ ದೇಶದ ರಾಜನ ಬಳಿಯಲ್ಲಿ ಆನೆ ಕುದುರೆ, ರತ್ನ ಮುಂತಾದ ವಸ್ತು ಪರೀಕ್ಷಕನಾಗಿ ಸೇರಿದನು. ರಾಜನ ಬಳಿಗೆ ಬಂದ ಆನೆ, ಕುದುರೆ, ರತ್ನ, ಮುತ್ತು, ವಸ್ತ್ರಗಳು ಮೊದಲಾದುವನ್ನು ಕೈಯಿಂದ ಮುಟ್ಟಿ ನೋಡಿ, ಅವುಗಳ ಗುಣದೋಷಗಳನ್ನು ಹೇಳಿ ಬೆಲೆಯನ್ನು ನಿರ್ಣಯಿಸುತ್ತಿದ್ದನು.

ಹೀಗಿರುತ್ತಿರಲು ಒಂದು ದಿವಸ ಕೆಲವರು ವರ್ತಕರು ನಡೆಯುತ್ತಿರುವ ಬೆಟ್ಟದಂತಿದ್ದ ಆನೆಯನ್ನು ತಂದು



ಪಟ್ಟದಾನೆಗೆ ತಕ್ಕುದಾಗಿದೆಯೆಂದು ರಾಜನಿಗೆ ಹೇಳಿದರು. ರಾಜನದನ್ನು ಕೊಂಡು ಕೊಳ್ಳುವುದಕ್ಕೆ ಮುಂಚೆ ಅದರಲ್ಲಿರುವ ಕುಂದುಕೊರತೆಗಳನ್ನು ಪರೀಕ್ಷಿಸುವುದಕ್ಕಾಗಿ ಸುಪ್ಪಾರಕನ ಬಳಿಗೆ ಕಳುಹಿಸಿದನು. ಸುಪ್ಪಾರಕನು ಅದರ ಶರೀರವನ್ನು ಕೈಯಿಂದ ಸವರಿ ನೋಡಿ "ಇದು ಪಟ್ಟದಾನೆಯಾಗಲು ಯೋಗ್ಯವಲ್ಲ. ಇದರ ಹಿಂದಿನ ಕಾಲುಗಳಲ್ಲಿ ಸ್ವಲ್ಪ ವಕ್ರವಿದೆ. ಇದು ಹುಟ್ಟುವಾಗ ಇದರ ಭಾರವನ್ನು ತಾಳಲಾರದೆ ಇದರ ತಾಯಿ ನೆಲಕ್ಕೆ ಬೀಳಿಸಿದ್ದರಿಂದ ಹಿಂದಿನ ಕಾಲುಗಳೆರಡೂ ಸೊಟ್ಟಗಾದವು" ಎಂದು ಹೇಳಿದನು. ರಾಜನು ವರ್ತಕರನ್ನು ವಿಚಾರಿಸಲು ಅವರು ನಿಜವೆಂದು ಒಪ್ಪಿಕೊಂಡರು. ರಾಜನು ಸಂತೋಷಪಟ್ಟು ಸುಪ್ಪಾರಕನಿಗೆ ಎಂಟು ಕಹಾಣ (ನಾಣ್ಯ)ಗಳನ್ನು ಬಹುಮಾನ ಮಾಡಿದನು.



ಇನ್ನೊಂದು ದಿವಸ ಕೆಲವರು ಒಂದು ಉತ್ತಮವಾದ ಕುದುರೆಯನ್ನು ತಂದು ರಾಜನು ಏರುವುದಕ್ಕೆ ತಕ್ಕುದೆಂದು ತೋರಿಸಿದರು. ಮೊದಲಿನಂತೆ ಅದನ್ನು ಪರೀಕ್ಷಿಸಲು ಸುಪ್ಪಾರಕನನ್ನು ದೊರೆ ಕರೆಸಿದನು. ಅವನು ಬಂದು ಕುದುರೆಯ ಮೈತಡವಿ ನೋಡಿ "ಇದು ನಮ್ಮ ರಾಜನಿಗೆ ತಕ್ಕುದಲ್ಲ; ಇದು ಹುಟ್ಟಿದ ಕೂಡಲೆ ಇದರ ತಾಯಿ ಸತ್ತುಹೋಯಿತು. ತಾಯಿ ಹಾಲು ಕುಡಿಯದೆ ಹೋದುದರಿಂದ ಇದರ ಅಂಗಗಳು ಸರಿಯಾಗಿ ಬೆಳೆಯಲಿಲ್ಲ" ಎಂದು ಹೇಳಿದನು. ವರ್ತಕರನ್ನು ಕೇಳಲು ಅವರು ನಿಜವೆಂದರು. ದೊರೆಯು ಮೆಚ್ಚಿ ಸುಪ್ಪಾರಕನಿಗೆ ಎಂಟು ಕಹಾಣಗಳನ್ನು ಕೊಟ್ಟನು.

ಮತ್ತೊಂದು ದಿವಸ ಒಬ್ಬ ಬಡಗಿಯು ಸುಂದರವಾದ ರಥ (ಗಾಡಿ) ವೊಂದನ್ನು ತಂದು ರಾಜನಿಗೆ ತೋರಿಸಿದನು. ಸುಪ್ಪಾರಕನದನ್ನು ಪರೀಕ್ಷಿಸಿ "ಛೀ, ಇದು ಟೊಳ್ಳು ಮರದಿಂದ ಮಾಡಿದುದು; ರಾಜನಿಗಿದುಸರಿಯೇ?" ಎಂದನು. ಅದೂ ನಿಜವಾಯಿತು. ದೊರೆಯು ಮೆಚ್ಚಿ ಎಂಟು ಕಹಾಣಗಳನ್ನು ಕೊಟ್ಟನು.



ಇನ್ನೊಂದು ದಿವಸ ಒಬ್ಬ ವರ್ತಕನು ಬಹು ಬೆಲೆಬಾಳುವ ರತ್ನಗಂಬಳಿಯನ್ನು ತಂದನು. ಸುಪ್ಪಾರಕನದನ್ನು ಕೈಯಲ್ಲಿ ಮುಟ್ಟಿನೋಡಿ "ಇದನ್ನು ಇಲಿ ಕಡಿದಿದೆ" ಎಂದನು. ಅದನ್ನು ಬಿಚ್ಚಿನೋಡಿದರೆ ನಿಜವಾಗಿಯೂ ಕಡಿದಿತ್ತು. ರಾಜನು ಮತ್ತೆ ಎಂಟು ಕಹಾಣಗಳನ್ನು ಕೊಟ್ಟನು.



ಸುಪ್ಪಾರಕನಿಗೆ ರಾಜನ ವಿಷಯದಲ್ಲಿ ಅನುಮಾನವುಂಟಾಯಿತು. ತಾನು ಮಾಡಿದ ಪರೀಕ್ಷೆಗಳನ್ನು ನೋಡಿ ಆಶ್ಚರ್ಯಪಟ್ಟು ಪದೇ ಪದೇ ಎಂಟು ಕಹಾಣಗಳನ್ನೇ ಕೊಡುತ್ತಿರಲು ಕಾರಣವೇನಿರಬಹುದೆಂದು ಯೋಚಿಸಿದನು. ಉತ್ತಮಕ್ಷತ್ರಿಯ ರಾಜನು ಹೀಗೆ ಮಾಡಲಾರನೆಂದು ಅವನಿಗೆ ತೋರಿತು. ರಾಜನು ನಾಪಿತ (ಕ್ಷೌರಿಕ)ನಾಗಿದ್ದನು. ನೀಚ-ಕುಲದವನನ್ನು ಸೇವಿಸಬಾರದೆಂದು ಸುಪ್ಪಾರಕನು ತನ್ನ ಊರಿಗೆ ಹೊರಟು ಹೋದನು.



ಭರುಕಚ್ಛಪಟ್ಟಣದ ವರ್ತಕರು ತಮ್ಮ ನೌಕಾಧಿಪತಿಯು ಮತ್ತೆ ಬಂದನೆಂದು ಸಂತೋಷಪಟ್ಟು ಅವನನ್ನೇ ಮತ್ತೆ ತಮ್ಮ ನಾವೆಗೆ ಯಜಮಾನನಾಗಬೇಕೆಂದು ಕೇಳಿಕೊಂಡರು ಅವನು "ನಾನು ಕುರುಡನಾಗಿದ್ದೇನೆ ನನ್ನ ಕೈಯಲ್ಲೇನಾಗುವುದು" ಎಂದು ತಪ್ಪಿಸಿ ಕೊಳ್ಳಲೆತ್ನಿಸಿದನು. ಅವರು ಕೇಳದೆ ಅವನನ್ನೇ ನಾವಿಕಾಧಿಪತಿಯಾಗಿ ಮಾಡಿದರು.

ಕೆಲವು ದಿವಸಗಳಲ್ಲಿ ಮಹಾನಾವೆಯು ಸಮುದ್ರದ ಮೇಲೆ ಹೊರಟಿತು. ಮೊದಲು ಏಳು ದಿನಗಳ ಪ್ರಯಾಣದಲ್ಲಿ ಯಾವ ತೊಂದರೆಯೂ ಬರಲಿಲ್ಲ ಆ ಮೇಲೆ ಬಿರುಗಾಳಿಯೆದ್ದಿತು; ನಾವೆಯು ಮಹಾಸಮುದ್ರದ ಮಧ್ಯದಲ್ಲಿ ಹೊರಟು ಖುರಮಾಲೆಯೆಂಬ ಸಮುದ್ರಭಾಗಕ್ಕೆ ಬಂದಿತು. ಅದರಲ್ಲಿನ ಜಲಚರಗಳು ಮನುಷ್ಯರಂತೆ ಶರೀರವುಳ್ಳವುಗಳಾಗಿ ಕತ್ತಿಯ ಬಾಯಂತೆ ಇರುವ ಮೂಗುಗಳಿಂದ ಕೂಡಿದ್ದುವು ವರ್ತಕರು

ಅವುಗಳನ್ನು ನೋಡಿ, ಆ ಸಮುದ್ರದ ಹೆಸರೇನೆಂದು ಬೋಧಿಸತ್ವನನ್ನು ಕೇಳಿದರು. ಸುಪ್ಪಾರಕನು ನೌಕಾಶಾಸ್ತ್ರದಲ್ಲಿ ಪಂಡಿತನಾಗಿ ಅನ ಭವವುಳ್ಳವನಾದ್ದರಿಂದ, ಅದು ಖುರ ಮಾಲೆಯೆಂದು ತಿಳಿದುಕೊಂಡನು. ಆ ಸಮುದ್ರದಲ್ಲಿ ವಜ್ರಗಳು ಹೇರಳವಾಗಿದ್ದುವು. ಅದನ್ನು ಹೇಳಿದರೆ ವರ್ತಕರು ಆಶೆಯಿಂದ ಹೇರಳ ವಜ್ರಗಳನ್ನು ನಾವೆಗೆ ತುಂಬುವರೆಂದು ತಿಳಿದು ಹೀಗೆಂದನು.

"ಭರುಕಚ್ಛಪಟ್ಟಣದ ವರ್ತಕರು ವಜ್ರಗಳನ್ನು ಗಳಿಸಬೇಕೆಂಬ ಆಶೆಯಿಂದ ಇಲ್ಲಿ ಬಂದು ಸಮುದ್ರದ ಪಾಲಾದರು. ಇದರ ಹೆಸರು ಖುರಮಾಲೆ"

ಹೀಗೆ ಹೇಳಿ ನಾವೆಗೆ ಲಂಗರು ಹಾಕಿ, ತಾನು ಮೀನು ಹಿಡಿಯುವ ನೆಪದಿಂದ ಬೇಕಾದಷ್ಟು ವಜ್ರಗಳನ್ನು ಸಂಗ್ರಹಿಸಿ ನಾವೆಯಲ್ಲಿ ಬಚ್ಚಿಟ್ಟನು.

ಆ ಮೇಲೆ ಆ ನಾವೆಯು ಅಗ್ನಿಮಾಲೆಯೆಂಬ ಸಮುದ್ರವನ್ನು ಸೇರಿತು. ಆ ಸಾಗ ರವು ಮಧ್ಯಾಹ್ನದ ಸೂರ್ಯನಂತೆಯೂ ಉರಿಯುತ್ತಿರುವ ಬೆಂಕಿಯಂತೆಯೂ ಕಾಣಿ ಸಿತು ವರ್ತಕರು ಅದರ ಹೆಸರೇನೆಂದು ಕೇಳಲು ಹಿಂದಿನಂತೆಯೇ ಉತ್ತರಕೊಟ್ಟನು. ಆ ಸಮುದ್ರದಲ್ಲಿ ಭಂಗಾರವು ತುಂಬಿದ್ದಿತು. ಸುಪ್ಪಾರಕನು ಅದನ್ನು ಶೇಖರಿಸಿ ನಾವೆಗೆ ತುಂಬಿದನು.

ಅಲ್ಲಿಂದ ನಾವೆಯು ದಧಿಮಾಲೆಯೆಂಬ ಸಮುದ್ರವನ್ನು ಸೇರಿತು. ಅದು ಹಾಲಿ ನಂತೆ ಸ್ವಚ್ಛವಾಗಿಯೂ ಮೊಸರಿನಂತೆ ಬಿಳುಪಾಗಿಯೂ ಇದ್ದಿತು. ವರ್ತಕರು "ತಥಾ ಗತನೆ! ಈ ಸಮುದ್ರವಾವುದು?" ಎಂದು ಕೇಳಿದರು. ಸುಪ್ಪಾರಕನು ಹಿಂದಿನಂತೆಯೇ ಉತ್ತರಕೊಟ್ಟನು. ಆ ಸಮುದ್ರದಲ್ಲಿ ಬೆಳ್ಳಿಯು ತುಂಬಿದ್ದಿತು. ಅದನ್ನು ಶೇಖರಿಸಿ ಹಡಗಿಗೆ ತುಂಬಿದನು.



ಅಲ್ಲಿಂದ ನಾವೆಯು ಕುಶಮಾಲೆಯೆಂಬ ಸಮುದ್ರವನ್ನು ಸೇರಿತು. ಅದು ನೀಲಿ ಕಾಂತಿಯಿಂದ ಮೆರೆಯುತ್ತಿದ್ದಿತು. ಅದರ ತುಂಬ ನೀಲದ ಮಣಿಗಳು ತುಂಬಿದ್ದುವು. ಸುಪ್ಪಾರಕನು ಬೇಕಾದಷ್ಟು ನೀಲದ ಮಣಿ ಗಳನ್ನು ಶೇಖರಿಸಿ ಮುಂದಕ್ಕೆ ನಡೆದನು. ನಾವೆಯು ನಲಮಾಲೆಯೆಂಬ ಸಮುದ್ರವ ನ್ನು ಸೇರಿತು. ಅದರಲ್ಲಿ ವೈಢೂರ್ಯಗಳು ತುಂಬಿದ್ದುವು. ಬೋಧಿಸತ್ವನು ಅವುಗಳ ನ್ನೂ ಶೇಖರಿಸಿದನು.

ಆ ಮೇಲೆ ಆ ನಾವೆಯು ಅಲ್ಲೋಲಕಲ್ಲೋಲವಾಗಿದ್ದ ವಾಲಭಮುಖವೆಂಬ ಸಮುದ್ರವನ್ನು ಸೇರಿತು. ಬೆಟ್ಟಗಳಂತೆ ಅಲೆಗಳು ಎದ್ದು ನೀರಿನ ಹನಿಗಳಿಂದ ಆಕಾಶವು ತುಂಬಿಹೋಗಿದ್ದಿತು. ಅಲೆಯಿಳಿದ ಕಡೆ ಪಾತಾಳದಷ್ಟು ಆಳವು ಕಾಣುತ್ತಿದ್ದಿತು. ಒಂದು ಕಡೆ ನೀರು ಸುಳಿಯಂತೆ ಸುತ್ತುವುದು. ಬೋಧಿಸತ್ವನು ವರ್ತಕರಿಗೆ ಅದು ವಾಲಭಮುಖ ಸಮುದ್ರವೆಂದು ತಿಳಿಸಿ ಅಲ್ಲಿಗೆ ಬಂದ ಯಾವ ನಾವೆಯೂ ಎಂದೂ ಹಿಂದಿರುಗಿಲ್ಲವೆಂದು ಹೇಳಿದನು.

ಆ ನಾವೆಯಲ್ಲಿ ಏಳು ನೂರುಮಂದಿಯಿದ್ದರು. ಅವರೆಲ್ಲರೂ ಸಾವಿನ ಭಯದಿಂದ ನಡುಗಿ ಕಿರಿಚಿಕೊಳ್ಳತೊಡಗಿದರು. ಬೋಧಿಸತ್ವನು ಮನಸ್ಸಿನಲ್ಲಿ ತನ್ನ ವಿನಾ ಅವರನ್ನು ಯಾರೂ ಕಾಪಾಡುವರಿಲ್ಲವೆಂದು ತಿಳಿದು, ಅವರನ್ನು ಕುರಿತು " ಎಲೈ ಸ್ನೇಹಿತರೆ! ನನ್ನನ್ನು ಗಂಧೋದಕದಿಂದ ಸ್ನಾನಮಾಡಿಸಿ ನೂತನ ವಸ್ತ್ರಗಳನ್ನುಡಿಸಿ ಪುಣ್ಯಪಾತ್ರೆಯಲ್ಲಿ ನೈವೇದ್ಯವನ್ನಿಟ್ಟು ನಾವೆಯ ಮೇಲೆ ಕೂಡಿಸಿರಿ " ಎಂದನು ಅವರು ಹಾಗೆಯೇ ಮಾಡಿದರು. ಬೋಧಿಸತ್ವನು ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದು ಹೀಗೆಂದು ಶಪಥಮಾಡಿದನು

" ನಾನು ಹುಟ್ಟಿ ಬುದ್ಧಿ ಕಲಿತಂದಿನಿಂದ ಇದುವರೆಗೂ ಒಂದು ಪ್ರಾಣಿಯನ್ನಾದರೂ ಹಿಂಸೆ ಮಾಡದಿದ್ದರೆ, ಅಹಿಂಸಾ ಧರ್ಮಪರಾಯಣನಾಗಿದ್ದರೆ, ನಿತ್ಯ ಸತ್ಯ ವ್ರತನಾದ್ದರೆ ಈ ನಾವೆಯು ಸುರಕ್ಷಿತವಾಗಿ ಮನೆಯನ್ನು ಸೇರಲಿ "

ಎಂದು ಪ್ರಾರ್ಥನೆಮಾಡಿದ ಕೂಡಲೆ ದೇಶಾಂತರದಲ್ಲಿ ದಾರಿತಪ್ಪಿ ನಾಲ್ಕು ತಿಂಗಳು ಅಲೆಯುತ್ತಿದ್ದ ಆ ನಾವೆಯು ಮಂತ್ರಸಿದ್ಧಿಯಿಂದಲೆಂಬಂತೆ ಒಂದೇ ದಿನದಲ್ಲಿ ಭರುಕಚ್ಛಪುರದ ರೇವನ್ನು ಸೇರಿ, ಆ ಮೇಲೆ ಎಂಟು ಋಷಭಗಳು (೭೮ ಗಜ) ಭೂಮಿಯ ಮೇಲೆ ನಡೆದು ಸುಪ್ಪಾರಕನ ಮನೆಯ ಮುಂದೆ ನಿಂತಿತು.

ಬೋಧಿಸತ್ವನು ತನ್ನ ಜೊತೆಯ ವರ್ತಕರಿಗೆ ತಾನು ಶೇಖರಿಸಿದ್ದ ವಜ್ರವೈಢೂರ್ಯ ಪ್ರವಾಳ ಮಣಿಗಳನ್ನೂ ಚಿನ್ನಬೆಳ್ಳಿಗಳನ್ನೂ ಹಂಚಿಕೊಟ್ಟು ಇನ್ನುಮೇಲೆ ಎಂದೆಂದಿಗೂ ಸಮುದ್ರಯಾನ ಮಾಡಬೇಡಿರೆಂದು ಹಿತವನ್ನು ಹೇಳಿದನು ತರುವಾಯ ಅವನು ಯಾವಜ್ಜೀವವೂ ಭೂರಿದಾನಾದಿಗಳನ್ನು ಮಾಡಿ ಕೀರ್ತಿಯನ್ನುಗಳಿಸಿ ಶುಕ್ರನಗರವನ್ನು ಸೇರಿದನು.

'ಉಮಾಪತಿ'




ಈಗ ಎಲ್ಲೆಲ್ಲೂ ವಿಜ್ಞಾನದ ಮಾತು. ಬೆಂಕಿಯ ಕಡ್ಡಿಯಿಂದ ಹಿಡಿದು ಏರೋ ಪ್ಲೇನ್, ರೇಡಿಯೋವರೆಗೂ ಎಲ್ಲವೂ ವಿಜ್ಞಾನದ ಪ್ರಭಾವ. ಈ ವಿಜ್ಞಾನವು ಬೇಕಾದ ಹಾಗೆ ಬೆಳೆಯುತ್ತ ಬಂದು ಲೋಕವನ್ನೇ ಹೊಸದು ಮಾಡುತ್ತಿದೆ. ಈ ವಿಚಾರವಾಗಿ ನನು ಗೆಲ್ಲ ಕೊಂಚವಾದರೂ ತಿಳಿದಿರಬೇಕು. ಅದರಿಂದ ನಿನಗೆ ಈ ವಿಷಯವಾಗಿ ಬರೆಯುವೆ ನೆಂದು ನಾನು ಹೇಳಿದುದು

ವಿಜ್ಞಾನವು ಯೂರೋಪಿನಿಂದ ಬಂದುದು. ಪೂರ್ವಕಾಲದಲ್ಲಿ ಇಂಡಿಯ ಈಜಿಪ್ಟ್ ಮೊದಲಾದ ಕಡೆಗಳಲ್ಲಿಯೂ ವಿಜ್ಞಾನವು ಇತ್ತು. ಆಗ ಈಜಿಪ್ಟಿನಲ್ಲಿ ಹೆಣ ಗಳಿಗೆ ಏನೇನೋ ಔಷಧಗಳನ್ನು ಹಾಕಿ ಅವು ಸಾವಿರಾರು ವರ್ಷಗಳಾದರೂ ಕೆಡದಂತೆ ಇಡುತ್ತಿದ್ದರು. ಇಂಡಿಯದಲ್ಲಿ ವಿಮಾನಗಳೂ ಕೀಲುಕುದುರೆಗಳೂ ಇದ್ದುವಂತೆ. ಆದರೆ ಅದೆಲ್ಲವೂ ಜನಗಳಿಗೆ ಈಗ ಗೊತ್ತೇ ಇಲ್ಲ. ಯೂರೋಪಿಯನ್ನರು ಈಗ ಹೊಸ ದಾಗಿ ಇವುಗಳನ್ನೆಲ್ಲ ಮಾಡಲು ಹೊರಟಿದ್ದಾರೆ. ಈ ಯೂರೋಪಿನ ವಿಜ್ಞಾನವು ೨೦೦-೩೦೦ ವರ್ಷಗಳದು

ವಿಜ್ಞಾನವು ಆರಂಭವಾದುದು ಆಕಾಶದಲ್ಲಿ ಎನ್ನಬಹುದು. ಕೊಪರ್ನಿಕಸ್', ಗ್ಯಾಲಿಲಿಯೋ ಮೊದಲಾದವರು ಆಕಾಶದ ಗ್ರಹಗಳನ್ನು ನೋಡಿ ಗುಣಿಸುವುದಕ್ಕೆ ಆರಂಭಿಸಿದರು. ಅವರು ದುರ್ಬೀನು ಮೊದಲಾದವುಗಳ ಸಹಾಯದಿಂದ ಗ್ರಹಗಳನ್ನು

ಗುರ್ತಿಸಿ, ತಮ್ಮ ಗಣಿತವೂ ಆ ಗ್ರಹಗಳ ಸಂಚಾರವೂ ಸರಿಹೋಗಿವೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸಿದರು ಹಾಗೆ ಒಂದು ಕಡೆ ಗಣಿತದ ಆಧಾರದಿಂದ ಗುಣಿಸುವುದು, ಇನ್ನೊಂದು ಕಡೆ ಕಣ್ಣಿಂದ ಕಾಣುವುದಕ್ಕೆ ಪ್ರಯತ್ನಿಸುವುದು ಅಥವಾ ಪರೀಕ್ಷಿಸುವುದು, ಹೀಗೆ ಗಣಿತ, ಪರೀಕ್ಷೆಗಳಿಂದ, ವಿಜ್ಞಾನವು ಆರಂಭವಾಗುವುದು. ಈಗಲೂ ವಿಜ್ಞಾನವು ಮುಂದೆ ಮುಂದೆ ಓಡುತ್ತಿರುವುದು ಈ ಎರಡು ಕಂಬಿಗಳ ಮೇಲೆ.

ವಿಜ್ಞಾನವು ಪ್ರತಿಯೊಂದನ್ನೂ ಅಳೆದು ನೋಡಿ ಗೊತ್ತುಮಾಡಿರುವ ತಿಳಿವಳಿಕೆ. ಅದರಿಂದ ಅಳತೆಗೆ ಸಿಕ್ಕದಿರುವುದನ್ನು ಇದು ಹಿಡಿಯುವುದಕ್ಕೆ ಹೋಗುವುದಿಲ್ಲ. ಅದರಿಂದ ಇದು ದೇವರು, ಆತ್ಮ, ಮನಸ್ಸು, ಮೊದಲಾದುವುಗಳನ್ನು ಕುರಿತು ಏನೂ ಹೇಳುವುದಿಲ್ಲ. ಇದು ಹೇಳುವುದೆಲ್ಲ ಅಳತೆಗ ಸಿಕ್ಕುವ, ಕಣ್ಣಿಗೆ ಕಾಣುವ, ಪರೀಕ್ಷೆಗೆ ಸಾಧ್ಯವಾಗಿರುವ 'ಮ್ಯಾಟರ್' ಕುರಿತು. ಈ ಮ್ಯಾಟರ್' ಎನ್ನುವುದು, ಸಣ್ಣ ಅಣುವಿನಿಂದ ಹಿಡಿದು ಭಾರಿಯ ಸೂರ್ಯಮಂಡಲದವರೆಗೆ ಎಲ್ಲೆಲ್ಲೂ ಇದೆ ಮ್ಯಾಟರ್' ಎನ್ನುವುದು ಇಲ್ಲದ ಕಡೆ,- ಎಂದರೆ ಸೂರ್ಯನಿಗೂ ಭೂಮಿಗೂ ನಡುವೆ ಇರುವಂತೆ,- ಈಥರ್' ತುಂಬಿದೆ. ನೀನು ಈಗಿನ ವಿಜ್ಞಾನವನ್ನು ತಿಳಿದುಕೊಳ್ಳಬೇಕಾದರೆ, ಈ ಮ್ಯಾಟರ್, ಈಥರ್', ಇವೆರಡನ್ನೂ ತಿಳಿದುಕೊಳ್ಳಬೇಕು. ಇವೆರಡೂ ಅಲ್ಲದ ಮೂರನೆಯದು ಇನ್ನೊಂದಿಲ್ಲ. ಈ ಬ್ರಹ್ಮಾಂಡದಲ್ಲೆಲ್ಲ ತುಂಬಿರುವುದು ಇವೆರಡೇ ಎಂದು ಮೊದಲನೆಯ ಸಿದ್ಧಾಂತ

ಮ್ಯಾಟರ್' ಬೇರೆ ಬೇರೆ ರೂಪಗಳನ್ನು ಪಡೆಯುತ್ತದೆ. ನಿನ್ನ ಲೋಟದಲ್ಲಿ ನೀರಾಗಿ ಕುಳಿತಿರುವ ಮ್ಯಾಟರ್' ಮೊದಲು ಮೋಡದಲ್ಲಿ ಆವಿಯಾಗಿ ಕಣ್ಣಿಗೆ ಕಂಡರೂ ಕೈಗೆ ಸಿಕ್ಕದಷ್ಟು ತೆಳುವಾಗಿ ಇತ್ತು. ಹಾಗೆಯೇ ಈ ನೀರನ್ನು ನವೆಂಬರ್' ಡಿಸೆಂಬರ್' ತಿಂಗಳಲ್ಲಿ ನೀನು ನೀಲಗಿರಿಗೆ ತೆಗೆದುಕೊಂಡರೆ ಅದು ಹೆಪ್ಪುಕಟ್ಟಿಕೊಂಡು ಗಟ್ಟಿಯಾಗುವುದು. ಹೀಗೆ, ಗಟ್ಟಿ, ನೀರು, ಗಾಳಿ ಎಂಬ ಮೂರು ರೂಪಗಳಲ್ಲಿ ಮ್ಯಾಟರ್' ಇರುವುದು. ಇನ್ನು ಒಂದು ಉದಾಹರಣೆ ನೋಡು ಕೊಂಚ ಸಾಂಬ್ರಾಣಿಯನ್ನು ತೆಗೆದು ಬೆಂಕಿಯ ಮೇಲೆ ಹಾಕು ಮೊದಲು ಗಟ್ಟಿಯಾಗಿರುವ ಸಾಂಬ್ರಾಣಿಯು ಬೆಂಕಿಯ ಮೇಲೆ ಬಿದ್ದರೆ ಕರಗುವುದು ಇನ್ನಷ್ಟು ಹೊತ್ತಿನೊಳಗಾಗಿ ಹೊಗೆಯಾಗಿ ಮೇಲಕ್ಕೆದ್ದು ಗಾಳಿಯಲ್ಲಿ ಸೇರಿಹೋಗುವುದು. ಮೊದಲನೆಯ ರೀತಿಯಲ್ಲಿ ದಪ್ಪವಾಗಿ ಕೈಗೆ ಸಿಕ್ಕುವಷ್ಟು ಗಟ್ಟಿಯಾಗಿತ್ತು. ಆ ಮೇಲೆ ಕರಗಿ ನೀರಾಯಿತು ಅನಂತರ ಕಣ್ಣಿಗೆ ಕಂಡರೂ ಕೈಗೆ ಸಿಕ್ಕದ ಹೊಗೆಯಾಯಿತು. ಇನ್ನೊಂದುಗಳಿಗೆ ಒಳಗಾಗಿ ಗಾಳಿಯಲ್ಲಿ ಗಾಳಿಯಾಗಿ ಬೆರೆದು ಹೋಗಿದ್ದರೂ ನಿನ್ನ ಮೂಗಿಗೆ ಮಾತ್ರ ಗೋಚರವಾಗಿರುವ ವಾಸನೆಯಾಗಿ ಉಳಿದಿದೆ.

ಈ ಮ್ಯಾಟರೆಲ್ಲ ಅಣುಗಳಿಂದ ಆಗಿದೆ. ಅಣುಗಳು ಬೇಕಾದ ಹಾಗೆ ಸೇರಿದ್ದರೆ, ಕಲ್ಲಿನ ಹಾಗೆ ಆಗಿದ್ದು ಗಟ್ಟಿಯಾಗಿರುವುದು ಒಂದು ರೂಪ ಅದ, ಹೆತ್ತ ತುಪ್ಪದ ಹಾಗೆ. ಎರಡನೆಯದು ಬಿಸಿ ತುಪ್ಪದ ಹಾಗೆ ತೆಳ್ಳಗೆ ನೀರಾಗಿರುವುದು ಮೂರನೆಯದು ತುಪ್ಪದ ವಾಸನೆಯ ಹಾಗೆ ಸೂಕ್ಷ್ಮವಾಗಿ ಗಾಳಿಯಲ್ಲಿ ಹಾರಾಡುತ್ತಿರುವುದು ಆವರೆ ಇನ್ನೆಲ್ಲಿವೂ ಸೂಕ್ಷ್ಮವಾಗಿರುವ ಅಣುಗಳೇ ಈ ಅಣುಗಳಿಗೆ! ಆಕಾರವುಂಟು ತೂಕವುಂಟು. ಈಚೆಗೆ ಬೇಕಾದಷ್ಟು ಪರೀಕ್ಷೆಗಳು ನಡೆದ ಮೇಲೆ "ಪ್ರತಿಯೊಂದು ಅಣುವೂ ಬ್ರಹ್ಮಾಂಡದ ಹಾಗೆಯೇ ಇದೆ. ಅದರಲ್ಲೂ ಸೂರ್ಯ, ಗ್ರಹ, ಉಪಗ್ರಹಗಳೆಲ್ಲವೂ ಇವೆ. ಆಕಾರ ದಲ್ಲಿಯೂ ರಚನೆಯಲ್ಲಿಯೂ ಅತಿ ಕಿರಿದಾದ ಅಣುವಿಗೂ ಅತಿ ದೊಡ್ಡದಾದ ಬ್ರಹ್ಮಾಂಡಕ್ಕೂ ಏನೂ ವ್ಯತ್ಯಾಸವಿಲ್ಲ" ಎಂದು ಗೊತ್ತಾಗಿದೆ. ಹೀಗೆ ಮ್ಯಾಟರು ರೂಪಾಂತರ ವಾದರೂ ಈಥರು ಬದಲಾಯಿಸುವುದಿಲ್ಲ. ಈ ಅಣುಗಳಲ್ಲಿ ಬೇರೆ ಬೇರೆ ಜಾತಿಗಳಿವೆ.

ಇನ್ನೊಂದು ವಿಶೇಷವೆಂದರೆ ಸಾಮಾನ್ಯವಾಗಿ ಒಂದೇ ಜಾತಿಯ ಅಣುಗಳು ಸೇರಿ ಆಗಿರುವ ಮೂಲ ಪದಾರ್ಥಗಳೂ ಉಂಟು. ಬೇರೆ ಬೇರೆ ಜಾತಿಯ ಅಣುಗಳು ಸೇರಿ ಆಗಿರುವ ಜನ್ಯಪದಾರ್ಥಗಳೂ ಉಂಟು. ಚಿನ್ನ, ಕಬ್ಬಿಣ ಮೊದಲಾದುವು ಮೂಲ ಪದಾರ್ಥಗಳು. ಉಪ್ಪು, ಅಕ್ಕಿ, ಹಾಲು, ಮೊದಲಾದುವು ಜನ್ಯಪದಾರ್ಥಗಳು. ಹೀಗೆ ಪ್ರಪಂಚದಲ್ಲಿರುವ ಪದಾರ್ಥಗಳನ್ನು ಪರೀಕ್ಷಿಸಿ ತಿಳಿದುಕೊಳ್ಳುವ ಶಾಸ್ತ್ರವೇ ವಿಜ್ಞಾನ.

ಇತಿ, ಅಣ್ಣ

---

ಅಮೇರಿಕದಲ್ಲಿ ನಾಯಿಸಾಕುವ ಒಂದು ವ್ಯಾಪಾರ ನಡೆಯುತ್ತಿದೆ. ಒಂದು ಭಾರಿಯ ತೋಟದಲ್ಲಿ ಜಾತಿಯ ನಾಯಿಗಳನ್ನೆಲ್ಲ ಸಾಕಿ ಮಾರುತಾರೆ ಇದರಿಂದ ಅವರಿಗೆ ಒಳ್ಳೆಯ ಲಾಭ ಬರುತ್ತದೆಯಂತೆ.

o o o o

ಆಫ್ರಿಕದಲ್ಲಿ ಇಥಿಯೋಪಿಯ ಎಂಬ ಒಂದು ದೇಶವಿದೆ. ಅಲ್ಲಿನವರು ಜೇನುತುಪ್ಪ ವಿಲ್ಲದೆ ಊಟವೇ ಮಾಡುವುದಿಲ್ಲವಂತೆ!

o o o o o

ಒಂದಡಿ ಎತ್ತರ ಒಂದಡಿ ದಪ್ಪ, ಒಂದಡಿ ಅಗಲ ಇರುವ ಚಿನ್ನದ ಗಟ್ಟಿಯು ೧೨೦೪ ಪೌಂಡು (೨೮ ಪೌಂಡಿಗೆ ಒಂದು ಮಣ) ತೂಗುವುದು.

o o o o

ಕೆಂಪು, ಹಳದಿ, ಅಂಜೂರಿ ಬಣ್ಣದ ಉರುಳು ಗಡ್ಡೆಗಳನ್ನು ಬೆಳೆಸಿದ್ದಾರೆ.

# ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚಿತ್ರಬಂಧದ ಕಾಗದವನ್ನು ಹರಿದುಕೊಂಡು ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದ್ದು.

೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು.

೩. ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರ ಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು.

೪. ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ. ಮೂರನೆಯ ಬಹುಮಾನ ಎಂಟಾಣೆ. ನಾಲ್ಕನೆಯ ಬಹುಮಾನ:- ಪುಸ್ತಕದ ಬಹುಮಾನ ೨೦

೫. ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು.

೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೧೫ನೆಯ ತಾರೀಖಿನೊಳಗೆ ಬರಬೇಕು.

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| | ೧ | ೨ | ೩ | |
| ೪ | | ೫ | | ೬ |
| ೭ | ೮ | | ೯ | ೧೦ |
| ೧೧ | | ೧೨ | | ೧೩ |
| | ೧೪ | ೧೫ | ೧೬ | |

೧—೨—೩ ತಾವರೆ

೪—೫—೬ ದಯೆ

೭—೮ ಯುದ್ಧ

೯—೧೦ ಮನುಷ್ಯ

೧೪—೧೫ ಸನ್ಯಾಸಿ

೧—೮ ಚೂರು

೨—೫—೧೨—೧೫ ಬೆಂಗಾಡು

೧೩—೧೦—೬ ಕೊನೆಯ ಗತಿ.

(ಈ ಸಲ ಉತ್ತರಗಳು ಬರೆಯುವುದಕ್ಕೆ ಅವಕಾಶವಿರಲಿಲ್ಲವೆಂದು ಕೆಲವರು ಹೇಳಿದ್ದಾರೆ. ಅದರಿಂದ ಈ ಸಂಪೂ ಚೌಕಬಂಧವನ್ನು ಎತ್ತಿ ಹಾಕಿದೆ.)




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ||—ಶ್ರಾವಣ—ಆಗಸ್ಟ ೧೯೩೫ | ಪುಸ್ತಕ ೩

## ಕಳ್ಳ! ಮಳ್ಳ!

ಯಾರಿಗು ಕಾಣದೆ ಅಡಗಿಸಿ ತಿಂಡಿಯ—ಮುಕ್ಕುವೆ ಯೇತಕೆ ಕಳ್ಳ ?

ಅಜ್ಜಿಯು ತೇಗುತೆ ಮಜ್ಜಿಗೆ ಕುಡಿಯಲು—ಏತಕೆ ನಗುವೆಯೊ ಮಳ್ಳ ?

ಅಕ್ಕಗೆ ಅಪ್ಪನು ಚೆನ್ನಾಗಿ ಬೈದರೆ—ಕುಣಿಯುವೆ ಏತಕೆ ಕಳ್ಳ ?

ತಂಗಿಯು ದೊಪ್ಪನೆ ಬಿದ್ದರೆ, ಎತ್ತದೆ—ಸುಮ್ಮನೆ ನೋಡುವೆ ಮಳ್ಳ !

ಖರ್ಜೂರ ತಿನಲೆಂದು ತಂಗಿಯ ಬಾಯಲಿ—ಹುಣಸೆಯ ಹಾಕುವಿ ಕಳ್ಳ !

ಬಾಳೆಯ ಹಣ್ಣಿನ ಚೆಲ್ಲಿಯ ಸರಿಮಾಡಿ,—ಹಣ್ಣೆಂದು ಕೊಡುವೆ ನೀ ಮಳ್ಳ !

ಅಜ್ಜಿಯು ಮಲಗಲು ಆಕೆಯ ಕಾಲಿಗೆ—ಗೆಜ್ಜೆಯ ಸುತ್ತುವಿ ಕಳ್ಳ !

ಅಜ್ಜನ ಹಿಂಬದಿ ಆತನ ಜುಟ್ಟಿಗೆ—ಕಾಗದ ಕಟ್ಟುವೆ ಮಳ್ಳ !

ಈ ಬಗೆ ಮಕ್ಕಳು ಮನೆಯಲಿ ಇದ್ದರೆ—ಏನೇ ಬಡವಿಯ ಭಾಗ್ಯ !

ತಾಯಿಯ ಕಣ್ಣಿಗೆ ಮುದ್ದಿನ ಕಂದನು—ಆಡುವ ನಾಟಕ ಯೋಗ್ಯ

**ದಿನಕರ ದೇಸಾಯಿ**

# ನಮ್ಮ ಗೆಳೆಯರು



ಸವಾರಿಗೆ ಬೆನ್ನು ಕೊಡುವ
ಗೆಳೆಯ



ಕಂಬಳಿಗೆ ಉಣ್ಣೆ ಕೊಡುವ
ಗೆಳೆಯ



ಮಡಿತಂದುಕೊಡುವ
ಗೆಳೆಯ



ಹೊಲಗದ್ದೆ ಉಳುವ
ಗೆಳೆಯ



ನಮ್ಮ ನಂಬಿಕೆಯ ಭಂಟ



ನಮ್ಮ ನೆಚ್ಚಿನ ಗೆಳೆಯ



ನಮ್ಮ ನಾಡಿಗೆ ತನ್ನ ಹೆಸರು
ಕೊಟ್ಟಿರುವ ಪ್ರಾಣಿ



ದನಕರುಗಳನ್ನೂ ಆಗಾಗ
ಮನುಷ್ಯರನ್ನೂ ಹಾರಿಸುವ
ಕಳ್ಳಭಂಟ.

# ದ್ರಾಕ್ಷಿ ಹಣ್ಣು

ದ್ರಾಕ್ಷಿಯ ಹಣ್ಣು ಗೊಂಚಲು ಗೊಂಚಲಾಗಿ ನೇತಾಡುತ್ತಿತ್ತು. ಅವನಿಗೆ ಅದನ್ನು ನೋಡಿ ಆಸೆಯಾಯಿತು. ಕೊಯ್ದುಕೊಳ್ಳುವುದಕ್ಕೆ ಕೈನೀಡಿದ. ಕಾವಲುಗಾರ ಅದನ್ನು ಕಂಡ, "ಲೇ" ಎಂದ.



ನಾಯಿಕೂಡ 'ಬೌ' ಅಂತ ಅಟ್ಟಿಸಿಕೊಂಡು ಬಂತು ಅವನ, ಕೆಟ್ಟೆನಲ್ಲ ಅಂತ ಪೌಳಿಗೋಡೆ ಹಾರಿ ಓಡಿದ.



ಆದರೂ ನಾಯಿ ಬಿಡಲಿಲ್ಲ. ಅವನು ಓಡುವಾಗ ಟೋಪಿ ಹೋಯಿತು. ಹಣ್ಣು ಹೋಯಿತು. ಕೊನೆಗೆ ಕಾಲುಜಾರಿ ಕೆಳಗೆ ಬಿದ್ದು ಮೊಣಕೈ ಮೊಣಕಾಲು ಎಲ್ಲವೂ ಕಿತ್ತುಹೋಯಿತು.



ಕೊನೆಗೆ ನಾಯಿಯಿಂದ ತಪ್ಪಿಸಿಕೊಂಡು ಮನೆಗೆ ಬಂದು ಸೇರಿದ ಹಣ್ಣಿಗೆಂದು ಹೋದ್ದಕ್ಕೆ ಕೈಕಾಲು ಗಾಯ ಮಾತ್ರ ಆಯಿತು.

# ಆನೆಗಳು

ಕಾಡಿನಲ್ಲಿ ಹುಟ್ಟಿ ಬೆಳೆದ ಆನೆಗಳನ್ನು ಹಿಡಿದು ತಂದು ಪಳಗಿಸುತ್ತಾರೆ. ಆನೆಯು ಹುಲಿಯನ್ನೂ ಸಿಗಿದು ಹಾಕಬಲ್ಲುದು: ಆದರೆ ಅದು ಪಳಗಿದರೆ ಎಳೆಯ ಮಗುವಿಗಿಂತ ಸಾಧುವಾಗುತ್ತದೆ.



ಆನೆಗಳನ್ನು ಗಾಬರಿಮಾಡಿ ಓಡಿಸಿಕೊಂಡು ಬಂದು ಕೊಪ್ಪಕ್ಕೆ ಕೆಡವುತ್ತಾರೆ. ಅನಂತರ ಅವುಗಳ



ನ್ನು ಅಲ್ಲಿ ಉಪಾಯವಾಗಿ ಪಳಗಿಸುತ್ತಾರೆ.



ಅವು ಅರ್ಧ ಅರ್ಧವಾಗಿ ಪಳಗಿದ ಮೇಲೆ ಹಳೆಯ ಆನೆಗಳಿಗೆ ಕಟ್ಟಿ ಬೀದಿ ಬೀದಿ ತಿರುಗಿಸಿ ಸಾಧು ಮಾಡುತ್ತಾರೆ.



ಅವು ಪಳಗಿ ಸಾಧುವಾದ ಮೇಲೆ ಎಲ್ಲಿಗೆ ಬೇಕಾದರೂ ಹೋಗುತ್ತವೆ.

# ವಿಚಿತ್ರ ಕುದುರೆಗಳು



ಕುದುರೆ

ಎಲ್ಲರೂ ಬಲ್ಲ ಕುದುರೆ ಇದು.



ಇದಕ್ಕೆ ರೆಕ್ಕೆಗಳುಂಟಂತೆ. ಇದು ಕ್ಷೀರಸಾಗರವನ್ನು ಕಡೆದಾಗ ಹುಟ್ಟಿತು.

ಇಂದ್ರನ ಕುದುರೆ



ಇದು ಯಂತ್ರದಿಂದ ಮಾಡಿದ ಕುದುರೆ ಕಥೆಗಳಲ್ಲಿ ಬರುತ್ತದೆ. ಈಗಿನ ವಿಮಾನಗಳಂತೆ ಆಕಾಶ ದಲ್ಲಿ ಎತ್ತ ಬೇಕಾದರೆ ಅತ್ತ ಹೋಗ ಬಲ್ಲುದಂತೆ.

ಕೀಲು ಕುದುರೆ

ಬಚ್ಚಣಿ ಕುದುರೆಗಳಿವು. ಇವುಗಳನ್ನು ಜಾತ್ರೆ ಜಾತ್ರೆಯಲ್ಲಿಯೂ ನೋಡಬಹುದು



ತೂಗು ಕುದುರೆ



ಇದು ಚೀನಾಸಮುದ್ರದಲ್ಲಿ ಸಿಕ್ಕುವ ಒಂದು ಪ್ರಾಣಿ ಕುದುರೆಯಂತೆ ಮುಖವಿರುವುದರಿಂದ ಇದನ್ನೂ ಕುಡುರೆಯೆನ್ನುತ್ತಾರೆ.

ಸಮುದ್ರದ ಕುದುರೆ



ಮಕ್ಕಳು ಇದರ ಮೇಲೆ ಕುಳಿತು ಹಿಂದಕ್ಕೂ ಮುಂದಕ್ಕೂ ತುಗಬಹುದು.

ಮರಗುದುರೆ



ಹುಡುಗರು ಚೆಂಡಿನಿಂದ ಆಡುವ ಆಟ.

ಕುದುರೆ ಚೆಂಡು



ಆಟಗಳಲ್ಲಿ ಸೋತವರು ಗೆದ್ದವರಿಗೆ ಕೊಡುವ ಕುದುರೆ

ಕುದುರೆ ಆಟ



ಹುಡುಗರು ಆಟಕ್ಕಾಗಿ ಮಾಡಿಕೊಳ್ಳುವ ಕುದುರೆ.

ಕೋಲುಕುದುರೆ



ಮರಳುಕಾಡಿನಲ್ಲಿ ಕಾಣಿಸುವ ಮೋಸ. ದೂರದಿಂದ ನೋಡಿದರೆ ನೀರಿದ್ದಂತೆ ಕಂಡುಬರುವುದು. ಹೋದ ಹೋದಂತೆಲ್ಲ ಅದು ದೂರಕ್ಕೆ ಹೋಗುತ್ತಲೇ ಇರುವುದು.

ಬಿಸಿಲು ಕುದುರೆ



ಬಂದೂಕಿಗೆ ಒಂದು ಮೊಳೆಯಿರುವುದು. ಅದನ್ನು ಮೀಟಿದರೆ ಒಂದೂಕು ಹಾರುವುದು ಅದಕ್ಕೆ ಕುದುರೆಯೆಂದು ಹೆಸರು.

ಬಂದೂಕಿನ ಕುದುರೆ




ಮೈಸೂರು ದೇಶದಲ್ಲಿ ಕುದುರೆಮುಖ ಎಂಬ ಶಿಖರವೊಂದಿದೆ.

೨

# ವಿನೋದ ಚಿತ್ರಗಳು



ನರಪೇತಲ.



ನಗೆಮುದ್ದ



ತಿರುಗಮುರುಗ.



ಜಂಟೀ ಕಳ್ಳರು.



ಮಂಕುಮಲ್ಲ.



ಅಳುಮುಂಜಿ.



ಹೊಟ್ಟೇಡುಬ್ಬ.



ಅಷ್ಟಾವಕ್ರ.

# ಸೋಮನಾಥಪುರದ ದೇವಸ್ಥಾನ.



ಇದು ಪ್ರಸನ್ನ ಚೆನ್ನಕೇಶವ ಸ್ವಾಮಿಗೆಂದು ಕಟ್ಟಿದ ದೇವಸ್ಥಾನ. ರಾಮಾಯಣ, ಮಹಾಭಾರತ, ಭಾಗವತ, ಕಥೆಗಳನ್ನೆಲ್ಲ ದೇವಸ್ಥಾನದ ಸುತ್ತಲೂ ಕೆತ್ತಿದೆ.

ಬಳ್ಳಾಳರಾಯನ ನೆಂಟನೂ, ಅಧಿಕಾರಿಯೂ ಆಗಿದ್ದ ಸೋಮನೆಂಬುವನು ಕ್ರಿಸ್ತಶಕ ೧೨೭೦ ರಲ್ಲಿ ಇದನ್ನು ಕಟ್ಟಿಸಿದನು.

ಇದನ್ನು ನೋಡುವುದಕ್ಕೆ ಬಹುದೂರ ದೇಶದಿಂದಲೂ ಜನರು ಬರುತ್ತಾರೆ.

# ಮಿಠಾಯಿ ಎಲ್ಲಿಂದ ಬಂತು?



೧

೨





೩

೪





೫

ಮಕ್ಕಳೇ!

ಚಿಕ್ಕವರಾಗಿರುವಾಗಲೇ ಚೊಕ್ಕಬುದ್ಧಿ ಕಲಿಯಿರಿ.




ಸೋಪು
ಬೇಕಾದಾಗ

ತಪ್ಪದೆ

"ಮೈಸೂರು
ಸೋಪು,
ಇದೆಯೇ?
ಕೊಡು
ವಿರಾ?"

ಎಂದೇ ಕೇಳಿ.

ಎಲ್ಲೆಲ್ಲಿಯೂ ಸಿಕ್ಕುತ್ತದೆ.

ಸರಕಾರದ ಸೋಪು ಕಾರಖಾನೆ
ಬೆಂಗಳೂರು

# ಜ್ಞಾಪಕದಾಟ



೧ ಹಕ್ಕಿ.



೨ ಹಾವು, ೧ ಹಕ್ಕಿ.



೩ ಕೋತಿ, ೨ ಹಾವು, ೧ ಹಕ್ಕಿ



೪ ಗೂಳಿ, ೩ ಕೋತಿ, ೨ ಹಾವು, ೧ ಹಕ್ಕಿ.



೫ ನರಿ, ೪ ಗೂಳಿ, ೩ ಕೋತಿ, ೨ ಹಾವು, ೧ ಹಕ್ಕಿ



೬ ಮೊಸಳೆ, ೫ ನರಿ, ೪ ಗೂಳಿ, ೩ ಕೋತಿ, ೨ ಹಾವು, ೧ ಹಕ್ಕಿ.



೭ ಕೋಣ, ೬ ಮೊಸಳೆ, ೫ ನರಿ, ೪ ಗೂಳಿ, ೩ ಕೋತಿ, ೨ ಹಾವು. ೧ ಹಕ್ಕಿ.



೮ ಒಂಟೆ, ೭ ಕೋಣ, ೬ ಮೊಸಳೆ, ೫ ನರಿ, ೪ ಗೂಳಿ. ೩ ಕೋತಿ, ೨ ಹಾವು, ೧ ಹಕ್ಕಿ.



೯ ಹುಲಿ, ೮ ಒಂಟೆ, ೭ ಕೋಣ, ೬ ಮೊಸಳೆ, ೫ ನರಿ, ೪ ಗೂಳಿ, ೩ ಕೋತಿ, ೨ ಹಾವು, ೧ ಹಕ್ಕಿ.



೧೦ ಆನೆ, ೯ ಹುಲಿ, ೮ ಒಂಟೆ, ೭ ಕೋಣ, ೬ ಮೊಸಳೆ, ೫ ನರಿ, ೪ ಗೂಳಿ, ೩ ಕೋತಿ, ೨ ಹಾವು, ೧ ಹಕ್ಕಿ

---

**ಮೇಲಿರುವ ಮೃಗಗಳನ್ನು ಗಮನಿಸಿ ನೋಡಿಕೊಳ್ಳಬೇಕು. ಕೂಡಲೇ ಪುಸ್ತಕವನ್ನು ಮುಚ್ಚಿಟ್ಟು ಜ್ಞಾಪಕದಿಂದ ಬಾಯುಲ್ಲಿ ಹೇಳಬೇಕು. ಇದೇ ಈ ಆಟದ ಗುಟ್ಟು**

(Adapted from TREASURE CHEST)

# ಜ್ಞಾಪಕದಾಟ

---

ಈ ಆಟವನ್ನು ಆಡುವುದು ಬಲು ಸುಲಭ. ಚಿತ್ರಗಳನ್ನು ನೋಡುವುದು, ಅದನ್ನು ಮುಚ್ಚಿಟ್ಟು ಬಾಯಲ್ಲಿ ಹೇಳುವುದು ಇದು ನೀನು ಮಾಡಬೇಕಾಗಿರುವ ಕೆಲಸ.

ಈ ಚಿತ್ರಗಳಲ್ಲಿ ಮೊದಲನೆಯದು ಹಕ್ಕಿ. ಅದನ್ನು ನೋಡಿ ನೆನೆಪಿನಲ್ಲಿಟ್ಟುಕೊ. ಅನಂತರ ಇರುವುದು ಹಾವುಗಳ ಚಿತ್ರ. ಇದರಲ್ಲಿ ಎರಡು ಹಾವುಗಳಿವೆ. ಈಗ ಪುಸ್ತಕವನ್ನು ಮುಚ್ಚಿ ೨ ಹಾವು, ೧ ಹಕ್ಕಿ ಎಂದು ಹೇಳಬೇಕು. ಹೀಗೆಯೇ ಮೂರು ಕೋತಿಗಳಿವೆ ಅವುಗಳನ್ನು ನೋಡಿ ಪುಸ್ತಕವನ್ನು ಮುಚ್ಚಿಟ್ಟು, ೩ ಕೋತಿ, ೨ ಹಾವು, ೧ ಹಕ್ಕಿ ಎಂದು ಹೇಳಬೇಕು

ಹೀಗೆಯೇ ಗೂಳಿ, ನರಿ, ಮೊಸಳೆ, ಕೋಣ, ಒಂಟೆ, ಹುಲಿ, ಆನೆ, ಮೊದಲಾದವುಗಳನ್ನೆಲ್ಲ ನೋಡಿ, ನೋಡಿ, ಕ್ರಮವಾಗಿ ಹೆಚ್ಚುಕಡಿಮೆಯಿಲ್ಲದಂತೆ ಹೇಳಬೇಕು. ಒಂದು ವೇಳೆ ಕ್ರಮವು ತಪ್ಪಿಹೋದರೆ, ಮತ್ತೊಂದುಸಲ ಆರಂಭಿಸಿ ಕೊನೆಯ ವರೆಗೆ ಹೇಳಬೇಕು.

# ವಿಜಯಪುರದ ಮಾತಿನ ಗೋಪುರ

ಬಿಜಾಪುರವು ಸುಮಾರು ೩೫೦ ವರ್ಷಗಳ ಕೆಳಗೆ ಮಹಮ್ಮದೀಯ ರಾಜ್ಯದ ರಾಜಧಾನಿಯಾಗಿತ್ತು. ಆಗ ಅಲ್ಲಿ ಆಳಿದ ದೊರೆಗಳಲ್ಲಿ ಮಹಮ್ಮದ್ ಅದಿಲ್ ಶಹನೂ ಒಬ್ಬ. ಆತನು ತನಗಾಗಿ ಕಟ್ಟಿಸಿಕೊಂಡ ಗೋರಿಯಿದು.



ಈ ಗೋಪುರವು ನೆಲದಿಂದ ೧೯೮ ಅಡಿ ಎತ್ತರವಾಗಿದೆ. ಒಂದು ಗೋಡೆಯಿಂದ ಇನ್ನೊಂದು ಗೋಡೆಗೆ ಸುಮಾರು ೬೦ ಅಡಿ ದೂರವಿದೆ ಆದರೆ ಒಂದು ಗಡಿಯಾರವನ್ನು ಗೋಡೆಯ ಹತ್ತಿರವಿಟ್ಟು ಇನ್ನೊಂದು ಕಡೆ ನಿಂತು ಕೇಳಿದರೆ ನಿನ್ನ ಕಿವಿಯ ಹತ್ತಿರವಿಟ್ಟುಕೊಂಡು ಕೇಳಿ ದಂತೆಯೇ ಕೇಳಿಸುವುದು. ಮತ್ತೆ ಎಷ್ಟು ಮೆತ್ತಗೆ ಮಾತನಾಡಿದರೂ ಅದು ಇನ್ನೊಂದು ಗೋಡೆಯ ಹತ್ತಿರ ಕುಳಿತವರಿಗೆ ಕೇಳಿಸುವುದು. ಅದಕ್ಕೋಸ್ಕರ ಇದಕ್ಕೆ "**ಮಾತಿನ ಗೋಪುರ**"ವೆಂದು ಹೆಸರು ಬಂದಿದೆ.

ಈಗ ಈ ಊರಿಗೆ ರೈಲಿದೆ.

# ಆಂಜನೇಯ



ಆಂಜನೇಯನು ಸೂರ್ಯನನ್ನು ನೋಡಿ, ಹಣ್ಣು ಎಂದುಕೊಂಡನು. ಕೂಡಲೇ ಅದನ್ನು ಹಿಡಿದು ನುಂಗಬೇಕೆಂದು ಅಂತರಿಕ್ಷಕ್ಕೆ ನೆಗೆದನು.

ಸೂರ್ಯನಿಗೆ ಕೋಪಬಂದು ಎಳೆದು ಕೆನ್ನೆಗೊಂದು ಕೊಟ್ಟನು. ಆಂಜನೇಯನು ಕೆಳಕ್ಕೆ ಬಿದ್ದನು. ಅವನ ಮೂತಿ ಕಪಿಯ ಮೂತಿ ಆಯ್ತು





ಮಗನಿಗೆ ಹೀಗಾಯ್ತು ಎಂದು ವಾಯುವಿಗೆ ಕೋಪಬಂದು ಎಲ್ಲೋ ಹೊರಟು ಹೋದನು ಎಲ್ಲರೂ ಕೆಟ್ಟೆವು ಎಂದು ಬ್ರಹ್ಮನ ಬಳಿಗೆ ಓಡಿದರು

"ಪ್ರಭು! ಉಸಿರಾಡಲು ಆಗುವುದಿಲ್ಲ" ಎಂದರು

ಬ್ರಹ್ಮನು "ಇರಲಿ" ಎಂದು ಬಂದು ಆಂಜನೇಯನಿಗೆ "ಯಾರು ಏತರಲ್ಲಿ ಹೊಡೆದರೂ ನಿನಗೆ ಪೆಟ್ಟಾಗದಿರಲಿ." ಎಂದು ವರವನ್ನು ಕೊಟ್ಟನು ಕೂಡಲೇ ಹನುಮಂತನು ಎದ್ದನು. ವಾಯುವಿಗೆ ಸಂತೋಷವಾಯ್ತು. ಮೊದಲಿನಂತೆ ಕೆಲಸಕ್ಕೆ ಹೊರಟನು.





ಆಂಜನೇಯನು ದೊಡ್ಡವನಾದನು, ಸುಗ್ರೀವನಿಗೆ ಮಂತ್ರಿಯಾದನು ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತಾ ಅಲ್ಲಿಗೆ ಬಂದರು ಅವನು ಅವರಿಬ್ಬರನ್ನೂ ಸುಗ್ರೀವನ ಬಳಿಗೆ ಕರೆದುಕೊಂಡುಹೋಗಿ, ಇಬ್ಬರಿಗೂ ಸ್ನೇಹ ಮಾಡಿಸಿದನು

ಸೀತೆಯನ್ನು ಹುಡುಕಿಕೊಂಡುಬರಲು, ಆಂಜನೇಯನು ಸಮುದ್ರವನ್ನು ದಾಟಿ ಲಂಕೆಗೆ ಹೋದನು





ಅಲ್ಲಿ ಲಂಕಿಣಿಯನ್ನು ಕೊಂದನು

ಅಶೋಕವನಕ್ಕೆ ಹೋಗಿ, ಸೀತೆಯನ್ನು ಕಂಡು, ರಾಮನ ಉಂಗುರವನ್ನು ಕೊಟ್ಟನು





ಅಲ್ಲಿ ತಂಟೆಮಾಡಿದನೆಂದು, ರಾಕ್ಷಸರು ಬಹು ಕಷ್ಟಪಟ್ಟು ಅವನನ್ನು ಹಿಡಿದು ರಾವಣನ ಬಳಿಗೆ ಎಳೆದುಕೊಂಡು ಹೋದರು. ಅಲ್ಲಿ ಅವನು ತನ್ನ ಬಾಲವನ್ನು ಸುತ್ತಿ ರಾವಣನ ಸಿಂಹಾಸನಕ್ಕಿಂತ ಎತ್ತರಮಾಡಿಕೊಂಡು, ಅದರ ಮೇಲೆ ಕುಳಿತನು.

ರಾವಣನಿಗೆ ರೇಗಿತ ; "ಈ ಕಪಿಯ ಬಾಲವನ್ನು ಸುಟ್ಟುಬಿಡಿ"ಯೆಂದನು ಬಾಲಕ್ಕೆ ಹೊತ್ತಿಸಿದ ಬೆಂಕಿಯಿಂದ ಲಂಕೆಯನ್ನೆಲ್ಲ ಸುಟ್ಟು, ಆಂಜನೇಯನು ತನ್ನ ಪಾಡಿಗೆ ತಾನು ಸುಗ್ರೀವನ ಬಳಿಗೆ ಬಂದನು.





ರಾಮನು ಕಪಿಸೈನ್ಯದೊಡನೆ ರಾವಣನ ಮೇಲೆ ದಂಡೆತ್ತಿಹೋದನು ಯುದ್ಧವಾಯಿತು ಯುದ್ಧದಲ್ಲಿ ಲಕ್ಷ್ಮಣನು ಮೂರ್ಛೆ ಬಿದ್ದನು. ಆಂಜನೇಯನು ಚಂದ್ರದ್ರೋಣ ಪರ್ವತವನ್ನೇ ತಂದನು ಅದರಲ್ಲಿದ್ದ ಮೂಲಿಕೆಗಳ ಬಲದಿಂದ ಲಕ್ಷ್ಮಣನ ಮೂರ್ಛೆ ಕಳೆಯಿತು

ಯುದ್ಧದಲ್ಲಿ ರಾಮನೇ ಗೆದ್ದನು: ಅನಂತರ ಸೀತಾ ಲಕ್ಷ್ಮಣ ಸುಗ್ರೀವ ಆಂಜನೇಯ ಮೊದಲಾದವರೊಡನೆ ಅಯೋಧ್ಯೆಗೆ ಹೋದನು. ಅಲ್ಲಿ ರಾಮನಿಗೆ ಪಟ್ಟಾಭಿಷೇಕವಾಯ್ತು. ಆಂಜನೇಯನು ರಾಮನ ಸೇವಕನಾಗಿ ಆತನ ಬಳಿಯಲ್ಲಿ ನಿಂತನು



# ಚಿತ್ರ ಲಿಪಿ

 ಯೆಂಬ  ರ  ನು

 ಯನ್ನೆಲ್ಲ  ದನು. 

 ಮೊದಲಾದ  ಗಳು 

 ದಲ್ಲಿರುವ  ಶಿಗೆ  ಟ್ಟರು

ಆತನು  ನವಗಿಾ ನುಂದಬ ಅನ್ನ  ಧ್ಯ ಹೆ ಮಾಡಿ,

ಇನವರ್ನು  ದನು.




ಹೋದಸಲ 'ಮ್ಯಾಟರ'' ವಿಷಯವಾಗಿ ಬರೆದೆ. ಹಾಗೆ ಬರೆಯುತ್ತಾ ''ಮ್ಯಾಟರ್' ಎಲ್ಲವೂ ಅಣುಗಳಿಂದ ಆಗಿದೆ ಅಣುಗಳೆಲ್ಲ ನಮ್ಮ ಜಗತ್ತಿನಲ್ಲಿರುವಂತೆ ಸೂರ್ಯ, ಗ್ರಹ, ಉಪಗ್ರಹ, ನಕ್ಷತ್ರಗಳೆಲ್ಲವೂ ಇದ್ದು ಅದೂ ಒಂದು ಬ್ರಹ್ಮಾಂಡವೆಂಬಂತಿದೆ ಬರೆದಿದ್ದೆ.

ಈ ಸಲ ಮ್ಯಾಟರ್' ಪರೀಕ್ಷೆ ನಡೆಯುವಾಗ ಏನೇನು ಸಿಕ್ಕಿದೆಯೆಂಬುದನ್ನು ನೋಡೋಣ.

ಮ್ಯಾಟರ್' ಯಾವಾಗಲೂ ನಮಗೆ ಗೊತ್ತಾದಾಗ ಕೆಲವು ಗುಣಗಳನ್ನು ಪಡೆದಿರುತ್ತದೆ. ಗುಣವೇ ಇಲ್ಲದ ಮ್ಯಾಟರ್ ನಮಗೆ ಗೊತ್ತೇ ಇಲ್ಲ. ತೂಕ, ದಪ್ಪ, ವೇದ ಲಾದವು ಈ ಗುಣಗಳು. ಹಾಗೆಯೇ ಶಬ್ದ, ಬೆಳಕು, ಉಷ್ಣ, ವಿದ್ಯುತ್ತು ಮೊದಲಾದವೆಲ್ಲ ನಮಗೆ ತಿಳಿದು ಬರುವುದು ಈ ಮ್ಯಾಟರ'ನಿಂದಲೇ! ಈ ಮ್ಯಾಟರ್' ಎಂಬುದು ಯಾವಾಗಲೂ ಒಂದು ವಿಧವಾಗಿ ಕಂಪಿಸುತ್ತಲೇ ಇರುತ್ತದೆ. ಈ ಕಂಪನಗಳು ಅಲೆ ಅಲೆಯಾಗಿ ಹರಿದು ಬರುತ್ತವೆ ಹರಿದು ಬರುವ ಈ ಅಲೆಗಳು ಬಂದು ನಮ್ಮ ಕಣ್ಣಿಗೆ ಬಿದ್ದರೆ, ಅದೇ ಬೆಳಕು. ಅದು ರೂಪಾಂತರವಾಗಿ ಕಿವಿಯಿಂದ ನವ ಗೆ ತಿಳಿದರೆ ಅದೇ ಶಬ್ದ. ಇನ್ನೊಂದು ರೂಪಾಂತರವಾಗಿ ಬಂದರೆ ಉಷ್ಣ ಮತ್ತೊಂದು ರೂಪಾಂತರವಾಗಿ ಬಂದರೆ, ಅದೇ ವಿದ್ಯುತ್ತು ಅಥವಾ ಎಲೆಕ್ಟ್ರಿಸಿಟಿ.

ಹಾಗಾದರೆ ಇಷ್ಟೆಲ್ಲಾ ಮಾಡುವ ಆ ಮ್ಯಾಟರ್' ಎಂಬುದು ಏನು? ಎಂದು ಒಂದು ಪ್ರಶ್ನೆ ಹುಟ್ಟುತ್ತದೆ ಅಲ್ಲವೆ? ಈ ಪ್ರಶ್ನೆಗೆ ಉತ್ತರವನ್ನು ತಿಳಿದು ಕೊಳ್ಳುವುದಕ್ಕೆ ನೀನು ಎನರ್ಜಿ ಎಂಬ ಇನ್ನೊಂದು ಪದವನ್ನು ತಿಳಿದು ಕೊಳ್ಳಬೇಕು. ಈ ಎನರ್ಜಿ

ಎಂಬುದೇ ಮ್ಯಾಟರಿನಿಂದ ಕಿರಣಗಳಂತೆ ಅಲೆಗಳಂತೆ ಹೊರಗೆ ಬಂದು ಇತರ ಪದಾರ್ಥ ಗಳನ್ನು ಸೇರಿ ಅಲ್ಲಿ ಕಾಣಿಸಿಕೊಳ್ಳುವುದು. ಹೀಗೆ ಬೆಳಕು, ಸದ್ದು, ಉಷ್ಣ, ವಿದ್ಯುತ್ತು ಇವೆಲ್ಲವೂ ಎನರ್ಜಿಯ ರೂಪಾಂತರಗಳು. ನಾವು ಶಕ್ತಿ ಎನ್ನುವುದಿಲ್ಲವೆ ? ಅದೇ ಈ ಎನರ್ಜಿ ಎನ್ನಬಹುದು. ಸೂರ್ಯನಿಂದ ಬಿಸಿಲಾಗಿ ನಮಗೆ ಬರುವುದು ಎನರ್ಜಿ. ನೀನು ಕಟ್ಟಿಗೆಯನ್ನು ಉರಿಸುವಾಗ ಉಷ್ಣವಾಗಿ ಕಾಣಿಸಿಕೊಳ್ಳುವುದು ಎನರ್ಜಿ ನೀನು ತಿಂದ ಆಹಾರವನ್ನು ಜೀರ್ಣಿಸುವುದು ಎನರ್ಜಿ. ಊರಿಂದ ಊರಿಗೆ ಬಂದು ದೀಪಗಳನ್ನು ಉರಿಸಿ, ಗಾಳಿಹಾಕಿ, ಅಡುಗೆ ಮಾಡುವ ವಿದ್ಯುತ್ತೂ ಎನರ್ಜಿ. ಭಾರಿ ಭಾರಿ ಗಾಡಿಗಳನ್ನು ಎಳೆದುಕೊಂಡು ಓಡುವ ಎಂಜನ್ನನಲ್ಲಿ ಕುಳಿತು ಕೆಲಸಮಾಡುತ್ತಿರುವುದು ಎನರ್ಜಿ.

ಒಟ್ಟಿನಲ್ಲಿ ಈ ಪ್ರಪಂಚದಲ್ಲಿ ಎಲ್ಲಿ ಏನೊಂದು ನಡೆದರೂ ಅದು ನಡೆಯುವುದಕ್ಕೆ ಎನರ್ಜಿ ಬೇಕೆ; ಬೇಕು.

ಹೀಗೆಂದ ಮೇಲೆ, ಈ ಎನರ್ಜಿಯು ಎಲ್ಲಿಂದ ಬರುತ್ತದೆ ? ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೇಗೆ ಹೋಗುತ್ತದೆ ? ಮೊದಲಾದ ಪ್ರಶ್ನೆಗಳು ಹುಟ್ಟುತ್ತವೆ ಈ ಎನರ್ಜಿಯು ಎಲ್ಲೆಲ್ಲಿಯೂ ಇದೆ. ಆದರೆ ಒಂದು ಕಡೆ ಕಾಣಿಸಿಕೊಳ್ಳುತ್ತದೆ, ಇನ್ನೊಂದು ಕಡೆ ಕಾಣಿಸುವುದಿಲ್ಲ. ಹಾಗೆಯೇ ಇದು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ಬರುತ್ತದೆ

" ಲೋಕದಲ್ಲೆಲ್ಲಾ ಮ್ಯಾಟರ್. ಅದಿಲ್ಲದ ಕಡೆ ಈಥರ್ ಇವೆರಡೂ ತುಂಬಿವೆ ಇವೆರಡೂ ಇಲ್ಲದ ಕಡೆಯೇ ಇಲ್ಲ ಎಂದು ಹಿಂದೆಹೇಳಿದೆನಲ್ಲ ಈ ಎನರ್ಜಿಯು ಮ್ಯಾಟರಿ ನಲ್ಲಿ ಕಾಣಿಸಿಕೊಂಡು ಈಥರ್‌ನಲ್ಲಿ ಹರಿದು ಬರುತ್ತದೆ ಈಗ ನೋಡು, ಪ್ರಪಂಚ ದಲ್ಲೆಲ್ಲಾ ಮ್ಯಾಟರ್ ಈಥರ್ ತುಂಬಿವೆ. ಮ್ಯಾಟರ್ ಎಂಬ ಮೀನು ಈಥರ್ ಎಂಬ ಸಾಗರದಲ್ಲಿ ಓಡಾಡುತ್ತಿದೆ ಎನರ್ಜಿ ಎಂಬುದು ಒಂದು ಮೀನಿನಿಂದ ಇನ್ನೊಂದು ಮೀನಿಗೆ ಹರಿದಾಡುತ್ತದೆ ಎಂದ ಹಾಗಾಯಿತು ಅಲ್ಲವೆ ?

ಈಗ ಮತ್ತೆ ಮ್ಯಾಟರ್ ಎಂದರೇನು ? ಎಂದು ಕೇಳು ಉತ್ತರವನ್ನು ನೀನೇ ಹೇಳಬಹುದು. ಮ್ಯಾಟರ್ ಎಂಬುದು ಎನರ್ಜಿಯನ್ನು ತುಂಬಿರುವ ಚೀಲಗಳು ಅವು ಈಥರ್ ಸಾಗರದಲ್ಲಿವೆ ಈಗ ವಿಜ್ಞಾನವು ಈಥರ್ ಸಾಗರ, ಎನರ್ಜಿ ಚೀಲವಾದ ಮ್ಯಾಟರ್ ಮೂಟೆ, ಇವುಗಳನ್ನು ಹಿಡಿದು ಪರೀಕ್ಷೆ ನಡೆಸುತ್ತಿದೆ

ಈ ಮ್ಯಾಟರ್ ಮೂಟೆಗಳಲ್ಲಿ ಬಹಳ ಭಾರಿಯಾದುದು ಬ್ರಹ್ಮಾಂಡ. ಬಹಳ ಸಣ್ಣವಾದುದು ಅಣು ರಚನೆಯಲ್ಲಿ ಎರಡೂ ಒಂದೇ ! ಆಕಾರದಲ್ಲಿ ಮಾತ್ರ ಹೆಚ್ಚು ಕಡಿಮೆ ! ಅಣುವು ವಾಮನಾವತಾರ ; ಬ್ರಹ್ಮಾಂಡವು ತ್ರಿವಿಕ್ರಮಾವತಾರ.

ಇತಿ, ಅಣ್ಣ —

# ಉತ್ತರ ಬರೆದವರ ಹೆಸರು

## ಚೌಕಬಂಧಕ್ಕೆ ಉತ್ತರ

**ಈ ಕೆಳಗೆ ಕಂಡಂತೆ ಬಹುಮಾನಗಳನ್ನು ಹಂಚಿದೆ :—**

ಮೊದಲನೆಯ ಬಹುಮಾನ :—ಎಚ್. ಬಾಸ್ಕರರಾವ್, ಆನವಟ್ಟಿ

ಎರಡನೆಯ ಬಹುಮಾನ :—ಶ್ರೀಮತಿ ಆನಂದಮ್ಮಾಳ್, ಆನವಟ್ಟಿ.

ಮೂರನೆಯ ಬಹುಮಾನ :—ಜಯಲಕ್ಷ್ಮಮ್ಮ. ಹೊಸಕೋಟೆ

ಐದು ಪುಸ್ತಕದ ಬಹುಮಾನಗಳು :—ಎ ಕಾಂತಮ್ಮ, ಬಾಗೇಪಲ್ಲಿ
ಟಿ. ಕೊಟ್ರಪ್ಪ. ಬಳ್ಳಾರಿ. ಪಿ. ಆರ್. ಶಾರದಮ್ಮ. ಆಯನೂರು
ಪಿ. ಯಲ್. ನಾರಾಯಣ, ಹಾರನಹಳ್ಳಿ ಎಂ. ಕೃಷ್ಣಮೂರ್ತಿ, ಸರ್ಜಾಪುರ

o o o o o o

ಒಗಟಿಗೆ ಮತ್ತು ಚಿತ್ರಲಿಪಿಗೆ ಉತ್ತರಬರೆದವರು :—ಕೆ ಆರ್ ರಂಗಯ್ಯಶೆಟ್ಟಿ
ಎಂ ಎಸ್. ಅಶ್ವತ್ಥನಾರಾಯಣರಾವ್,

## ಒಗಟೆ

೧ ಒಂದು ಆಡುತ್ತಿರುವುದು ಒಂದು ಓಡುತ್ತಿರುವದು, ಒಂದು ನಿಂತಿರುವದು ಅವು ಕೂಡಿಯೇ ಇರುವವು ಆದರೆ ಅವು ಯಾವು?

೨ ಊಟಮಾಡುವದು, ಆದರೆ ನೀರು ಕುಡಿಯುವುದಿಲ್ಲ. ಮಾತನಾಡುವದಿಲ್ಲ ಆದರೆ ನಾನ್ಯಾರು?

೩ ಆಟ್ಟದ ಮೇಲಿನ ಮಗಳು ಉಟ್ಟದ್ದೆಲ್ಲತ್ಯಾವಿ ರಾಜರಸೊಪ್ಪು ಹೆಣ್ಣು ಉಡಿದರೆ ಸಾವಿರ ಹೆಣ್ಣು.

೪ ಅಡಕೆಯು ಬಸರಾಗಿ ತಡಕೊಡಿಗೆ ಸುದ್ಧಿ ಕಳುಹಿಸಿ ಬಂದರೆ ನನ್ನವರೆಗೆ ಬಾ ಅನ್ನು, ಬಾರದಿದ್ದರೆ ನಾನು ನಾಡುಪಾಲಾಗಿ ಹೋಗುತ್ತೇನೆ

೫ ಹೊಟ್ಟೆತುಂಬ ಊಟಮಾಡಿಮೇಲೆ ಮಣ್ಣು ಹಾಕಿಕೊಳ್ಳುತ್ತದೆ ಆದರೆ ಅದಾವದು?

ಸರಸ್ವತಿಬಾಯಿ

ಮಕ್ಕಳ ಪುಸ್ತಕ



ಸತ್ಯಾಲಕ್ಷ್ಮೀ

ಚಿತ್ರಕಾರರು :— ಪಿ. ಆರ್. ಶರ್ಮ

“ಭಾರತಿ”ಯ ವಿಶ್ವಾಸದಿಂದ

Printed at the Makkala Pustaka Press, Bangalore City.




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ॥—ಭಾದ್ರಪದ —ಸೆಪ್ಟೆಂಬರ್ ೧೯೩೫ | ಪುಸ್ತಕ ೪

# ಗಿಡದ ಕೂಸು

ಪುಟ್ಟದೊಂದು ಕಾಳಿನೊಳಗಡೆ
ಸಣ್ಣ ಕೂಸು, ಮಣ್ಣ ನಡಿಯಲಿ,
ತನ್ನ ಹಾಸಿಗೆ ಹಾಸಿ ಬೆಚ್ಚಗೆ
ಹೊಟ್ಟು ಹೊದ್ದು ನಿದ್ದೆ ಮಾಡಿತು
ಬಿಸಿಲು ಕಿವಿಯಲಿ ಮೆಲ್ಲನುಸುರಿತು
ಏಳು ಕಂದನೆ! ಬೇಗನೆ!
ಮಳೆಯು ಹನಿಗಳು ಬಳಿಗೆ ಬಂದು
ಹಸಿವೆ? ತಮ್ಮ! ಎಂದಿತು.
ಮಣ್ಣ ನಡಿಯಲಿ ಕೂಸು ಹೊರಳುತಾ
ಕಣ್ಣ ಮೆಲ್ಲನೆ ತೆರೆಯಿತು.
ಬಿಸಿಲು ಮಳೆಗಳ ಕೂಡ ನಲಿಯಲು
ಹಸುರಿನೆಲೆಗಳ ನೀಡಿತು.

ನಾ. ಕಸ್ತೂರಿ




ಮಗೂ,

ಈ ಸಲ ನಿನಗೆ ಎರಡು ಮಾತು ಚೌಕ ಬಂಧ ಸ್ಪರ್ಧೆಯ ವಿಚಾರವಾಗಿ ಬರೆಯ ಬೇಕೆಂದು ಮನಸ್ಸು ಮಾಡಿದ್ದೇನೆ

ಈ ಸ್ಪರ್ಧೆಗಳು ಬಹಳ ಸುಲಭವಾಗಿವೆ. ಹುಡುಗರು ಮಕ್ಕಳು ಇದನ್ನು ಮಾಡಲಿ ಎಂದು ನನ್ನ ಆಸೆ ಅದಕ್ಕಾಗಿ ಇಷ್ಟು ಸುಲಭ ಮಾಡಿರುವುದು ನಿನಗೆ ತಟ್ಟನೆ ತೋರ ಬಹುದು, ದೊಡ್ಡವರ ಸಹಾಯವನ್ನು ತೆಗೆದು ಕೊಳ್ಳೋಣ ಎಂದು. ಆದರೆ ಹಾಗೆ ಮಾಡಬೇಡ ನೀನೇ ಸ್ವಂತವಾಗಿ ಶ್ರಮಪಟ್ಟು ಈ ಒಗಟನ್ನು ಬಿಡಿಸಿ ಸ್ಪರ್ಧೆಗೆ ನಿಲ್ಲು

ದೊಡ್ಡವರು ಇದನ್ನು ಮಾಡಬಾರದು ಮಕ್ಕಳು ಆಟವಾಡಿಕೊಳ್ಳುತ್ತ ಇದನ್ನು ಮಾಡುವುದನ್ನು ನೋಡಿ ಸಂತೋಷಪಡುವುದು ಅವರ ಪಾಲಿನ ಭಾಗ್ಯವಾಗಲಿ ದೊಡ್ಡವರೂ ಚಿಕ್ಕವರೂ ಎಲ್ಲರೂ ಒಂದೇ ಆಗುವುದು ಎಲ್ಲಿಯ ನ್ಯಾಯ ?

ಈ ಚೌಕ ಬಂಧ ಸ್ಪರ್ಧೆಯಿಂದ ಹುಡುಗರಲ್ಲಿ ಹುಮ್ಮಸ್ಸು ಹೆಚ್ಚಿ ಉತ್ಸಾಹವು ತಲೆದೋರಿ, ಅವರು ಪಾದರಸದಂತಾಗಲಿ ಎಂದೂ ಆ ಉದ್ದೇಶಕ್ಕೆ ಎಲ್ಲರೂ ಸಹಾಯ ಮಾಡಬೇಕೆಂದೂ ನಮ್ಮ ಆಶೆ

ಇತಿ,—ಅಣ್ಣ

---

## ಚಿತ್ರಪರಿಚಯ

ಈ ಸಲದ ಚಿತ್ರವು ಹೊಸ ಇಂಡಿಯದ್ದು. ಈಚೆಗೆ ೧೦-೧೨ ವರ್ಷಗಳಿಂದ ಇಂಡಿಯದಲ್ಲಿ ಹೊಸಕಲೆಯೊಂದು ಬಂದಿದೆ. ಅದು ಸ್ವದೇಶೀ. ಅದರ ತತ್ವವಿಷ್ಟ! ಬಡವನಾಗಲಿ, ಭಾಗ್ಯವಂತನಾಗಲಿ, ಇಂಡಿಯದಲ್ಲಿ ಮಾಡಿದ ಬಟ್ಟೆಯನ್ನು ಹಾಕಿಕೊಳ್ಳಬೇಕು. ಸಾಧ್ಯವಾದಮಟ್ಟಿಗೂ ಇಂಡಿಯದ ಹಣವು ಹೊರಗೆ ಹೋಗದಂತೆ ನೋಡಿಕೊಳ್ಳಬೇಕು.

ಈ ಸ್ವದೇಶಿ ಆರಂಭವಾಗಿ ಸುಮಾರು ೩೦ ವರ್ಷವಾಯಿತು. ಆದರೆ ಗಾಂಧಿಯವರ ಪ್ರಯತ್ನದಿಂದ ಇದು ಕಳೆದ ೧೦-೧೨ ವರ್ಷಗಳಲ್ಲಿ ಹಬ್ಬಿತು.

ಇದರ ಮೊದಲನೆಯ ಗುರುತಾಗಿ ಎಲ್ಲರೂ ಚರಕಗಳನ್ನು ತಿರುಗಿಸುವುದಕ್ಕೆ ಆರಂಭಿಸಿದರು. ಚರಕವು ಭಾರ, ಹೋದಹೋದಲ್ಲಿ ತಿರುಗಿಸುವುದು ಸಾಧ್ಯವಿಲ್ಲ. ಆದರಿಂದ ಅದನ್ನು ಬಿಟ್ಟು ತಕಲಿಗೆ ಆರಂಭಿಸಿದರು. ತಕಲಿಯು ಎಲ್ಲೆಲ್ಲಿಯೂ ತಾನೇ ತಾನಾಯ್ತು. ಹಾಗೆ ತಕಲಿ ನೂಲುತ್ತಿರುವ ಒಬ್ಬ ಹುಡುಗಿಯ ಚಿತ್ರವಿದು.

ಚಿತ್ರದಲ್ಲಿ ನೋಡು, ಹುಡುಗಿಯು ಬಡವರ ಮನೆಯವಳಲ್ಲ. ತಕ್ಕಷ್ಟು ಒಡವೆ ವಸ್ತ್ರಗಳಿವೆ. ಹುಡುಗಿಯು ಕಸೆಪಾವುಡೆಯನ್ನು ಉಟ್ಟಿದ್ದಾಳೆ? ರವಕೆಯನ್ನು ತೊಟ್ಟಿದ್ದಾಳೆ. ಪಕ್ಕದಲ್ಲಿ ಮಗುವೊಂದು ಕುಳಿತು ಆಟದ ಸಾಮಾನುಗಳನ್ನು ಇಟ್ಟುಕೊಂಡಿದೆ. ಬಲಗಡೆ ಬಾಗಿಲು ಅರ್ಧ ತೆಗೆದಿದೆ.



## ನಗುವ ಕೋತಿ

ಚಿಂಪಾಂಜಿಯು ವಾನರ ಗೋತ್ರಕ್ಕೆ ಎಂದರೆ ಕಪಿಯ ಜಾತಿಗೆ ಸೇರಿದುದು. ಈ ಚಿಂಪಾಂಜಿ ಕಪಿಯನ್ನು ಬಿಟ್ಟರೆ ಇನ್ನಾವುದೂ ಹಹ್ಹಹ್ಹ ಎಂದು ಮನುಷ್ಯನಂತೆ ನಗಲಾರದು. ಚಿಂಪಾಂಜಿಯು ಮನುಷ್ಯನನ್ನು ಇನ್ನೂ ಅನೇಕ ರೀತಿಗಳಲ್ಲಿ ಹೋಲುತ್ತದೆ.

---

# ಚಿತ್ರಲಿಪಿ

ನಮ್ಮ  ಯ  ದಲ್ಲಿ 

  ಇವೆ.  

 ಹಾಗೆ  ಅದರ  

ಗಾತ್ರ.  ತಲಪ್ಪಾಗ 

ಅಹೋ‌ಕೆಲ್ಲಿ ಗೆಸ.ವೂಾಗಿಡುರೆತ್ತಾ

## ಚೌಕಬಂಧ 'ಸ್ಪರ್ಧೆ'ಗೆ ಉತ್ತರಗಳು

| | | | | |
|---|---|---|---|---|
| ಅ ೧ | | ದ ೨ | | ವಿ ೩ |
| | ಗ ೪ | | ಕ ೫ | |
| ದ ೬ | | ಉ ೭ | | ರ ೮ |
| | ಮ ೯ | | ಡಿ ೧೦ | |
| ಮ ೧೧ | | ರು ೧೨ | | ಗ ೧೩ |

### ಬಹುಮಾನ ಪಡೆದವರು

ಒಂದನೆಯ ಬಹುಮಾನ :—(ಎರಡು ರೂಪಾಯಿ) ಶ್ರೀ ಆರ್ ರಾಮಮೂರ್ತಿ ಬಸವನಗುಡಿ, ಬೆಂಗಳೂರು

ಎರಡನೆಯ ಬಹುಮಾನ —(ಒಂದು ರೂಪಾಯಿ) ಎಚ್ ಶಂಕರಶಾಸ್ತ್ರಿ, ಹುಲಿಯೂರುದುರ್ಗ,

ಮೂರನೆಯ ಬಹುಮಾನ —(ಎಂಟಾಣೆ) ಎಂ ಶಂಕರಮ್ಮ, ರಂಗಪ್ಪನಹಳ್ಳಿ, ಚಿತ್ರದುರ್ಗ ಜಿll

೧ ಟಿ ಜಿ ಗೌರಮ್ಮ, ಹೊಸಕೋಟೆ, ೨ ಎಂ ಟಿ ಸಂಪತ್ಕುಮಾರ್, ಕುಣಿಗಲು ೩ ಎಲ್ ಎಲ್ ಚೊಕ್ಕಮ್ಮ, ಶ್ರವಣಬೆಳಗೊಳ, ೪ ಜಿ. ಪಿ ಚನ್ನಬಸಮ್ಮ ಹೊಸಕೋಟೆ, ೫ ಶ್ರಿ ರಾಜಮ್ಮ ಬೇಲೂರು, ೬ ಸಿ ರಾಮಸ್ವಾಮಿ, ಬಸವನಗುಡಿ, ಬೆಂಗಳೂರು ೭ ಕೆ ಮಂಜಪ್ಪಜೋಯಿಸ್, ತೀರ್ಥಹಳ್ಳಿ, ೮ ಎಂ. ಬಸವಯ್ಯ, ಹೆಗ್ಗರೆ, ೯. ಎಂ ಎಸ್. ಚಂದ್ರಶೇಖರ, ಮಡಿಕೆರೆ ೧೦ ಬಿ ಆರ್ ಗೋಪಿನಾಥ್ ಬಸವನಗುಡಿ ೧೧ ವಿ ರಾಜು, ಪ್ರೆಸಿಡೆನ್ಸಿ ಕಾಲೇಜ್ ೧೨ ಟಿ ಎಸ್ ಸಂಜೀವರಾವ್, ತುರುವನೂರು, ೧೩ ಎಂ ಚಂದ್ರಶೇಖರರಾವ್, ತುರುವೇಕೆರೆ ೧೪ ಬಿ ಎಸ್ ಲಕ್ಷ್ಮೀದೇವಿ, ಮಲ್ಲೇಶ್ವರಂ, ಬೆಂಗಳೂರು ೧೫ ಟಿ ಆರ್ ಭಾಗವತ್ ಬಿಜಾಪುರ ೧೬ ಕೆ ಪದ್ಮನಾಭ, ತೆರಕಣಾಂಬಿ, ೧೭ ಜಾನಕಮ್ಮ ಫ್ರೆಂಚ್‌ರಾಕ್ಸ್, ೧೮ ಟಿ. ಮುತ್ತಮ್ಮ, ಮಲ್ಲೇಶ್ವರ, ೧೯ ಎ ಯಾಮುನಮ್ಮ, ೨೦ ಎಚ್ ಎಂ ನರಸಿಂಗರಾವ್, ಸಿರಾ

### ಚಿತ್ರಲಿಪಿಯ ಉತ್ತರ

ಬಲಿಯೆಂಬ ರಾಕ್ಷಸರ ರಾಜನು ಭೂಮಿಯನ್ನೆಲ್ಲ ಆಕ್ರಮಿಸಿದನು ಇಂದ್ರ, ಯಮ ಮೊದಲಾದ ದೇವತೆಗಳು ಕ್ಷೀರಸಾಗರದಲ್ಲಿರುವ ವಿಷ್ಣುವಿಗೆ ಮೊರೆಯಿಟ್ಟರು ಆತನು ವಾಮನನಾಗಿ ಬಂದು ಅವನನ್ನು ಧ್ವಂಸಮಾಡಿ ಇವರನ್ನು ಕಾಪಾಡಿದನು

### ಒಗಟಿಗೆ ಉತ್ತರ

೧ ೧, ಆಡುತ್ತಿರುವುದು ಮೀನು, ಓಡುತ್ತಿರುವುದು ನೀರು, ನಿಂತಿರುವುದು ಕಲ್ಲು, ಮೂರು ಕೂಡಿರುವುದು ಹೊಳೆ ೨, ನುಸಿ (ಬಟ್ಟೆ ಹೊಡೆಯುವ ಹುಳು) ೩, ದಾಳಿಂಬರೆ ಹಣ್ಣು, ೪, ಹತ್ತಿಯ ತೊಳೆ, ೫, (ಕಾಳು ತುಂಬುವ) ಪಗೇವು

# ನೆರಳು ಬೊಂಬೆಗಳು.




೧. ಜಿಂಕೆ.

೨. ಒಂಟೆ.

ಬರೆದವರು.
ಕೊ ನರಸಿಂಹಾಚಾರಿ

ಕಿರಿಯ ಮಕ್ಕಳು ಓದಿನೋಡಿ
ಹಿರಿಯ ಮಕ್ಕಳು ಮಾಡಿನೋಡಿ

೩. ಷಾಮಾಯಿ ಮೇಕೆ.
೪. ಲಾಮಾಮೇಕೆ.
೫. ಬಾತು.
೬. ಹಂದಿ.
೭. ತೋಳ.
೮. ಮೇಕೆ.
೯. ಕುಂದಿಲಿ.
೧೦. ಆನೆ.
೧೧. ಎತ್ತು.
೧೨. ಕರಡಿ.
೧೩. ನಾಯಿ.
೧೪. ಚಿಟ್ಟೆ.
೧೫. ಕತ್ತೆ.

# ಈ ಸ್ಪಧೆಯ ನಿಯಮಗಳು

೧ ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದ್ದು ೨ ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು ೩. ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರ ಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು ೪. ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ -ಪುಸ್ತಕದ ಬಹುಮಾನ ೨೦ ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು. ೬ ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು. ೭ ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ, ಆದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ಸಿಲ್ಲಬಾರದಾಗಿ ಪ್ರಾರ್ಥನೆ.

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | | ೨ | | ೩ |
| | ೪ | | ೫ | |
| ೬ | | ೭ | | ೮ |
| | ೯ | | ೧೦ | |
| ೧೧ | | ೧೨ | | ೧೩ |

ರಿಜಿಸ್ಟರು ನಂಬರು......

.. .......... ..

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ.—

೧-೪-೬ ಕೆಲಸವಿಲ್ಲದಾಗ ಮಾಡುವ ಕೆಲಸ ೬ ೭ ದೇವರ ಪೂಜೆಗೆ ಬೇಕಾದ ಒಂದು ಪದಾರ್ಥ ೫-೮-೭ ದಾಸಯ್ಯನ ಆಯುಧಗಳಲ್ಲಿ ಒಂದು ೧೩-೧೦ ವೃಕ್ಷ ೧೩-೮-೩ ಹೆಣ್ಣುಮಗು ೧೦-೧೨ ಯುದ್ಧ ೬-೧೧ ಪತಿ

# ಮೈಸೂರ ಅರಸರು



## ಮೂಲಪುರುಷರು - ಯದುರಾಯರು

ಇವರು ಉತ್ತರದಿಂದ ಬಂದರು. ಹದಿನಾಡಿನಲ್ಲಿ ೧೩೯೯ರಲಿ ರಾಜ್ಯವನ್ನು ಸ್ಥಾಪಿಸಿದರು. ಆಗ ಒಂದು ಪಾಳೆಯಪಟ್ಟು ಆಗಿತ್ತು. ಬರುಬರುತ್ತ ದೊಡ್ಡದಾಯಿತು.

# ಮೈಸೂರ ಅರಸರು



## ಬಿರುದು ತಂದವರು-ರಣಧೀರರು

ಇವರ ಪೂರ್ಣ ಹೆಸರು, ರಣಧೀರಕಂಠೀರವ ನರಸರಾಜ ಒಡೆಯರು. ಇವರು ತಿರುಚನಾಪಳ್ಳಿಯ ಅರಸನ ಬಳಿಯಲ್ಲಿದ್ದ ಜಟ್ಟಿಯನ್ನು ಸೋಲಿಸಿ, ಆ ಅರಸನ ಬಿರುದುಗಳನ್ನೆಲ್ಲ ತಂದರು. ಇವರೂ ರಾಜ್ಯವನ್ನು ವಿಸ್ತರಿಸಿದರು.

# ಮೈಸೂರ ಅರಸರು



ರಾಜ್ಯವನ್ನು ಕಟ್ಟಿದವರು - ರಾಜಒಡೆಯರು

ಇವರು ರಾಜ್ಯವನ್ನು ಸುತ್ತಲೂ ಬೆಳೆಸಿದರು. ಶ್ರೀರಂಗಪಟ್ಟಣವು ಇವರ ಕೈಸೇರಿತು. ಮೈಸೂರು ಆಗ ರಾಜ್ಯವಾಯಿತು.

# ಮೈಸೂರ ಅರಸರು



ರಾಜ್ಯವನ್ನು ರೂಢಿಸಿದವರು – ಚಿಕ್ಕದೇವರಾಜ ಒಡೆಯರು.

ಇವರು ೩೨ ವರ್ಷ ರಾಜ್ಯವಾಳಿದರು. ತ್ರಿಗುಚನಾಪಳ್ಳಿಯಿಂದ ತುಂಗಭದ್ರೆಯವರೆಗೂ ರಾಜ್ಯವನ್ನು ವಿಸರಿಸಿದರು. ಔರಂಗಜೀಬನೊಡನೆ ಸ್ನೇಹವನ್ನು ಬೆಳೆಸಿದರು ಇವರು ತಮ್ಮ ಹೆಸರಿನ ವರಹಗಳನ್ನು ಹಾಕಿಸಿದ್ದರು.

# ಗೌತಮ

ಸುಮಾರು ೨೪೦೦ ವರ್ಷಗಳ ಹಿಂದೆ ಗಂಗಾನದಿಯ ಉತ್ತರದಲ್ಲಿ ಶಾಕ್ಯರೆಂಬ ಜನರು ಇದ್ದರು. ಶುದ್ಧೋದನನು ಅವರ ಅರಸನು. ಆತನ ಹೊಟ್ಟೆಯಲ್ಲಿ ಗೌತಮನೆಂಬ ಮಗನು ಹುಟ್ಟಿದನು.

ಆತನು ಬಾಲ್ಯದಿಂದಲೂ ಕರುಣಾಶಾಲಿ. ಇತರರ ದುಃಖವನ್ನು ಕಂಡರೆ ಮರುಗುವನು ಆತನಿಗೆ ಹಕ್ಕಿಗಳು ಹುಳುಗಳನ್ನು ತಿನ್ನುವುದು, ಹಕ್ಕಿಗಳನ್ನು ಮನುಷ್ಯರು ಹಿಡಿದು ಕೊಲ್ಲುವುದೂ ಕೂಡ ಸಹಿಸದು.

ಈತನು ದೊಡ್ಡವನಾದ ಮೇಲೆ ಒಂದು ದಿನ ಒಬ್ಬ ರೋಗಿಯನ್ನೂ ಇನ್ನೊಂದು ದಿನ ಒಂದು ಶವನನ್ನೂ ಕಂಡನು ತಾನು ಹೀಗೆ ರೋಗಿಯಾಗುವೆನು ; ತಾನೂ ಹೀಗೆ ಸಾಯುವೆನು ಎಂಬ ಯೋಚನೆಯು ಆತನಿಗೆ ಹಿಡಿಯಿತು ಅದರಿಂದ ಲೋಕವೇ ಬೇಡವಾಯಿತು ಒಳ್ಳೆಯ ಹೆಂಡತಿಯರು, ಎಳೆಯ ಮಗು, ಬೇಕಾದ ಐಶ್ವರ್ಯ, ಪದವಿ, ಎಲ್ಲವನ್ನೂ ಬಿಟ್ಟು ಕಾಡಿಗೆ ಹೊರಟುಹೋದನು

ಅಲ್ಲಿ ಒಬ್ಬನೇ ಕುಳಿತು ತಪಸ್ಸು ಮಾಡಿದನು ಲೋಕದಲ್ಲಿ ತುಂಬಿಕೊಂಡಿರುವ ದುಃಖವನ್ನು ಅಳಿಸುವುದೆಂತು ? ಎಂದು ಬಹಳವಾಗಿ ಚಿಂತಿಸಿದನು. ಆಶೆಯಿಂದ ದುಃಖ ಅದನ್ನು ಬಿಡಬೇಕು ಎಲ್ಲರೂ ವೈರಾಗ್ಯವಂತರಾಗಬೇಕು ಸನ್ಯಾಸಿಗಳಾಗಲೇಬೇಕು ಹಾಗಾದರೆ ಲೋಕದಲ್ಲಿ ದುಃಖವಿರುವುದಿಲ್ಲ ಎಂದು ಆತನಿಗೆ ತೋರಿತು

ಆ ಸಿದ್ಧಾಂತವನ್ನು ಎಲ್ಲರಿಗೂ ಬೋಧಿಸುತ್ತ ಬಂದನು ಬೀದಿಯ ಭಿಕಾರಿಗಳಿಂದ ಹಿಡಿದು ರಾಜಾಧಿರಾಜರವರೆಗೆ ಎಲ್ಲರೂ ಆತನ ಉಪದೇಶವನ್ನು ಪಡೆದು ಭಿಕ್ಷುಗಳಾದರು

ಆತನು ಕಾಶಿಯಿಂದ ಹಿಡಿದು ಪಾಟ್ನಾವರೆಗೆ ಇರುವ ವಿಸ್ತಾರವಾದ ದೇಶವನ್ನೆಲ್ಲ ಸುತ್ತಿ, ಸಾವಿರಾರು ಜನ ಶಿಷ್ಯರನ್ನು ಮಾಡಿದನು ಕೊನೆಗೆ ಒಂದು ದಿನ ತನ್ನ ಶಿಷ್ಯರನ್ನೆಲ್ಲ ಕರೆದು ಅವರಿಗೆ ಹೇಳಬೇಕಾದುದನ್ನೆಲ್ಲ ಹೇಳಿ ದೇಹವನ್ನು ಬಿಟ್ಟು ನಿರ್ವಾಣವನ್ನು ಪಡೆದನು ಗೌತಮನ ಸಿದ್ಧಾಂತವು ಜನರ ಮನಸ್ಸಿಗೆ ಹಿಡಿದು ಅದೇ ಒಂದು ಮತವಾಯಿತು ಅದಕ್ಕೆ ಬೌದ್ಧಮತವೆಂದು ಹೆಸರು ಈಗ ಪ್ರಪಂಚದಲ್ಲಿ ಕೋಟ್ಯಾಂತರ ಜನರು ಬೌದ್ಧಮತವನ್ನು ಅವಲಂಬಿಸಿದ್ದಾರೆ.

ಗೌತಮನ ವಿಚಾರವಾಗಿ ಅನೇಕರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಗೌತಮನು ಮಾಡಿದ ಉಪದೇಶಗಳನ್ನು ಆತನ ಶಿಷ್ಯರು ಬರೆದಿಟ್ಟಿದ್ದಾರೆ ಆ ಪುಸ್ತಕಗಳಿಗೆ ತ್ರಿಪಿಟಕ ಎಂದು ಹೆಸರು



## ದಿವಾ‌ನ್ ಪೂರ್ಣಯ್ಯನವರು

ಮೈಸೂರು ರಾಜ್ಯವು ಟಿಪ್ಪೂಸುಲ್ತಾನನಂತರ ಮತ್ತೆ ಮೈಸೂರಿನ ಒಡೆಯರಿಗೆ ಬಂತು ಆಗ ಮುಮ್ಮಡಿ ಕೃಷ್ಣರಾಜರು ಅರಸರಾದರು ಅವರಿಗೆ ಚಿಕ್ಕವಯಸ್ಸು. ಆದ್ದರಿಂದ ಆಗ ಒಬ್ಬ ಶಕ್ತರು ದಿವಾನರಾಗಬೇಕಾಯಿತು. ಪೂರ್ಣಯ್ಯನವರು ಆ ಕೆಲಸಕ್ಕೆ ಬಂದರು ಅವರು ಆ ಕೆಲಸವನ್ನು ಬಲು ಚೆನ್ನಾಗಿ ನಿರ್ವಹಿಸಿದರು ಪೂರ್ಣಯ್ಯನವರಿಗೆ ಒಂದು ತಾಲ್ಲೋಕು ಜಹಗೀರಿ ಈಗಲೂ ಇವರ ವಂಶದವರು ಜಹಗೀರಿಯನ್ನು ಅನುಭವಿಸಿಕೊಂಡು ಬರುತ್ತಿದ್ದಾರೆ



**ಕಾಬೂಲಿ**

ಚಿತ್ರಕಾರರು :—ಯಸ್. ವಿ. ಯಸ್. ರಾಮರಾವು

"ಭಾರತಿ"ಯ ವಿಶ್ವಾಸದಿಂದ

Printed at the Makkala Pustaka Press, Bangalore City.




ವಿದ್ಯಾ ಪರಾ ದೇವತಾ

ಕಟ್ಟು ೯ ‖ ಯುವ ಸಂ|| — ಆಶ್ವೀಜ — ಅಕ್ಟೋಬರ್ ೧೯೩೫ ‖ ಪುಸ್ತಕ ೫

# ಉತ್ತರನ ಪೌರುಷ

ನಾ. ಕಸ್ತೂರಿ.

"ಪತ್ತು ದೋಸೆ ತಿಂಬೆ ನಾನು ಚಟ್ನಿಯಿಲ್ದೆ ಒಂದೆ ಸಾರಿ!"
ಪೂರ್ತ ಒಂದನು ತಿನ್ನಲಾರ, ವಾಂತಿ ಮಾಡಿದ ರಕ್ತಕಾರಿ!!

"ಊರಿಗೆಲ್ಲಾ ನಾನೆ ಫಸ್ಟ್, ಒಂದು ಮೊಡಲನೂ ಬಿಡುವುದಿಲ್ಲ"
ಜೂನು ಮೂರಲಿ ಬಂತು ಲಿಸ್ಟು, ಅಯ್ಯೊ! ಪಾಪ! ಪಾಸೆ ಇಲ್ಲ!!

"ನೋಡುತಿರು ನೀ ಬಾಯಿಬಿಟ್ಟು, ನೂರು ಹೊಡೆವೇ ಬರುವೆ ನಿಂದು"
ಮೂರು ನಾಮವ ಬೇಗ ತೊಟ್ಟು, ಓಡಿಬಂದನು ಬ್ಯಾಟುಹಿಡಿದು!!

"ನಾರಣಪ್ಪ, ಪಂಪ, ರನ್ನ ರಂತೆ ತಾನೂ ಕಾಳಿದಾಸ!"
ಬರೆವು ತಿದ್ದಿ ಹತ್ತುಮಾಸ, ಕವಿತೆ ಮಾತ್ರ ದೊಡ್ಡ ಸೊನ್ನೆ!

"ಒಂಟಿಯಾಗಿ ಕಾಶಿ ಡಿಲ್ಲಿ ಹೋಗಿಬರುವೆ ರೈಲು ಹತ್ತಿ"
ಬೆಂಗಳೂರು ಸ್ಟೇಷನಲ್ಲೇ ಅತ್ತುಕರೆದ ಸುತ್ತಿ ಸುತ್ತಿ!!

# ಗೋರಿಲ್ಲ

ಹೋದಸಲ ನಗುವ ಕೋತಿಯ ಚಿತ್ರವನ್ನು ಕೊಟ್ಟಿದೆ. ಈ ಸಲ ಗೋರಿಲ್ಲ ಜಾತಿಯ ಕೋತಿಯ ಚಿತ್ರವನ್ನು ಕೊಟ್ಟಿದೆ. ಚಿತ್ರವು ಲಂಡನ್ನಿನ ಮೃಗಾಲಯದಲ್ಲಿರುವ ಗೋರಿಲ್ಲದ್ದು.

ಈ ಗೋರಿಲ್ಲ ಕೋತಿಯು ಆಫ್ರಿಕದಲ್ಲಿ ಮಾತ್ರವಿವೆ. ಸುಮಾರು ಕ್ರಿಸ್ತಪೂರ್ವ ಸುಮಾರು ೪೭೦ ರಲ್ಲಿಯೇ ಇದನ್ನು ರೋಮನ್ನರು (ಎಂದರೆ ಈಗಿನ ಇಟಾಲಿಯನ್ನರು) ಅರಿತಿದ್ದರು. ಆಗಿನ ಕಾಲದಲ್ಲಿ ಆಫ್ರಿಕದ ಉತ್ತರದ ಭಾಗದಲ್ಲಿ ಕಾರ್ಥೇಜ ಎಂಬ ರಾಜ್ಯವಿತ್ತು. ಅಲ್ಲಿನವರು ಇವನ್ನು ಬೇಟೆಯಾಡುತ್ತಿದ್ದರಂತೆ. ಆದರೆ ಯೂರೋಪಿಯನ್ನರು ಇದನ್ನು ಕಂಡುದು ಸುಮಾರು ೨೦೦ ವರ್ಷಗಳ ಹಿಂದೆ.

ಗೋರಿಲ್ಲ ಕೋತಿಯು ಕಾಡುಮನುಷ್ಯ ಎನ್ನಬಹುದು. ಅದು ಎತ್ತರದಲ್ಲಿ ನಮ್ಮಷ್ಟು ಇರುವುದಿಲ್ಲ. ನಾವು ಐದೂಮುಕ್ಕಾಲು ಆರು ಅಡಿ ಎತ್ತರವಿದ್ದರೆ ಅದು ನಾಲ್ಕು ಅಡಿ ಮಾತ್ರ ಎತ್ತರ. ಅದಕ್ಕೆ ಮೈಮೇಲೆ ಕರಡಿಯಂತೆ ಕರಿಯ ಕೂದಲು. ಅದರ ಮುಖವು ಕೆಂಪಗೆ ತಿಕ್ಕಿದ ಹಾಗೆ ಇರುತ್ತದೆ. ಮೂಗು ಸಪ್ಪಟೆ, ಬಾಯಿ ಊರಗಲ, ತುಟಿಗಳು ಉದ್ದವಾಗಿದ್ದು ಜೋಲಾಡುತ್ತವೆ. ಹುಬ್ಬು ಅದರಂತೆಯೇ ದಪ್ಪವಾಗಿದ್ದು ಕಣ್ಣುಗಳು ಗುಂಡಗಿರುತ್ತವೆ. ಕಿವಿಯು ಚಿಕ್ಕದು. ಇತರ ಕಪಿಗಳಿಗೆ ಇರುವಂತೆ ಇದಕ್ಕೆ ಕೆನ್ನೆಯ ಚೀಲಗಳಿಲ್ಲ. ನೀನು ಇದಕ್ಕೆ ಕಡಲೇಕಾಯಿ, ಗೋಡಂಬಿ (ಗೇರು ಪಪ್ಪು) ಮೊದಲಾದವನ್ನು ಕೊಟ್ಟರೆ ಅದು ದವಡೆಯಲ್ಲಿ ತುಂಬಿಟ್ಟುಕೊಳ್ಳಲಾರದು.

ಇದಕ್ಕೆ ತೋಳುಗಳು ಬಹಳ ಉದ್ದ. ಆದರೆ ಅಂಗೈ ಮಾತ್ರ ಕಿರಿದು. ಇದರ ಕೈಗಳಂತೆ ಕಾಲುಗಳೂ ಇರುತ್ತವೆ. ಎರಡಕ್ಕೂ ಅಷ್ಟು ವ್ಯತ್ಯಾಸವಿಲ್ಲ. ಮನುಷ್ಯರಿಗೆ ಪಕ್ಕೆಲುಬುಗಳು ಹನ್ನೆರಡು, ಇದಕ್ಕೆ ಮಾತ್ರ ಒಂದು ಹೆಚ್ಚು. ತಲೆಯ ಮಿದುಳು ಮನುಷ್ಯನ ಮಿದುಳಿನಲ್ಲಿ ಅರ್ಧಮಾತ್ರ. ಇದಕ್ಕೆ ಇತರ ಪ್ರಾಣಿಗಳಿಗಿಂತ ಬುದ್ಧಿ ಹೆಚ್ಚು.

ಇದು ನಮ್ಮಂತೆ ನಿಂತು ನಡೆಯಬಲ್ಲುದು. ಗಿನಿದೇಶದ ಕಾಡುಗಳಲ್ಲಿಯೂ ಪೂರ್ವ ಆಫ್ರಿಕದಲ್ಲಿಯೂ ಇದು ಹಿಂಡುಹಿಂಡಾಗಿ ವಾಸಿಸುತ್ತದೆ. ಮರಗಳ ಮೇಲೆ ಸೊಪ್ಪು ಸೆದೆಗಳಿಂದ ಒಂದು ಗೂಡುಕಟ್ಟಿ ಅಲ್ಲಿ ಹೆಣ್ಣನ್ನು ಮರಿಗಳನ್ನೂ ಇಟ್ಟು, ಗಂಡು ಕಾವಲಿರುತ್ತದೆ.

# ಆ ನಾಯಿ

ರಂಗೇಗೌಡನಿಗೆ ಎತ್ತು ಎಂದರೆ ಪಂಚಪ್ರಾಣ, ಅವನ ಎತ್ತುಗಳಿಗೂ ಹಾಗೆಯೇ



ಅವನ ಮೇಲೆ ಪ್ರಾಣ! ಅವನ ಹಾಗೆ ಎತ್ತುಗಳನ್ನು ಸಾಕುವವರು ಇನ್ನು ಇದ್ದಾರೆಯೋ ಇಲ್ಲವೇ ಇಲ್ಲವೋ!



ಗೌಡ ಎತ್ತುಗಳನ್ನು ಪರಿಷೆಗೆ ತೆಗೆದುಕೊಂಡುಹೋದ. ಅಲ್ಲಿ ಚೆನ್ನಾಗಿ ವ್ಯಾಪಾರ

ಪಾಯಿತು ಗೌಡನಿಗೆ ಸಾವಿರ ರೂಪಾಯಿ ಲಾಭಬಂತು. ಸಂತೋಷವಾಗಿ ಮನೆಗೆ ಹೊರಟ.



ದಾರಿಯಲ್ಲಿ ಬರುತಿರುವಾಗ ಸಂಜೆಯಾಗುತ ಬಂತು. ಹೊಳೆಯೂ ಸಿಕ್ಕಿತು. ಅಲ್ಲಿ ಇಳಿದು ಬುತ್ತಿ ತಿನ್ನೋಣವೆಂದು ಕುಳಿತುಕೊಂಡ: ಆ ಹೊತ್ತಿಗೆ ಸರಿಯಾಗಿ



ಅಲ್ಲಿಗೆ ಒಂದು ನಾಯಿಬಂತು. ಗೌಡನು ಅದಕ್ಕೂ ಅಷ್ಟು ಹಾಕಿ, ತಾನೂ ಬುತ್ತಿ ತಿಂದು ಮುಂದಕ್ಕೆ ಹೊರಟ ನಾಯಿಯೂ ಜೊತೆಯಲ್ಲಿಯೇ ಬಂತು. ಅರ್ಧರಾತ್ರಿಯಲ್ಲಿ

ಕಳ್ಳರು ಬಂದರು ಅವರು ಬರುತ್ತಿರುವುದನ್ನು ಅರಿತು ನಾಯಿಯು ಬೊಗಳಿತು ಗೌಡನಿಗೆ ಬಂದಿದ್ದ ನಿದ್ದೆಯೆಲ್ಲ ಓಡಿಹೋಗಿ ಎಚ್ಚರವಾಯಿತು ಇನ್ನೇನು ಗತಿ ಎಂದು ಗಾಬರಿಯಾಯಿತು ಎತ್ತುಗಳ ಬೆನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು ' ನೀವೇಗತಿ '' ಎಂದು ಹರಸಿಕೊಂಡು ಹಗ್ಗವನ್ನು ಸಡಲಿಸಿಬಿಟ್ಟನು



ಎತ್ತುಗಳು ಓಡಿ ಓಡಿ ಓಡಿದುವು ಕಳ್ಳರು ಅವುಗಳ ಜೊತೆಯಲ್ಲಿ ಓಡಲಾರದೆ ಹಿಂದೆ ಬಿದ್ದು ಹೋದರು ಗೌಡನ ಹಣವುಳಿಯಿತು ಪ್ರಾಣವುಳಿಯಿತು

ಮರುದಿನ ಸಂಜೆಹೊತ್ತಿಗೆ ಗೌಡನು ತನ್ನ ಊರಿಗೆ ಬಂದನು ನಾಯಿಯೂ ಜೊತೆಯಲ್ಲಿಯೇ ಬಂತು. ಗೌಡನು ತನ್ನ ಹಣ, ಪ್ರಾಣ, ವುಳಿಸಿದವು ಎಂದು ಆ ನಾಯಿಗೂ ಎತ್ತುಗಳಿಗೂ ಔತಣಮಾಡಿಸಿದನು.

ಔತಣದಲ್ಲಿ ಏನೇನು ಅಡಿಗೆ ಮಾಡಿತ್ತು ಹೇಳುವೆಯಾ ?

# ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣವು ೯೫೦ ವರ್ಷಗಳ ಹಿಂದೆ ಕಟ್ಟಿದ ಪಟ್ಟಣ. ಆಗ ತಲಕಾಡಿನಲ್ಲಿ ಗಂಗರೆಂಬ ಅರಸರು ರಾಜ್ಯ ವಾಳುತ್ತಿದ್ದರು. ಆಗ ತಿರುಮಲೈಯ್ಯನೆಂಬುವನು ಕಾವೇರಿಯ ನಡುವೆ ಇದ್ದ ಕಾಡು ಕಡಿದು ಊರನ್ನು ಕಟ್ಟಿದನು.

ಮುಂದೆ ನಾನೂರು ವರ್ಷಗಳ ಅನಂತರ ವಿಜಯ ನಗರದ ದಳವಾಯಿ ತಿಮ್ಮಣ್ಣನು ಅಲ್ಲಿ ಕೋಟೆಯನ್ನು ಕಟ್ಟಿದನು. ಅಲ್ಲಿಂದ ನೂರೈವತ್ತು ವರ್ಷಗಳಾದ ಮೇಲೆ ಈ ಕೋಟೆಯು ರಾಜಒಡೆಯ ರೆಂಬ ಮೈಸೂರು ಅರಸರಿಗೆ ಸಿಕ್ಕಿತು. ಆಗಿನಿಂದ ಅದರ ವೈಭವವು ಬೆಳೆಯುತ್ತ ಬಂದಿತು. ಕೊನೆಗೆ ಟಿಪ್ಪೂಸುಲ್ತಾನನ ಕಾಲದಲ್ಲಿ ಇಂಗ್ಲಿಷರು ಈ ಕೋಟೆಯನ್ನು ಹಿಡಿದು ಧ್ವಂಸಮಾಡಿದರು.

ಇಂಡಿಯಾದಲ್ಲೆಲ್ಲ ಬಹಳ ಬಲವಾದುದು ಭರತಪುರದ ಕೋಟೆ. ಅದಕ್ಕೆ ಎರಡನೆಯದು ಶ್ರೀರಂಗಪಟ್ಟಣದ ಕೋಟೆ ಶ್ರೀರಂಗಪಟ್ಟಣವು ರಾಜಧಾನಿಯಾಗಿದ್ದಾಗ ಅಲ್ಲಿ ಕೋಟೆ, ಪೇಟೆ, ದಂಡು ಎಂದು ಮೂರುಭಾಗಗಳಿದ್ದುವು. ಪೇಟೆಯು ಕೋಟೆಯ ಮುಂದೆ ಇತ್ತು ಅದಕ್ಕೆ ಆಗ್ನೇಯವಾಗಿ ದಂಡು ಇದ್ದ ಗಂಜಾಂ ಇತ್ತು. ಅದಕ್ಕೆ ಷಹರ್ ಗಂಜಾಂ ಎಂದು ಹೆಸರು.

ಶ್ರೀರಂಗಪಟ್ಟಣದಲಿ ನೋಡಬೇಕಾದ ಹಲವು ಸ್ಥಳಗಳಿವೆ. ಅವುಗಳ ಚಿತ್ರಗಳನ್ನು ಇಲಿ ಕೊಟ್ಟಿದೆ ನೋಡು.

# ಚಿತ್ರಲಿಪಿ

 ದಲ್ಲಿ  ಯು  ದು

 ಇದ್ದು 

 ವನ್ನು

 ಯಿತು.   ವು

ಕೂತುಕೊಂಗಿಡಿ
ಸುಪ್ಪವಸ್ತ್ರ ಮುರು
ಇಲೂತ್ತ

   

ಗಳಿಂದ  ಅದನ್ನು  ಧ್ವ ಹ ಮಾಡಿ ಆ ಸುಹವ

ನ್ನು ಬಿಬರುಡಿಕೊಂಡ.



ಕುತ್ತಾಲಂ ಜಲಪಾತ

# ಈ ಸ್ಪರ್ಧೆಯ ನಿಯಮಗಳು

೧ ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದು ೨ ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು ೩ ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು ೪ ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ ಪುಸ್ತಕದ ಬಹುಮಾನ ೨೦ ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು ೬ ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು ೭ ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ, ಆದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ಸಿಲ್ಲಬಾರದಾಗಿ ಪ್ರಾರ್ಥನೆ.

## ಚೌಕಬಂಧ ಸ್ಪರ್ಧೆ

| ೧ |  | ೨ |  | ೩ |
|---|---|---|---|---|
|  | ೪ |  | ೫ |  |
| ೬ |  | ೭ |  | ೮ |
|  | ೯ |  | ೧೦ |  |
| ೧೧ |  | ೧೨ |  | ೧೩ |

ರಿಜಿಸ್ಟರು ನಂಬರು ... ...

... ... ..... . .

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರ ಬರೆದವರ ವಿಳಾಸ:—

. . . .... . ..

..

೧-೪-೭ ಕೆಲಸವಿಲ್ಲದಾಗ ಮಾಡುವ ಕೆಲಸ ೬-೭ ದೇವರ ಪೂಜೆಗೆ ಬೇಕಾದ ಒಂದು ಪದಾರ್ಥ. ೫-೮-೭ ದಾಸಯ್ಯನ ಆಯುಧಗಳಲ್ಲಿ ಒಂದು ೧೩-೧೧ ವೃಕ್ಷ ೧೩-೮-೩ ಹೆಣ್ಣುಮಗು ೧೦-೧೨ ಯುದ್ಧ. ೬-೧೧ ಪತಿ.

# ಕಾಬೂಲಿ

ಈಸಲ ಮಕ್ಕಳ ಪುಸ್ತಕದಲ್ಲಿ ಬಂದಿರುವ ಚಿತ್ರವು ಕಾಬೂಲಿಯವನದು.

ಕಾಬೂಲಿಗಳು ಎತ್ತರವಾಗಿ ಚೆನ್ನಾಗಿ ಕೆಂಪಗೆ ಇರುತ್ತಾರೆ. ಇವರಲ್ಲಿ ಕುಳ್ಳರೂ ಕುರೂಪಿಗಳೂ ಅಪರೂಪ ಈಗ ಇವರೆಲ್ಲರೂ ಮಹಮ್ಮದೀಯರು ಇವರು ಇಂಡಿಯದ ಎಲ್ಲಾ ಭಾಗಗಳಲ್ಲಿಯೂ ಇದ್ದಾರೆ ಸಾಮಾನ್ಯವಾಗಿ ಲೇವಾದೇವಿ (ಎಂದರೆ ಹಣವನ್ನು ಬಡ್ಡಿಗೆ ಸಾಲಕೊಡುವುದು) ಇವರ ಕಸಬು.

ಕಾಬೂಲು ಎಂಬುದು ಇಂಡಿಯದ ವಾಯುವ್ಯಭಾಗದಲ್ಲಿರುವ ಆಫಘಾನಿಸ್ಥಾನದ ರಾಜಧಾನಿ ಈ ರಾಜ್ಯಕ್ಕೆ ಪೂರ್ವದಲ್ಲಿ ಗಾಂಧಾರ ಎಂಬ ಹೆಸರಿತ್ತು ಕೌರವರ ತಾಯಿಯಾದ ಗಾಂಧಾರಿಯು ಈ ರಾಜ್ಯದರಸನ ಮಗಳು

ಇಂಡಿಯಕ್ಕೆ ಸುಮಾರು ಐದುಸಾವಿರ ವರ್ಷಗಳ ಕೆಳಗೆ ಬಂದ ಆರ್ಯರು ಈ ರಾಜ್ಯದ ಮಾರ್ಗವಾಗಿಯೇ ಬಂದರು ಎಂದು ಹೇಳುತ್ತಾರೆ. ಈ ರಾಜ್ಯದಲ್ಲಿ ಬೌದ್ಧಧರ್ಮವು ಬಹಳ ಪ್ರಬಲವಾಗಿತ್ತು. ಈಗ ಈ ರಾಜ್ಯವು ಮಹಮ್ಮದೀಯ ಧರ್ಮವನ್ನು ಅವಲಂಬಿಸಿದೆ

ಇವರನ್ನು ಪಠಾಣರೆಂದೂ ಕರೆಯುತ್ತಾರೆ






ಹೋದಸಲ ನಾವು ನಮ್ಮ ಪ್ರೆಸ್ಸನ್ನು ಒಂದುಕಡೆಯಿಂದ ಇನ್ನೊಂದು ಕಡೆಗೆ ಬದಲಾಯಿಸಬೇಕಾಗಿ ಬಂತು. ಆದರಿಂದ ಮಕ್ಕಳ ಪುಸ್ತಕವು ಸಕಾಲಕ್ಕೆ ಹೊರಡ ಲಾಗಲಿಲ್ಲ. ಮಕ್ಕಳ ಪುಸ್ತಕವು ಸಕಾಲಕ್ಕೆ ಬರಲಿಲ್ಲವೆಂದು ನೀವು ಅನೇಕರು ಚೌಕ ಬಂಧಸ್ಪರ್ಧೆಗೆ ಉತ್ತರವನ್ನೇ ಬರೆದಿಲ್ಲ. ಇದರಿಂದ ಅನೇಕರಿಗೆ ಕೋಪಬಂದಿರಬಹುದು. ಆ ಕೋಪವು ಶಾಂತಿಯಾಗಲಿ. ಈಸಲವಾದರೂ ಉತ್ತರವನ್ನು ಬರೆದು ಕಳುಹಿಸಲಿ ಎಂದು ಹೋದಸಲದ ಚೌಕಬಂಧಸ್ಪರ್ಧೆಯನ್ನು ಮತ್ತೆಯೂ ಹಾಕಿದ್ದೇನೆ.

ಈಸಲ ಶ್ರೀರಂಗಪಟ್ಟಣದ ಚಿತ್ರಗಳನ್ನು ಸಂಪಾದಿಸಿ ಮುದ್ರಿಸಿದ್ದೇನೆ ನಮ್ಮ ನಾಡಾದ ಕರ್ಣಾಟಕದಲ್ಲಿ ವಿಜಯನಗರ ಶ್ರೀರಂಗಪಟ್ಟಣ ಇವು ಪ್ರಸಿದ್ಧವಾಗಿ ಬಾಳಿ ಬದುಕಿದ ನಗರಗಳು. ಈಗ ಪಾಳಾಗಿದ್ದರೂ ಒಂದಾನೊಂದು ಕಾಲವಲ್ಲಿ ಅವು ರಾಜ ಧಾನಿಯಾಗಿದ್ದವು. ಶ್ರೀರಂಗಪಟ್ಟಣದ ಕಥೆಯನ್ನು ವಿಸ್ತಾರವಾಗಿ ಸೆಕಂಡರಿ ಎಡಿಷನ್ ನಲ್ಲಿ ಬರೆದಿದ್ದೇನೆ ಓದಿನೋಡು.

ಈ ಪುಸ್ತಕವು ನಿನಗೆ ಬರುವ ವೇಳೆಗೆ ನವರಾತ್ರಿಯು ಆರಂಭವಾಗಿರುತ್ತದೆ

ಸರಸ್ವತೀಪೂಜೆಯು ಸಮೀಪವಾಗಿರುತ್ತದೆ ಈಸಲ ಶಾರದಾಪೂಜೆ ಮಾಡುವಾಗ "ಚೆನ್ನಾಗಿ ಅನುಗ್ರಹಿಸು, ತಾಯಿ!" ಎಂದು ಪ್ರಾರ್ಥನೆಮಾಡಿಕೊ.

ಇತಿ,

ನಿನ್ನ ಅಣ್ಣ—




# ಕುಣಿಯುವ ಕೋಣಂಗಿ

ಸರ್ಕಸ್ಸುಗಳಲ್ಲಿ ಯಕ್ಷಗಾನಗಳಲ್ಲಿ ಕೋಣಂಗಿಯು ಬರುವುದು ಉಂಟು. ಆ ಕೋಣಂಗಿಯು ಬರುವುದು ತಮಾಷೆ ಮಾಡುವುದಕ್ಕೆ ನೀನು ಅಂತಹ ಕೋಣಂಗಿ

ಯೊಂದನ್ನು ಮಾಡಿಕೊಂಡರೆ ಬೇಕಾದಾಗ ನೋಡಿ ನಗಬಹುದು. ಅದರಿಂದ ಕೋಣಂಗಿ ಮಾಡುವ ಗುಟ್ಟು ಹೇಳಿಕೊಡುತ್ತೇನೆ. ಕಲಿತುಕೊ, ಈಗ ಕೊಟ್ಟಿರುವ ಚಿತ್ರಗಳಲ್ಲಿ ಮೊದಲನೆಯದು ಒಂದು ಪೆಟ್ಟಿಗೆ ಎರಡನೆಯದು ಅದರ ಮುಚ್ಚಳ ಮೂರನೆಯದು ಕೋಣಂಗಿಯ ಅಂಗಾಂಗಗಳು ನಾಲ್ಕನೆಯದು ಎಲ್ಲವೂ ಸೇರಿರುವ ಕೋಣಂಗಿಯ ಬೆನ್ನು ಐದನೆಯದು ಪೆಟ್ಟಿಗೆಯಲ್ಲಿರುವ ಕೋಣಂಗಿ ಉದ್ದ ಹೆಚ್ಚಾಗಿ ಅಗಲ ಕಡಿಮೆ ಯಾಗಿರುವ ಕಾಗದವನ್ನು ತೆಗೆದುಕೊ. ಮೊದಲನೆಯ ಚಿತ್ರದಲ್ಲಿರುವ ಅಳತೆಯೇ ಇರಬೇಕೆಂಬ ಕಟ್ಟಿಲ್ಲ. ಅದರಂತೆ ಒಂದು ಕಾಗದವಿದ್ದರೆ ಸರಿ ಅದರಂತೆ ಮೊದಲು ನಾಲ್ಕು ಕಡೆ ಮೇಲೆ, ಕೆಳಗೆ, ಮುಚ್ಚಿರುವಂತೆ ಒಂದು ಪೆಟ್ಟಿಗೆ ಮಾಡಿಕೊಂಡು ಎರಡನೆಯ ಚಿತ್ರದಲ್ಲಿ ತೋರಿಸಿರುವಂತೆ ಒಂದು ಕಿಂಡಿ ಮಾಡಿಕೋ, ಆ ಕಿಂಡಿಗಿಂತ ಚಿಕ್ಕದಾಗಿ, ಆ ಕಿಂಡಿಯಲ್ಲಿ ಕಾಣಿಸುವಂತಹ ಕೋಣಂಗಿ ಮಾಡು ಕೋಣಂಗಿ ಮಾಡುವುದು ಹೇಗೆ ಎಂಬುದನ್ನು ಮೂರನೆಯ ಚಿತ್ರದಿಂದ ನೋಡಿಕೊ ಅದನ್ನು ಸೇರಿಸುವ ಗುಟ್ಟು ನಾಲ್ಕನೆಯ ಚಿತ್ರದಲ್ಲಿದೆ ಅದನ್ನು ಪೆಟ್ಟಿಗೆಯಲ್ಲಿ ಸೇರಿಸುವ ಕ್ರಮ ಐದನೆಯ ಚಿತ್ರದಲ್ಲಿದೆ

ಕೋಣಂಗಿಗೆ ಚಿತ್ರ ಚಿತ್ರದ ಬಣ್ಣಗಳಿರಬೇಕು ಇಲ್ಲದಿದ್ದರೆ ನೋಡುವುದಕ್ಕೆ ಚೆನ್ನಾಗಿರುವುದಿಲ್ಲ. ಜೊತೆಗೆ ಅಡ್ಡಡ್ಡ ಗೆರೆಗಳಿದ್ದರೆ, ಕುಣಿತ ಚೆನ್ನಾಗಿರುವುದಿಲ್ಲ ಅದರಿಂದ ಉದ್ದುದ್ದವಾಗಿ ಎಳೆ ಸಾಧ್ಯವಾದರೆ, ಬೊಂಬೆಯನ್ನು ರಬ್ಬರ್ ದಾರಗಳಿಂದ ತೂಗುಹಾಕು ಆಗ ಕುಣಿತವು ಚೆನ್ನಾಗುವುದು

---

## ಚಿತ್ರಲಿಪಿಗೆ ಉತ್ತರ

ನಮ್ಮ ಶಾಲೆಯ ತೋಟದಲ್ಲಿ ಹೂವೂ ಹಣ್ಣು ಬೇಕಾದಷ್ಟು ಇವೆ ಬಾಳೆಯಗಿಡವು ರಾವಣಾಸುರನ ಹಾಗೆ ಬೆಳೆದಿದೆ ಅದರ ಕಾಯಿ ಕೋಳಗಾತ್ರ. ಪಾಠವಾಗುತ್ತಲೂ ಉಪಾಧ್ಯಾಯರೂ ಶಿಷ್ಯರೂ ಅಲ್ಲಿಗೆ ಹೋಗಿ ಕೆಲಸಮಾಡುತ್ತಾರೆ

ಮಕ್ಕಳಪುಸ್ತಕ—



బాల - ಏಸುಕ್ರಿಸ್ತ

ಚಿತ್ರಕಾರರು :—ಜೆ ಸಿ. ಶೇಖರ್ "ಭಾರತಿ"ಯ ವಿಶ್ವಾಸದಿಂ

Printed at the Makkala Pustaka Press, Bangalore City




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ॥—ಕಾರ್ತೀಕ – ನವಂಬರ್ ೧೯೩೫ | ಪುಸ್ತಕ ೬

# ಪರಮೇಶ್ವರ ಹೇಳುವ ಹಾಡುಗಳು

ಸಂಗ್ರಹ :—ಹೊಯ್ಸಳ

೧

ನವಿಲಕಂಡೆ ನವಿಲ
॥ ಸೋಗೆಕಣ್ಣಿನ್ನವಿಲ ॥
ರಾಗೀಯ ಹೊಲಕೇ
ನುಗ್ಗಿತೊಂದ ನವಿಲೆ
ಸೋಗೆ ಕಣ್ಣಿನ ನವಿಲೆ
॥ ಮಾಗಿಹಬ್ಬದ ನವಿಲೆ ॥
ಹುತ್ತಾದ ಬಳ್ಳೀ
ಸುತ್ತೀತು ಕಾಲಾ
ಇತ್ತೀತ್ತ ಬಾರೋ
॥ ಹತ್ತಿರಕ್ಕೆ ನವಿಲೆ ॥
ಮಳೆಯಿಲ್ಲ ನವಿಲೇ
ಕರಿಮೋಡ ಕರೆಸೀ
॥ ಕಾಣೆಬಾರೊ ನವಿಲೇ ॥

೨

ಕಾಣೇಕೊ
ನೆಂಟಾರೇ
ಉಪ್ಪಾಣ್ಣಿಕೇ
|| ಅಕ್ಕಿಲ್ಲೇ ||
ನಾಕೂಟ್ಟಾ
ಭತ್ತಾ
|| ನಂದಲ್ಲೇ || ಸುವ್ವೀ ||
ನಾಕೂಟ್ಟೋ
ಬಾತ್ತಾ
ನಂದಲ್ಲಾ
|| ನೆಂಟಾರೇ ||
ಹೊತ್ತೀದ್ರೇ
ಹೋಗೀ
|| ಹೊಳೆ ಹಾಯ್ರೀ || ಸುವ್ವೀ

ಹಾಯ್ರೀ-ದಾಟಿರಿ-ಇಲ್ಲಿ ಪ್ರತಿಕಡೆಯಾ ಮಾತ್ರೆಯನ್ನು ಎಳೆದು ಎತ್ತರಿಸಿ ತಗ್ಗಿಸಿ ಹೇಳಬೇಕು

೩

ಕುಟ್ಟಾದೂ
ಕುಸಿ ಖೂಸೀ
ಬೀಸಾದೂ
|| ಬೇಸರಿಕೇ ||
ರೊಟ್ಟೀ
ತಟ್ಟಾದೇ
|| ಸೆಕೆ ಭಾಳಾ || ಸುವ್ವೀ ||
ರೊಟ್ಟೀ ತಟ್ಟಾದೇ
ಸೆಖೆ ಭಾಳಾ
|| ಅತ್ತಿಗಮ್ಮ ||
ಇಕ್ಯಂಡುಂಬೊದೇ
|| ನೆಗೆಭಾಳಾ || ಸುವ್ವೀ ||

೪

ಗಂಡಾನಾ
ಸುಖವೇನೇ
ಕೆಂಡಾದಾ
|| ತಂಪೇನೇ || ಸುವ್ವೀ
ಕೆಂಡಾದ
ತಂಪೇನೇ
ಕೊಂಡಂಥಾ
ಮೊಸರೂ
|| ಸವಿಯೇನೇ || ಸುವ್ವೀ ||

[ಹಾಡುಗಳನ್ನು ಹೇಳುವಾಗ ಪರಮೇಶ್ವರಿಯ ಸೌಖ್ಯಬರಬೇಕಾದರೆ ಕೈಲೊಂದು ಕೋಲುಹಿಡಿದು ಕುಟ್ಟುತ್ತಾ ಹೇಳಬೇಕು ಅಲ್ಲ! ಆ ಆನಂದ ಬೇಕಾದವರು ಮಾತ್ರ]

# ಪರಮೇಶ್ವರಿ

ಇದನ್ನೆಲ್ಲಾ ಹೇಳುತಿದ್ದವಳು ಪರಮೇಶ್ವರೀ ಘಟ್ಟಿತ್ತಿಗಿನವಳು, ಅವಳು ಸೌಭಾಗ್ಯವತಿ ಹೌದೋ ಅಲ್ಲವೋ ತಿಳಿಯದು. ನಾನು ಕಂಡಾಗ ಪರಮೇಶ್ವರೀಗೆ ವಯಸ್ಸು ಮೂವತ್ತು ಇದ್ದಿರಬಹುದು. ನಾನಾಗ್ಗೆ ಎಂಟುವರ್ಷದವನು. ನಮ್ಮಮ್ಮನಿಗಿಂತ ಚಿನ್ನಾಗಿ ಇದ್ದಳು ಅಷ್ಟುಮಾತ್ರಗೊತ್ತು. ಕಿವಿಗಳಲ್ಲಿ ಬಂಗಾರದ ಲೋಲಕ್ಕುಗಳು ಮೂಗುತಿ ಮೂಗಿಗೆ ಕೈಗಳಿಗೆ ಬಣ್ಣದ ಬಳೆಗಳು ಗಟ್ಟಿಮುಟ್ಟಾದ ಆಳು ಪಣತದಿಂದ ಎಷ್ಟು ಬತ್ತ ನಾವು ಸುರುಕೊಟ್ಟರೂ ಗೋಪುರದ ಮೇಲೆ ಸೂರ್ಯ ಕೂರೋಹೊತ್ತಿಗೆ ಮುಗಿಸಿಬಿಡುವಳು ವಂಪರಿಸಿ, ವನದು, ಇಡಿದು, ಕೇರಿ, ತೊಳಸಿ ಹೆಗ್ಗಲಿಸಿ ಇಷ್ಟರ ಮೇಲೆ ಗೊನೆಯಕ್ಕಿ ದೇವರ ಅಕ್ಷತೆ ಕಾಳಿಗೆ ತೆಗೆದಿಟ್ಟೂ ಸಹ! ಗಟ್ಟಿಹೆಂಗಸ.. ಹಾಡು ಹೇಳುತ್ತಾ ಒನಕೆ ಎತ್ತಿ ಹಾಕುವಳು ಬಲಗಾಲಲ್ಲಿ ಎಡಗಾಲಲ್ಲಿ ಬತ್ತತಳ್ಳಿಕೊಳ್ಳುವಳು ಒನಪು, ಒಯ್ಯಾರ, ನಗು ಮಾತು, ಕಥೆ, ಹಾಡು ಒಗಟೆ ಎಲ್ಲತುಂಬಿ ಬಿರುದು ದಾಳಿಂಬೆ ಹಣ್ಣಾಗಿದ್ದಳು ಪರಮೇಶಸ!

ಕಲ್ಲೇದುರ್ಗದ ಪಾಳೇಗಾರನಾದರೂ ನಿನ್ನ ಕಂಡಿದ್ದರೆ ಮದುವೆಮಾಡಿಕೊಳ್ಳೊನು ಕಣೇ "ಎಂದರೆ" ರಾಯರಪ್ಪ ಬೇಡಿ ವೊನಸಿಲ್ಲ ನಾಕ್ಕೆ "ಎನ್ನವನು ಯಾವಾಗ ಬಂದರೂ ಬಿದಲೊಳಗಿನ ಚದುರೆ ಹಾಗೆ ಹೋಪೆ, ಹೋಪೆ, ಅಮ್ಮಾ ಕೆಲಸ ಇತ್ತು, ಇಜ್ಜಿಯಾ, ಪರಮೇಶ್ವರಿ ಹೋವೆನಾನ್ನು" ಎಂದು ಓಡಿಬಿಡೂವಳು ಈಗಲೂ ಈ ಪದಗಳು ನೆನಪಿಗೆ ಬಂದರೆ ಪರಮೇಶ್ವರೀ ನೆನಸು ಬಂದೇಬರುತ್ತೆ ತುಂಬಿದ ಕುಪ್ಪಸ ಬೆಳ್ಳಿಯಡಾಬು, ಅಂಚಿನವಸ್ತ್ರ ಕಟ್ಟಿದತಲೆ ಪಾಡುಗದ ಕಾಲು ಎಲ್ಲಿಕ್ಕೂ ಮೇಲಾಗಿ ಅವಳ ನಗು ಇಷ್ಟೂ ಒಟ್ಟಾಗವವು ಕಣ್ಣೆದುರಲ್ಲಿ ಒಂದು ಚಿತ್ರವಾಗಿ ಮಾಯವಾಗವುದು ಅದು ಅಳಿಸಿಹೋದಾಗ ನಾಗಸಂಪಿಗೆಯು ಕಂಪು ಬಂದುಹೋಗುವುದು. ಅಂಥಾ ಪರಮೇಶ್ವರಿಯ ಹಾಡುಗಳಿವು

# ಚಿತ್ರಪರಿಚಯ

ಮನುಷ್ಯನು ದೇವರನ್ನು ನಂಬಿದ್ದಾನೆ. ಅಷ್ಟೇ ಅಲ್ಲ. ದೇವರನ್ನು ಕಾಣುವುದಕ್ಕೂ ಪ್ರಯತ್ನಮಾಡುತ್ತಾನೆ. ಹೀಗೆ ದೇವರನ್ನು ಕಾಣುವ ಪ್ರಯತ್ನಗಳಿಗೇ ಮತ ಅಥವಾ ಧರ್ಮ ಎಂದು ಹೆಸರು. ಹೀಗೆ ದೇವರನ್ನು ಕಾಣುವ ಉಪಾಯಗಳನ್ನು ಅನೇಕರ ಲೋಕಕ್ಕೆ ಹೇಳಿಕೊಟ್ಟಿದ್ದಾರೆ. ಹಾಗೆ ಹೇಳಿಕೊಟ್ಟವರು ಗುರುಗಳು ಇಂತಹ ಗುರುಗಳಲ್ಲಿ ಕ್ರಿಸ್ತನೂ ಒಬ್ಬ.

ಯೇಸುಕ್ರಿಸ್ತನು ಸುಮಾರು ೨೦೦೦ ವರ್ಷಗಳ ಹಿಂದೆ ಹುಟ್ಟಿದನು. ಅವನು ಹುಟ್ಟಿದುದು ಯೆಹೂದ್ಯರ ಕುಲದಲ್ಲಿ ಆತನು ಹೊಸದೊಂದು ಮಾರ್ಗವನ್ನು ಬೋಧಿಸಿದನು. " ಮನುಷ್ಯರೆಲ್ಲರೂ ದೇವರ ಮಕ್ಕಳು. ಎಲ್ಲರೂ ಒಬ್ಬರನ್ನು ಒಬ್ಬರು ಪ್ರೀತಿಸಬೇಕು ಹಾಗೆ ಮಾಡಿದರೆ ದೇವರ ರಾಜ್ಯವು ಇಲ್ಲಿಯೇ ಬರುವುದು" ಎಂದು ಬೋಧಿಸಿದನು.

ಆತನ ಕಾಲದಲ್ಲಿ ಜನರು ಆತನು ಹೇಳಿದುದನ್ನು ನಂಬಲಿಲ್ಲ: ಕೇಳಲಿಲ್ಲ: ಆತನನ್ನು ಅಪರಾಧಿಯೆಂದು ಶಿಕ್ಷೆಗೆ ಗುರಿಮಾಡಿ ಶೂಲಕ್ಕೆ ಹಾಕಿಸಿದರು ಆದರೇನು? ಆತನ ಉಪದೇಶವು ಸಾಯಲಿಲ್ಲ. ಆತನ ಶಿಷ್ಯರು ಹೆಚ್ಚಿದರು ಈಗ ಪ್ರಪಂಚದಲ್ಲಿ ಕ್ರಿಸ್ತನ ಹೆಸರು ಹೇಳುವ ಶಿಷ್ಯರು ಅನೇಕ ಕೋಟಿಯಿದ್ದಾರೆ.

ಈಸಲ ಕೊಟ್ಟಿರುವ ವರ್ಣಚಿತ್ರವು ಆ ಪುಣ್ಯಾತ್ಮನದು.

ಮಗು ಕ್ರಿಸ್ತನನ್ನು ಅವನ ತಾಯಿತಂದೆಗಳು ಆಡಿಸುತ್ತಿದ್ದರೆ.

# ಜಗತ್ತಿನ ಕಥೆ

## (ನಾವರಿಯದ ಪ್ರಾಣಿಗಳು)

---

ಜಗತ್ತು ಹುಟ್ಟಿ ೧೯೫,೫೮,೮೫,೦೩೬ ವರ್ಷಗಳಾಯಿತು. ಎಂದು ನಮ್ಮ ವಿದ್ವಾಂಸರು ಹೇಳುತ್ತಾರೆ ಯೂರೋಪಿನ ವಿದ್ವಾಂಸರು ಸುಮಾರು ೨೦೦,೦೦ ಲಕ್ಷ ವಾಗಿದೆ ಯೆನ್ನುತ್ತಾರೆ.

ಇಷ್ಟು ಭಾರಿಯ ಕಾಲದಲ್ಲಿ ಈ ಜಗತ್ತಿನಲ್ಲಿ ಎಷ್ಟು ಪ್ರಾಣಿಗಳು ಬಾಳಿ ಬದುಕಿ ಮಣ್ಣುಪಾಲಾಗಿವೆ ಯೆಂಬುದನ್ನು ಊಹಿಸುವುದಕ್ಕೂ ಸಾಧ್ಯವಿಲ್ಲ. ಹಾಗೆ ಊಹಿಸು ವುದಕ್ಕೂ ಸಾಧ್ಯವಿಲ್ಲದ ಕೆಲವು ಪ್ರಾಣಿಗಳು ಇದ್ದುವು ಎಂಬುದಕ್ಕೆ ಸಾಕ್ಷಿಯಾಗಿ ಅವುಗಳ ಅಸ್ಥಿಪಂಜರಗಳು ಸಿಕ್ಕಿವೆ. ವಿದ್ವಾಂಸರು ಅವುಗಳನ್ನು ಪರೀಕ್ಷಿಸಿ ಅವು ಹೀಗೆ ಹೀಗೆ ಇದ್ದುವು ಎಂಬುದನ್ನು ನಿಶ್ಚಯಿಸಿದ್ದಾರೆ ಆಯಾ ಪ್ರಾಣಿಗಳ ಆಕಾರವನ್ನು ಮಾಡಿಟ್ಟಿ ದ್ದಾರೆ ಅಂತಹ ಪ್ರಾಣಿಗಳ ಚರಿತ್ರೆಯನ್ನು ಎಂದರೆ ಅವು ಯಾವಾಗ ಇದ್ದುವು ಏನು ತಿಂದು ಬದುಕುತ್ತಿದ್ದುವು ಏಕೆ ಸತ್ತುಹೋದುವು. ಮೊದಲಾದ ಅಂಶಗಳನ್ನು ಈಗ ನೋಡೋಣ

ಈ ಕಥೆಯು ತಿಳಿಯುವುದಕ್ಕೆ ಮೊದಲು ಈ ನೆಲದ ಕಥೆಯನ್ನು ಅಷ್ಟು ನೆನೆ ಯೋಣ. ನಮ್ಮ ಕಣ್ಣಿಗೆ ಕಾಣುವ ನೆಲವನ್ನು ಅಗೆದು ನೋಡಿದರೆ, ಅದು ಪದರ ಪದರವಾಗಿರುವುದು ತಿಳಿಯುವುದು ಈ ಪದರಗಳೆಲ್ಲ ಒಂದೇ ದಿನ ಆದವಲ್ಲ ಒಂದೊಂದು ಪದರವಾಗುವುದಕ್ಕೂ ಎಷ್ಟೋದಿನಗಳಿರಲಿ ಎಷ್ಟೋ ವರ್ಷಗಳು ಹಿಡಿದಿವೆ. ಈ ಶಾಸ್ತ್ರ ವನ್ನು ತಿಳಿದವರು ಆರು ಯುಗಗಳು ಹಿಡಿದಿವೆಯೆನ್ನುತ್ತಾರೆ

ಮೊದಲನೆಯ ಯುಗದಲ್ಲಿ ಈ ಪೃಥ್ವಿಯು ಉರಿಯುವ ಗೋಳವಾಗಿತ್ತು. ಈಗ ಸೂರ್ಯನಿಲ್ಲವೆ ಹಾಗೆ ಅದು ಬರುಬರುತ್ತ ಆರಿ, ಸಾಗರಗಳೂ ಪರ್ವತಗಳೂ ಏರ್ಪಟ್ಟವು ಈಗಲೂ, ಭೂಗರ್ಭವು ಎಂದರೆ ಭೂಮಿಯ ಒಳಗೆ ಬೆಂಕಿಯಿದೆ ಅದರಿಂದಲೇ ಅಲ್ಲಲ್ಲಿ

ಜ್ವಾಲಾಮುಖಿಗಳು ಏರ್ಪಡುವುದು. ಭೂಗರ್ಭದಲ್ಲಿರುವ ಬೆಂಕಿಯೇ ಭೂಮಿಯ ಮೇಲ್ಭಾಗವನ್ನು ಒಡೆದುಕೊಂಡು ಮೇಲಕ್ಕೆ ಬರುತ್ತದೆ. ಆಗ ನಾವು ಅದನ್ನು ಜ್ವಾಲಾಮುಖಿಯೆನ್ನುತ್ತೇವೆ.

ಎರಡನೆಯ ಯುಗದಲ್ಲಿ ಸಾಗರಗಳಲ್ಲಿ ಜೀವದ ಉತ್ಪತ್ತಿಯಾಯಿತು. ಹಾಗೆಯೇ ಜ್ವಾಲಾಮುಖಿಗಳಿಂದ ಹೊರಟು ಹರಿದುಬಂದ ಲಾವಾರಸವು ಆರಿ ಬಂಡೆಗಳಾಯಿತು· ಆಗ ಈ ಜಗತ್ತಿನಲ್ಲಿ ಹುಳು ಹುಪ್ಪಟೆ ಕೂಡ ಇರಲಿಲ್ಲ ಪಾಚಿಯ ಸಸ್ಯಗಳು ಇದ್ದುವು ಅಷ್ಟೆ !

ಮೂರನೆಯ ಯುಗದಲ್ಲಿ ಅನೇಕ ಹುಳು ಹುಪ್ಪಟೆಗಳು ಹುಟ್ಟಿದುವು ಅವೆಲ್ಲವೂ ನೀರಿನಲ್ಲಿಯೇ ಇದ್ದು ಬಾಳಿ ಬದುಕಿದವು

ನಾಲ್ಕನೆಯ ಯುಗದಲ್ಲಿ ಹುಳು ಹುಪ್ಪಟೆಗಳು ಬೆಳೆದು ಮೀನು ಮೊದಲಾದ ಬೆನ್ನೆಲುಬು ಇರುವ ಪ್ರಾಣಿಗಳಾದುವು ಬರುಬರುತ್ತ ಮೀನುಗಳಿಂದ ಕಪ್ಪೆಯ ಜಾತಿಯ ಪ್ರಾಣಿಗಳು ಹುಟ್ಟಿದುವು. ಇವು ಹುಟ್ಟುವ ವೇಳೆಗೆ ಭೂಮಿಯ ಮೇಲೆ ಗಿಡಗಳೂ ಹುಟ್ಟಿದುವು. ಹಾವಿನ ಜಾತಿಯ ಪ್ರಾಣಿಗಳು ಬಂದುದೂ ಈ ಯುಗದಲ್ಲಿಯೇ !

ಐದನೆಯ ಯುಗದಲ್ಲಿ ಪ್ರಾಣಿಗಳೂ ಗಿಡಮರಗಳೂ ಭಾರಿಯಾಗಿ ಬೆಳೆದುವು. ಆಗಿನ ಒಂದೊಂದು ಮರವೂ ಒಂದೊಂದು ಗುಡ್ಡದಷ್ಟು ಎತ್ತರ, ಒಂದು ಮನೆಯಷ್ಟು ದಪ್ಪ, ಹಾಗೆಯೇ ಆಗಿನ ಪ್ರಾಣಿಗಳೂ ಒಂಟೆಗಿಂತ ಎತ್ತರ ಆನೆಗಿಂತ ದಪ್ಪ.

ಆರನೆಯ ಯುಗವು ಈಚಿನದು ಈ ಯುಗದಲ್ಲಿ ಪೃಥ್ವಿಯಲ್ಲಿ ಅಲ್ಲಲ್ಲಿ ಹಿಮವು ಬಿದ್ದು ನೆಲವು ಮುಚ್ಚಿಹೋಯಿತು. ಈ ಯುಗದಲ್ಲಿಯೇ ಕುದುರೆ, ಕಪಿ, ಮನುಷ್ಯರು ಮೊದಲಾದ ಜಂತುಗಳು ಹುಟ್ಟಿದುದು.

ಈ ಲೇಖನದಲ್ಲಿ ಮನುಷ್ಯರು ಹುಟ್ಟುವುದಕ್ಕೆ ಎಷ್ಟೋ ಲಕ್ಷ ವರ್ಷಗಳ ಹಿಂದೆ ಭೂಮಿಯಲ್ಲಿ ವಾಸವಾಗಿದ್ದ ಜಂತುಗಳ ಕಥೆಯನ್ನು ನೋಡೋಣ.

---

# ಜಗತ್ತಿನ ಇತಿಹಾಸದ ಚಿತ್ರ

ಈ ಚಿತ್ರವು ಈ ಪೃಥ್ವಿಯ ಮೂರು ಯುಗಗಳ ಇತಿಹಾಸವನ್ನು ತೋರಿಸುತ್ತದೆ. ಮೇಲಿನಿಂದ ಕೆಳಗೆ ಎಳೆದಿರುವ ಗೆರೆಗಳು ಒಂದೊಂದು ಯುಗದಲ್ಲಿಯೂ ಇದ್ದ ವಿಭಾಗ ಗಳನ್ನು ತೋರಿಸುತ್ತದೆ ಮೊದಲಿನ ಆರುಭಾಗಗಳ ನಾಲ್ಕನೆಯ ಯುಗದ ಇತಿಹಾಸ ವನ್ನೂ ಆ ಮೇಲಿನ ಮೂರು ಐದನೆಯ ಯುಗವನ್ನು ಕೊನೆಯದು ಆರನೆಯ ಯುಗ ವನ್ನು ತೋರಿಸಿಕೊಡುತ್ತದೆ.



ಹಾಗೆಯೇ ಅಲ್ಲಲ್ಲಿ ೧,೨, ಮೊದಲಾಗಿ ಅಂಕಿಗಳನ್ನು ಹಾಕಿರುವುದನ್ನು ನೋಡು. ಅವುಗಳ ವಿವರಗಳು ಹೀಗೆ.

(೧) ಜೇಡನ ಜಾತಿಯ ಹುಳುಗಳು
(೨) ಚೇಳುಗಳು
(೩) ಕಡಲು ಚೇಳು
(೪) ಹುಳು
(೫) ಕೀಟಗಳು ಚಿಟ್ಟೆಗಳು
(೬) ಮುಮ್ಮೂಲೆಯಾಗಿರುವ ಹುಳುಗಳು
(೭) ನಳ್ಳಿ (ಏಡಿ)ಗಳು
(೮) ಬಸವನ ಹುಳು
(೯) ಚಿಪ್ಪಿನ ಹುಳುಗಳು
(೧೦-೧೧) ನೀರಿನ ಹುಳುಗಳು.
(೧೨-೧೩-೧೪-೧೫-೧೬) ಗಿಡಗಳಂತಿರುವ ಮೀನುಗಳು
(೧೭-೧೮) ಮೊದಮೊದಲು ಬಂದ ಮೀನುಗಳು
(೧೯) ಮೀನುಗಳು
(೨೦) ನೀರಿನ ಮೇಲೂ ಭೂಮಿಯ ಮೇಲೂ ಇರುವ ಕಪ್ಪೆಯ ಜಾತಿಯ ಪ್ರಾಣಿಗಳು.

(೨೧) ಭೂಮಿಯ ಮೇಲೆ ಓಡಾಡುವ ಹಲ್ಲಿಯ ಜಾತಿಯ ಪ್ರಾಣಿಗಳು.
(೨೨) ಪಕ್ಷಿಗಳು
(೨೩) ಮಕ್ಕಳಿಗೆ ಹಾಲುಕೊಡುವ ಪ್ರಾಣಿಗಳು
(೨೪-೨೫) ಮೊಟ್ಟಮೊದಲು ಭೂಮಿಯ ಮೇಲೆ ಹುಟ್ಟಿದ ಸಸ್ಯಗಳು.
(೨೬-೩೨) ಫರ್ನ್‌ಗಳು
(೩೩) ದೊಡ್ಡಎಲೆ ಬಿಡುವ ಗಿಡಗಳು
(೩೪) ಮರಗಳು

ಈ ಚಿತ್ರದಲ್ಲಿ ಬಿಳಿಯ ಮಂಡಲವು ಎಡಭಾಗದಲ್ಲಿ ಎಲ್ಲಿ ಆರಂಭವಾಗುವುದೋ ಆ ಯುಗದಲ್ಲಿ ಆ ಪ್ರಾಣಿಯು ಹುಟ್ಟಿತು. ಮುಂದೆ ಬಿಳಿಯಭಾಗವು ಮುಗಿದಕಡೆ ಆ ಜಂತುವೇ ಅಳಿದು ಹೋಯಿತೆಂದೂ ತಿಳಿಯಬೇಕು. ಈ ರೀತಿಯಾಗಿ ಮೀನು ಮೂರನೆಯ ಯುಗದ ನಾಲ್ಕನೆಯ ಭಾಗದಲ್ಲಿ ಹುಟ್ಟಿತು. ಅದರಲ್ಲಿ ಒಂದು ಜಾತಿಯು ಆ ಯುಗದಲ್ಲಿಯೇ ಮುಗಿದುಹೋಯಿತು.

## ಮುಮ್ಮೂಲೆ ಜಂತುಗಳು



ಹಿಂದೆ ನೋಡಿದ ಪಟದಲ್ಲಿ ೬ನೆಯ ಅಂಕಿಯು ತೋರಿಸಿದ ಪ್ರಾಣಿಗಳಿವು. ಇವು ಹುಟ್ಟುವ ವೇಳೆಗೆ ಭೂಮಿಗೆ ಅರ್ಧವಯಸ್ಸು ಆಗಿಹೋಗಿತ್ತು. ಇವು ಸಮುದ್ರದಲ್ಲಿ ಜೀವಿಸಿದ್ದುವು. ಚಕ್ಕೆ ಚಕ್ಕೆಗಳಿಂದ ಆದ ಮೈ ತಲೆಯಮುಂದೆ ಒಂದು ಜೊತೆ ಕೂದಲು (ಜಿರಳೆಗೆ ಇರುವಂತೆ) ಇವಕ್ಕೆ ಮೊದಮೊದಲು ಕಣ್ಣಿತ್ತು. ಆ ಮೇಲೆ ಇವು ಕೆಸರಿನಲ್ಲಿ ಜೀವಿಸುವುದಕ್ಕೆ ಆರಂಭಿಸುವುದಕ್ಕೆ ಮೊದಲು ಮಾಡುತ್ತಲೂ ಇವಕ್ಕೆ ಕಣ್ಣು ಹೋಯಿತು. ಇವು ಮಣ್ಣು ತಿಂದು ಬದುಕುತ್ತಿದ್ದುವು.

ಇವು ಮೂರನೇ ಒಂದು ಅಂಗುಲದಿಂದ ಹಿಡಿದು ಎರಡು ಅಡಿಯಷ್ಟು ಉದ್ದದವರೆಗೂ ಇದ್ದುವಂತೆ.

ಇವು ಪ್ರಪಂಚದಲ್ಲಿ ಆಗಾಗ ಹುಟ್ಟುವ ಭಾರಿಯ ಬಿರುಗಾಳಿಗಳಲ್ಲಿ ಎದ್ದ ಅಲೆಗಳಲ್ಲಿ ಉಸಿರು ಸಿಕ್ಕಿಕೊಂಡು ಸತ್ತುಹೋಗಿರಬೇಕು.

ಇವು ಹೊದಮೇಲೆ ಕಡಲು ಚೇಳು ಬಂದುದು. ಇವುಗಳ ಅಸ್ತಿಪಂಜರಗಳು ಮೊದಲು ಕಡಲಾಗಿದ್ದು ಈಗ ನೆಲವಾಗಿರುವ ಎಡೆಗಳಲ್ಲಿ ದೊರಕುತ್ತದೆ.

ಮುಮ್ಮೂಲೆಯ ಜಂತುಗಳನ್ನು ತಿಂದು ಕಡಲು ಚೇಳುಗಳು ಬೆಳೆದುವು. ಅವು ಒಂದೊಂದೂ ಎಂಟು ಒಂಭತ್ತು ಅಡಿ ಉದ್ದವಿರುತ್ತಿದ್ದವಂತೆ. ಅವುಗಳ ಅಸ್ತಿಪಂಜರಗಳು ಅಮೇರಿಕದ ಸಮುದ್ರ ತೀರ ಪ್ರದೇಶಗಳಲ್ಲಿ ದೊರೆತಿವೆ



ನಾಲ್ಕನೆಯ ಯುಗದ ಮೀನುಗಳು

ಈ ಕಡಲು ಚೇಳುಗಳನ್ನು ಅಟ್ಟಾಡಿ ಹಿಡಿದು ತಿನ್ನುವ ಮೀನುಗಳು ಈ ಯುಗ ದಲ್ಲಿ ಹುಟ್ಟಿದುವು. ಚೇಳುಗಳಿಗೆ ಇಲ್ಲದ ಬೆನ್ನೆಲುಬು, ಬಾಯಲ್ಲಿ ಹಲ್ಲುಗಳು ಇವಕ್ಕೆ ಇದ್ದುವು. ಇವು ಮುವ್ವತ್ತು, ನಲವತ್ತು ಅಡಿ ಉದ್ದ ಇದ್ದು ಭಯಂಕರವಾಗಿದ್ದುವು. ಈ ಜಾತಿಯು ಹುಟ್ಟಿದ ಕಾಲದಲ್ಲಿ ಇವುಗಳನ್ನು ನೋಡಿದವರು ಈಗಿರುವ ಮೀನುಗಳನ್ನು ನೋಡಿದರೆ ಗುರ್ತು ಹಿಡಿಯುವುದೂ ಕಷ್ಟವಾದೀತು. ಇವು ಐದು ಸಾವಿರಲಕ್ಷ ವರ್ಷದ ಹಿಂದೆ ಹುಟ್ಟಿದುವು

ಚಿತ್ರದಲ್ಲಿ ಕಾಣುವ ದೊಡ್ಡಮೀನು ಡಿನಿಕಿಗ'ಸ' ಜಾತಿಗೆ ಸೇರಿದುದು. ಇದು ಮೂರುಸಾವಿರ ಲಕ್ಷ ವರ್ಷದ ಕೆಳಗೆ ಇದ್ದುದು.



ಆ ಕಾಲದಲ್ಲಿ ಭೂಮಿಯಲ್ಲಿದ್ದ ಗಿಡಮರಗಳು.

ಆ ಕಾಲದಲ್ಲಿ ಭೂಮಿಯಲ್ಲಿ ಫರ್ನ್ ಜಾತಿಯ ಗಿಡಗಳಿದ್ದುವು ಇವುಗಳಿಗೆ ಹೂವು, ಕಾಯಿ ಯೇನೂ ಇಲ್ಲ. ಅವು ಬೆಳೆ ಬೆಳೆದು ನೂರೈವತ್ತು ಅಡಿಗಳವರೆಗೆ ಆಗುತ್ತಿದ್ದುವು ಅನಂತರ ಎಲೆಯುಳ್ಳ ಗಿಡಗಳು, ಅನಂತರ ಬೀಜ ಬಿಡುವ ಗಿಡಗಳು ಬಂದುವು.

ಇವು ಬರುಬರುತ್ತ ಭೂಗರ್ಭದಲ್ಲಿ ಸೇರಿಹೋದುವು. ಭೂಮಿಯೊಳಗಿನ ಉಷ್ಣದಿಂದ ಬೆಂದು ಇದ್ದಲಾದುವು. ಮೇಲಿನ ಭಾರದ ಒತ್ತಡಕ್ಕೆ ಸಿಕ್ಕಿ ಕಲ್ಲಿನಂತಾದುವು. ಇವೇ ಈಗ ಕಲ್ಲಿದ್ದಲಾಗಿರುವುದು. ಈಗ ಕಲ್ಲಿದ್ದಲು ಇದ್ದ ಕಡೆಯಲ್ಲೆಲ್ಲಾ ಆ ಮರಗಳು ಇದ್ದುವು



ಯುಗದಲ್ಲಿ ಬೆಳೆದ ಮರಗಳು ಹಾಗೆಯೇ ಚಿತ್ರದಲ್ಲಿರುವ ಮೊಸಳೆಯ ಜಾತಿಯ ಜಂತುವನ್ನು ನೋಡು.



**ಗೊಂಡಾನಾ ಭೂಖಂಡ.**

**ನಾಲ್ಕನೆಯ ಯುಗದ ಕೊನೆಯಲ್ಲಿ ಒಂದು ಪ್ರಳಯವಾಯಿತು**

ಆ ಪ್ರಳಯದಲ್ಲಿ ಭೂಮಿಯ ಬಹುಭಾಗವು ಭೂಮಿಯೊಳಕ್ಕೆ ಹೋಗಿ ಹೊಸ ಹೊಸ ಭಾಗಗಳು ಏರ್ಪಟ್ಟುವು. ಕಾಡುಗಳು ಇದ್ದೆಡೆ ಕಡಲಾಗಿ ಕಡಲು ಇದ್ದ ಕಡೆ ಬೆಟ್ಟವಾಗಿ ಹೋಯಿತು. ಪೃಥ್ವಿಯ ಮುಖಭಾಗವು ಮಾರ್ಪಾಟಾಗಿ ಹೋಯಿತು. ಈಗಿನ ಆಫ್ರಿಕಾ, ಇಂಡಿಯ, ಆಸ್ಟ್ರೇಲಿಯ ಮೊದಲಾದವೆಲ್ಲ ಸೇರಿದ್ದ ಒಂದು ಭಾಗವೇರ್ಪಟ್ಟಿತು. ಇದನ್ನು ಭೂಶಾಸ್ತ್ರಜ್ಞರು ಗೊಂಡ್ವಾನಾ ಭೂಖಂಡವೆನ್ನುತ್ತಾರೆ. ಈಗಲೂ ಆಫ್ರಿಕಾ, ಆಸ್ಟ್ರೇಲಿಯಾ, ಇಂಡಿಯ ಮೊದಲಾದ ಕಡೆಗಳಲ್ಲಿ ಒಂದೇ ಜಾತಿಯ ಗಿಡಮರಗಳೂ ಪಕ್ಷಿಗಳೂ ಸಿಕ್ಕುವುವು. ಇದಕ್ಕೆ ಈ ಭಾಗಗಳೆಲ್ಲವೂ ಒಟ್ಟಿಗಿದ್ದುದೇ ಕಾರಣ.

ಏಳನೆಯ ಚಿತ್ರದಲ್ಲಿರುವ ಮೀನುಗಳು ಐದನೆಯ ಯುಗದವು ಇವು ಮೊದಲು ಭೂಮಿಯ ಮೇಲಿದ್ದು ಅನಂತರ ನೀರಿನೊಳಕ್ಕೆ ಹೋಗಿ ಅಲ್ಲಿಯೇ ವಾಸಮಾಡಲು ಆರಂಭಿಸಿದವು



ಇವುಗಳಿಗೆ ಮಾನಸಾರ', ಇಕ್ಥಿಯೋಸಾರ', ಪ್ಲಯೋಸಾರ.ಎಂಬ ಹೆಸರುಗಳು, ಇವು ಭೂಮಿಯ ಮೇಲೆ ಇದ್ದಾಗ ಇವಕ್ಕೆ ಅಧಿಕಬಲವೂ, ಶೀತೋಷ್ಣಗಳನ್ನು ಸಹಿಸುವ ಶಕ್ತಿಯೂ ಮಂದವಾದ ಚರ್ಮವೂ ಹುಟ್ಟಿದುವು. ಈ ಗುಣಗಳುಳ್ಳ ಪ್ರಾಣಿಗಳು ನೀರಿನಲ್ಲಿರುವ ಪ್ರಾಣಿಗಳನ್ನು ಬಹುಬೇಗ ಜಯಿಸಬಲ್ಲುವು ಅವು ತಮಗಿದ್ದ ಹಲ್ಲುಗಳ ಬಲದಿಂದ ಮೀನುಗಳನ್ನು ಹಿಡಿದುವು. ಭೂಮಿಯ ಮೇಲೆ ಇದ್ದ ಕಾಲುಗಳು ನೀರಿನಲ್ಲಿ ಈಸಾಡಲು ಹುಟ್ಟುಗಳಂತೆ ಉಪಯೋಗವಾದುವು. ಇವು ಮೊಟ್ಟೆಯಿಟ್ಟು ಮರಿ ಮಾಡುವ ಜಾತಿಗೆ ಸೇರಿದವು.- ಇವು ತಮ್ಮ ಮರಿಗಳನ್ನು ತಾವೇತಿನ್ನುತ್ತಿದ್ದವಂತೆ. ಇವುಗಳಲ್ಲಿ ಪ್ಲಯೋಸಾರ' ಎಂಬುದು ೩೦ ಅಡಿಗಳ ಉದ್ದವಿದ್ದು, ತನ್ನ ನಾಲ್ಕು ಕಾಲುಗಳನ್ನು ಹುಟ್ಟುಗಳಂತೆ ಉಪಯೋಗಿಸುತ್ತಿತ್ತು. ಈಗ ಇರುವ ಮೊಸಳೆ, ಆಮೆ ಮೊದಲಾದವು ಈ ಜಾತಿಗೆ ಸೇರಿದವು. ಇವುಗಳ ಅಸ್ಥಿಪಂಜರಗಳು ಅಲ್ಲಲ್ಲಿ ಸಿಕ್ಕುತ್ತವೆ

ಎಂಟನೆಯ ಚಿತ್ರದಲ್ಲಿ ಕಾಣುವ ಜಂತುಗಳು ಪಕ್ಷಿಗಳ ಪೂರ್ವಜರು. ಪ್ರಾಣಿಗಳು ನೀರಿನಲ್ಲಿ ಎತ್ತಬೇಕೆಂದರತ್ತ ಓಡಾಡಬಹುದು ಆದರೆ ಭೂಮಿಯ ಮೇಲೆ ಹಾಗಿಲ್ಲ. ಆದರೂ ಹುಳುಗಳು ಕಪ್ಪೆಗಳು ಮೊದಲಾದವು ನೆಲದ ಮೇಲೆ ಓಡುವಂತೆ ಹಾರುವುದಕ್ಕೂ ಪ್ರಯತ್ನ ಮಾಡಿದುವು ಕಪ್ಪೆಗಳು ನೆಗೆದುವು ಧುಮುಕಿದುವು ಹಾಗೆಯೇ ಇನ್ನು ಕೆಲವು ಮೇಲಕ್ಕೆ ನೆಗೆದು ತಮಗಿರುವ ಮುಂಗಾಲುಗಳನ್ನು ರೆಕ್ಕೆಗಳಂತೆ

ಉಪಯೋಗಿಸಿದುವು ಆಗ ಎಂದರೆ ಮೊದಮೊದಲು, ಈ ಹಾರುವುದನ್ನು ಕಲಿಯುವ ಪ್ರಯತ್ನಗಳು ಮೇಲಿನಿಂದ ಕೆಳಕ್ಕೆ ಧುಮುಕುವ ಪ್ರಯತ್ನಗಳಂತೆ ಇದ್ದುವು ಬರು ಬರುತ್ತ ಮುಂಗಾಲುಗಳಿಗೆ ರೆಕ್ಕೆಗಳು ಹುಟ್ಟಿ ಅವೇ ಹಕ್ಕಿಗಳಾದುವು.



ಈ ರೆಕ್ಕೆಗಳು ಮೊದಲು ಈಗಿನ ಬಾತು ಗಳಿಗಿರುವಂತೆ ಬೆರಳು ಬೆರಳುಗಳ ನಡುವೆ ಚರ್ಮವಿದ್ದು ಜಾಲಪಾದವಾಗಿತ್ತು ಅಂತೂ ಹೀಗೆ ರೆಕ್ಕೆಗಳುಳ್ಳ ಹಕ್ಕಿಗಳಾದ ಪ್ರಾಣಿಗಳೂ ನೀರಿಗೆ ಇಳಿದು ತಿರುಗಿ ಮೀನಿನ ಜಾತಿಗಳಾದ ಪ್ರಾಣಿಗಳೂ ಒಂದೇ ಜಾತಿಯುವು



೯ನೆಯ ಚಿತ್ರದಲ್ಲಿರುವುದು ಹಕ್ಕಿಗಳಲ್ಲಿ ಮೊದಲನೆಯದು. ಈ ಹಕ್ಕಿಗೆ ಬಾಯಲ್ಲಿ ಹಲ್ಲುಗಳುಂಟು. ಈ ಹಕ್ಕಿಗೆ ರೆಕ್ಕೆಗಳು ಬಹಳ ದೊಡ್ಡವು. ಇದು ಈಗಿರುವ ಕೋಳಿಗಳಂತೆ ರೆಕ್ಕೆಗಳಿದ್ದರೂ ಅಷ್ಟಾಗಿ ಹಾರುತ್ತಿರಲಿಲ್ಲ. ಇದರ ಬಾಲದಲ್ಲಿಯೂ ರೆಕ್ಕೆಯಲ್ಲಿಯೂ ಭಾರಿ ಭಾರಿಯಗರಿಗಳು (ನವಿಲುಗರಿಗಳಂತೆ) ಇವು ಮೇಲಕ್ಕೆಂದರೆ ನೆಗೆಯುವುದು ; ಕೆಳಕ್ಕಾದರೆ ಧುಮುಕುವುದು.

೧೦ನೆಯ ಚಿತ್ರದಲ್ಲಿರುವುದು ಕಪಟದ ಹಕ್ಕಿ (ಬಾವಲಿ)ಗಳ ಮೊದಲರೂಪ ಅದಕ್ಕೆ ಇನ್ನೂ ಚಕ್ಕಳದ ರೆಕ್ಕೆಗಳಿವೆ. ಇದರ ಬಾಲ ಬಹಳ ಉದ್ದ ಕಲ್ಲಿನ ಮೇಲೆ ಕುಳಿತಿರುವುದರ ಬಾಲದಂತೆ ಕೊನೆಯಲ್ಲಿ ಒಂದುಗಂಟು ಇದಕ್ಕೆ ಹಲ್ಲುಗಳು ಬಿದ್ದುಹೋಗಿದ್ದುವು ಒಂದೊಂದು ರೆಕ್ಕೆಯು ಸುಮಾರು ೨೫ ಅಡಿ ಉದ್ದ ಇದರ ತಲೆಯು ಮೇಲೆ ಕೊಂಬುಗಳಂತೆ ಎರಡು ಮೂಳೆಗಳೂ ಇದ್ದುವು. ಇಷ್ಟೆಲ್ಲಾ ಮೂಳೆಗಳೂ, ದಪ್ಪ ಆಕಾರವೂ ದೊಡ್ಡರೆಕ್ಕೆಗಳು ಇದ್ದರೂ ಇದರ ಒಟ್ಟುತೂಕ ಮಾತ್ರ ೨೦ ಪೌಂಡಿಗಿಂತ ಹೆಚ್ಚಿಲ್ಲ.

ಇವುಗಳಿಂದಲೇ ಮುಂದಿನ ಹಕ್ಕಿಗಳು ಉದಯಿಸಿದುದು. ಇವು ಸಸ್ತನಿ (ಎಂದರೆ ಮಕ್ಕಳಿಗೆ ಹಾಲು ಕೊಡುವ ಪ್ರಾಣಿಗಳು.) ಗಳಂತೆ ಬೆಳೆಯಲಾರದೆ ಸಣ್ಣವಾಗುತ್ತ ಬಂದುವು. ಇವುಗಳಲ್ಲಿ ೫೦ ಪೌಂಡಿಗಿಂತ ತೂಕವಾಗಿದ್ದುವಕ್ಕೆ ಹಾರುವುದು ಕಷ್ಟವಾಯಿತು ಹಾಗೆ ಆ ಕಷ್ಟವಿಲ್ಲದೆ ಹೋಗಿದ್ದರೆ, ಈಗ ಹುಲಿ, ಸಿಂಹ, ಆನೆಗಳಂತಹ ದೊಡ್ಡ ಹಕ್ಕಿಗಳನ್ನೂ ನಾವು ನೋಡಬಹುದಾಗಿತ್ತು. ಬರುಬರುತ್ತ, ಇವಕ್ಕೆ ಮೂಳೆಗಳು ಟೊಳ್ಳಾಗಿ ಕಾಲುಗಳು ಸಣ್ಣವಾಗಿ, ಮುಂಗಾಲುಗಳು ರೆಕ್ಕೆಗಳಾಗಿ ಮೈಮೇಲಿನ ಕೂದಲು ಗರಿಗಳಾಗಿ ಸುಂದರಗಳಾದ ಪಕ್ಷಿಗಳಾದುವು.



೧೧ನೆಯ ಚಿತ್ರದಲ್ಲಿರುವುದು ಐದನೆ ಯುಗದ ಒಂದು ನೋಟ ಈ ಯುಗದ ಪ್ರಾಣಿಗಳು ಈ ಭೂಮಿಯಲ್ಲಿ ೧೦೦೦ ಲಕ್ಷ ಸಂವತ್ಸರಗಳು ಬದುಕಿದ್ದವಂತೆ ಅವುಗಳಲ್ಲಿ ಅನೇಕ ಪ್ರಾಣಿಗಳು ಎರಡು ಕಾಲುಗಳ ಮೇಲೆ ವಾಸವಾಗಿದ್ದವು ಕೆಲವು ಮಾಂಸಾಹಾರಿಗಳು : ಶಾಕಾಹಾರಗಳು ಇವು ಒಂದನ್ನೊಂದು ಮೀರಿಸಬೇಕೆಂಬ ಹುರುಡಿನಿಂದ ಬೆಳೆದಂತೆ ಬೆಳೆದುವು ಟೈರಾನೋಸಾರ್ ಎಂಬುದರ ಮೊಳಕಾಲು ಆರಡಿ ಕತ್ತು ತಲೆ ಸೇರಿ ೨೦ ಅಡಿ ಇತ್ತು ಇದು ಮಾಂಸಾಹಾರಿ

ಸಾರೋ ಸಾಡ' ಎಂಬ ಕುದುರೆಯಂತಹ ಶಾಕಾಹಾರಿಯು ನಲವತ್ತು ಐವತ್ತು ಟನ್ಗಿಂತ ಭಾರವಾಗಿತ್ತು ಡಿಪ್ಲೋಡಿಕಸ್ ಎಂಬ ಹಾವಿನಂನಂತಹ ಪ್ರಾಣಿಗೆ ೪೦ ಅಡಿಯ ಬಾಲವಿದಿತಂತೆ ಆ ಬಾಲದಿಂದ ಅದು ತನ್ನ ಮೇಲೆ ಬಿದ್ದವರನ್ನು ಹೊಡಯುತ್ತಿತ್ತಂತೆ ಸಾರೋಸಾಡ ಮೃಗವು ಆಗಾಗ ನೀರಿಗಿಳಿಯುತ್ತಿತ್ತು ನೀರಿನಲ್ಲಿ ಮುಳುಗಿ ಉಸಿರುಬಿಟ್ಟು ಬುಡುಬುಡುಕ ಎಂದು ಶಬ್ದಮಾಡಿ ಆಟವಾಡುತಲಿತ್ತು





೧೨ನೆಯ ಚಿತ್ರದಲ್ಲಿರುವ ಪ್ರಾಣಿಗೆ ಬ್ರೋಂಟೋಸಾರ್ ಎಂದು ಹೆಸರು. ಇದು ೬೫ ಅಡಿ ಉದ್ದ, ೪೦ ಟನ್ ಭಾರವಿತ್ತು. ಇಷ್ಟಾದರೂ ಇದರ ಮಿದುಳು ತೂಕವು ೨ ಪೌಂಡಿಗಿಂತ ಹೆಚ್ಚಿಲ್ಲ. (ಮನುಷ್ಯರಿಗೆ ಐವತ್ತು ಪೌಂಡಿನ ತೂಕ ದೇಹಕ್ಕೆ ಒಂದು ಪೌಂಡಿನ ತೂಕದ ಮೆದುಳು ಇರುವುದು)

ಇವುಗಳು ಒಂದನ್ನೊಂದು ಹಿಡಿದು ತಿನ್ನುವುವು ಹಗಲಿರುಳೆನ್ನದೆ ಆಗಿನ ಕಾಲದ ಮೃಗಪಕ್ಷಿ ಕ್ರಿಮಿಕೀಟಗಳೆಲ್ಲ ಯುದ್ಧವನ್ನು ನಡೆಸುತ್ತಲೇ ಇರುವುವು. ಒಂದು ಪ್ರಾಣಿಯಿಟ್ಟ ಮೊಟ್ಟೆಗಳನ್ನು ಇನ್ನೊಂದು ಪ್ರಾಣಿಯು ತಿಂದು ಬಿಡುವುದು ಹೀಗೆಲ್ಲಾ ಹೋರಾಡುತ್ತ ಬಂದು, ಕೊನೆಗೆ ತಾಯಿಯು ಮಗುವನ್ನು ಗರ್ಭದಲ್ಲಿಟ್ಟುಕೊಂಡು ಪಾಲಿಸಿ ಹೆರುವ ಜಾತಿಯ ಪ್ರಾಣಿಗಳು ಬಂದುವು

ಈ ಪ್ರಾಣಿಗಳು ಬಂದುದು ಆಧುನಿಕಯುಗ. ಈ ಯುಗದ ವೇಳೆಗೆ ಅನೇಕಾನೇಕ ಬದಲಾವಣೆಗಳಾಗಿ ಭೂಮಿಯು ಹೆಚ್ಚುಕಡಿಮೆ ಈಗಿರುವಂತೆಯೇ ಆಗಿತ್ತು. ಮೆಡಿಟರೇನಿಯನ್ ಸಮುದ್ರವೂ ಸಹಾರಾಮರು ಭೂಮಿಯೂ ಏರ್ಪಟ್ಟುವು ಆಸ್ಟ್ರೇಲಿಯಾ ದೂರವಾಯಿತು ಅಮೇರಿಕದಲ್ಲಿ ಅರ್ಧಭಾಗವು ಕೆಳಕ್ಕಿಳಿದು ಹೋಗಿ ಪೆಸಿಫಿಕ್ ಸಾಗರವು ದೊಡ್ಡದಾಯಿತು.



೧೩ನೆಯ ಚಿತ್ರದಲ್ಲಿರುವ ಜಂತುಗಳಲ್ಲಿ ಕೆಲವು ಮರಿಗೆಳಿಗೆ ಹಾಲುಕೊಡುವ ಸಸ್ತನಿಗಳು.

ಈ ಸಸ್ತನಿಗಳು ಐದನೆಯ ಯುಗದಲ್ಲಿಯೇ ಹುಟ್ಟಿದ್ದುವು. ಈ ಸಸ್ತನಿಗಳು ಮೊದಮೊದಲು ಮೊಟ್ಟೆಯನ್ನು

ತಮ್ಮ ಹೊಟ್ಟೆಯಲ್ಲಿ ಬೇರೆಯಾಗಿಟ್ಟುಕೊಂಡು ಮರಿಯನ್ನು ಬೆಳೆಸುತ್ತಿದ್ದುವು. ಅನಂತರ ಗರ್ಭಧಾರಣವು ಆರಂಭಿಸಿತು. ಇವು ಸಾಮಾನ್ಯವಾಗಿ ಶಾಕಾಹಾರಿಗಳು. ಇವುಗಳ ಅಸ್ಥಿಪಂಜರಗಳು ಮಂಗೋಲಿಯದಲ್ಲಿ ಸಿಕ್ಕಿವೆ ಮಂಗಾಲು ೧೪ ಅಡಿ, ಕತ್ತು ೧೨ ಅಡಿ ಇದ್ದರೆ ಮೈ ಹೇಗೆ ಇರಬಹುದು!

೧೪ನೆಯ ಚಿತ್ರದಲ್ಲಿರುವುದು ಬಾಲುಕೈತರ' ಎಂಬ ಸಸ್ತನಿ ಇದು ಎಲ್ಲದಕ್ಕಿಂತಲೂ ದೊಡ್ಡದು. ಇದು ಸುಮಾರು ೨೫ ಅಡಿ ಎತ್ತರವಿದ್ದು, ೨೦ ಟನ್ನು ಭಾರವಿತ್ತು. ಇದು ಆಧುನಿಕ ಯುಗದ ಎರಡನೆಯ ಭಾಗದಲ್ಲಿ ಬಂದುದು



ಈ ಪ್ರಾಣಿಗಳಲ್ಲಿ ಮೆದುಳು ಬೆಳೆಯುತ್ತಾ ಬಂದಿತು. ಮೆದುಳು ಬೆಳೆದಂತೆಲ್ಲ ಅಭಿವೃದ್ಧಿಯು ಹೆಚ್ಚಿತು. ಕೊನೆಗೆ ಮೆದುಳಿನ ಕೆಲಸವೇ ಹೆಚ್ಚಾಗಿರುವ ಮನುಷ್ಯಪ್ರಾಣಿಯು ಬಂತು.

## ಚಿತ್ರಲಿಪಿ

 ಗೆ   ಮಾಡಿ  ವರ

ಬೇವನ್ನು  ಯು   ಗ ಳ ನ್ನ

ರೆತ್ತಾಡು.

ಬೇರೆ೩, ದ  ನು  ವ ನ್ನ ನ  

ಗಳನ್ನೂ ಕೇರೆಕೊಳಿತ್ತಾಳ್ಳು.

## ಚೌಕಬಂಧ ಸ್ಪರ್ಧೆಯ ಬಹುಮಾನ ಪಡೆದವರು

ಈ ಕೆಳಗೆ ಕಂಡಂತೆ ಬಹುಮಾನಗಳನ್ನು ಹಂಚಿದೆ:—

ಮೊದಲನೆಯ ಬಹುಮಾನ:—ಎಲ್. ಎಸ್. ಚಿದಂಬರಂ ೧೧೨೧, c/o ಎಲ್. ಎಸ್. ಸಪ್ತರ್ಷಿ, ಐಯ್ಯರ್ ಚಾಮರಾಜಪುರಂ, ಮೈಸೂರು.

ಎರಡನೆಯ ಬಹುಮಾನ:—ಟಿ ಆರ್. ವಿಜೇಂದ್ರರಾವ (೧೬೧೯) ಎರಡನೆ ತರಗತಿ, ಮಿಡಲ್‌ಸ್ಕೂಲ ತಗಳೂರು.

ಮೂರನೆಯ ಬಹುಮಾನ:—ಎ ಹೇಮಾವತಿ, (೯೦೫) c/o ಎ. ಅರುಣಾಚಲಂ ೩/೧ ಸೆಕೆಂಡ್ ಮೆಯಿನ್‌ರೋಡ್, ಶಂಕರಪುರ, ಬೆಂಗಳೂರು.

### ಪುಸ್ತಕದ ಬಹುಮಾನಗಳು

| | | ರಿ. ನಂ |
|---|---|---|
| (೧) | ಸಿ ಪಾರ್ವತಮ್ಮ, ಬೆಂಗಳೂರು | ೧೬೮೨ |
| (೨) | ವೀರಾಚಾರಿ, ಬಳ್ಳೇಕೆರೆ. (ಕಡೂರು) | ೭೧೩ |
| (೩) | ಟಿ. ಎಸ್. ಶಶಿರೇಖ ಬೆಂಗಳೂರು | ೬೮ |
| (೪) | ಎಂ. ಮುತ್ತು, ಬೆಂಗಳೂರು | ೧೮೮೯ |
| (೫) | ಟಿ. ಕೊಟ್ಟೆರಪ್ಪ, ಬಳ್ಳಾರಿ | ೧೫೦೪ |
| (೬) | ಚಿ. ಆರ್ ಗೋಪಮ್ಮ, ಮಿಂಚಕಲ್ಲು ಗೊಲ್ಲಹಳ್ಳಿ (ತುಂಕೂರು) | ೨೧೦ |
| (೭) | ಡಿ. ರಾಮರಾವ್, ಬೇತಮಂಗಲ | ೧೯೯ |
| (೮) | ಸಿ ಎಸ್. ವೆಂಕಟೇಶನ್, ಲಕ್ಕೂರು | ೧೬೧೩ |
| (೯) | ಕೆ ಆರ್. ರಂಗನಾಥ, ಚಿತ್ರದುರ್ಗ | ೨೪ |
| (೧೦) | ಎಸ್. ಆರ್. ಮಾಧವಮೂರ್ತಿ, ಸಾಗರ, | ೫೧೯೮ |
| (೧೧) | ಎಚ್. ವಿ. ಸುಬ್ಬರಾವ್, ಹೊನ್ನುಡಿಕೆ (ತುಂಕೂರು) | |
| (೧೨) | ಎನ್. ಎಸ್ ನಾರಾಯಣಮೂರ್ತಿ, ಹೊಸದುರ್ಗ | ೫೨೨೮ |
| (೧೩) | ಕೆ. ಶಾರದಮ್ಮ, ಮಯಕೊಂಡ | ೪೩ |
| (೧೪) | ಎನ್. ನಾಗರತ್ನಮ್ಮ. ಫ್ರೆಂಚ್‌ರಾಕ್ಸ್ | |
| (೧೫) | ಎಸ್. ಪಾರ್ವತಮ್ಮ, ಬೆಂಗಳೂರು | |
| (೧೬) | ಬಿ ಎ ಅನಸೂಯಾಬಾಯಿ, ಬೆಂಗಳೂರು | ೧೧ |
| (೧೭) | ಎಂ. ಅರ್. ಆದಿಲಕ್ಷ್ಮಮ್ಮ, ಹೊಳಲ್ಕೆರೆ | ೬೧೯ |
| (೧೮) | ಡಿ. ರತ್ನಮ್ಮ, ಬೆಂಗಳೂರು | ೯೩೩ |
| (೧೯) | ಪುಟ್ಟವೀರಮ್ಮ, ಪರಶುರಾಮಪುರ | ೫೧೦೧ |
| (೨೦) | ಪಿ ಮೋಹಿನೀಬಾಯಿ, ಬೆಂಗಳೂರು | ೧೩೩೬ |




ನೀನು ಈಚೆಗೆ ಚಿತ್ರಲಿಪಿಗೆ ಉತ್ತರವನ್ನು ಬರೆಯುವುದಿಲ್ಲ? ಏಕೆ? ನೀನು ಚಿತ್ರಲಿಪಿಯನ್ನು ಬಿಡಿಸು. ನಿನ್ನ ಮೈ ಕೈಗೆ ಒಳ್ಳೆಯ ಸಾಧಕ ಬೇಕಾಗಿರುವಂತೆ ನಿನ್ನ ಬುದ್ಧಿಗೂ ಒಳ್ಳೆಯ ಸಾಧನೆಬೇಕು. ಚಿತ್ರಲಿಪಿ, ಚೌಕಬಂಧಗಳು ಅಂತಹ ಸಾಧನೆಗಳು. ಆದರಿಂದ ತಪ್ಪದೆ ಅವುಗಳನ್ನು ಬಿಡಿಸು. ಚಿತ್ರಲಿಪಿಯು ಬಹಳ ಸುಲಭವಾಗಿದೆ ಎಂದು ನಾನೆಂದುಕೊಂಡಿದ್ದೇನೆ ಹಾಗಿಲ್ಲದೆ, ಕಷ್ಟವಾಗಿದ್ದರೆ, ನೀನು ನನಗೆ ಅದನ್ನಾದರೂ ಹೇಳು "ಅಣ್ಣ, ಚಿತ್ರಲಿಪಿ ಬಹು ಕಷ್ಟ" ಎಂದು ನೀನು ಗೊಣಗಿದರೆ ನಾನು ಇನ್ನೂ ಸುಲಭ ಮಾಡಲು ಯತ್ನಿಸುತ್ತೇನೆ.

ಒಂದು ಕಥೆಯು ನಿನಗೆ ಗೊತ್ತೇನು? ಅಮೇರಿಕವನ್ನು ಕಂಡುಹಿಡಿದ ಕೊಲಂಬಸ್ಸನು ಒಂದು ದಿನ ಅನೇಕರನ್ನು ಊಟಕ್ಕೆ ಕರೆದನು ಅವರೆಲ್ಲ "ಕೊಲಂಬಸ್! ಏನು ಮಹಾ! ನಾವು ಹೋಗಿದ್ದರೆ ನಾವೂ ಅಮೇರಿಕಾ ಕಂಡುಹಿಡಿಯುತ್ತಿದ್ದೆವು" ಎಂದುಕೊಳ್ಳುತ್ತಿದ್ದವರು ಊಟವಾದ ಮೇಲೆ ಕೊಲಂಬಸ್ಸನು ಎಲ್ಲರೂ ಸೇರಿರುವಾಗ "ಸ್ವಾಮಿ! ತಮ್ಮಲ್ಲಿ ಯಾರಾದರೂ ಮೊಟ್ಟೆಯನ್ನು ಬೇರೆ ಆಧಾರವಿಲ್ಲದೆ ಮೇಜಿನ ಮೇಲೆ ನಿಲ್ಲಿಸುವಿರಾ?" ಎಂದು ಕೇಳಿದನು. ಒಬ್ಬೊಬ್ಬರೂ ಎಷ್ಟೋ ಪ್ರಯತ್ನಮಾಡಿದರು. ಯಾರಿಂದಲೂ ಸಾಧ್ಯವಾಗಲಿಲ್ಲ ಆಗ ಕೊಲಂಬಸ್ಸನು, ತಾನು ಒಂದು ಮೊಟ್ಟೆಯನ್ನು ಕುಕ್ಕಿ ನಿಲ್ಲಿಸಲು ನಿಂತುಕೊಂಡಿತು ಆ ಮೇಲೆ ಎಲ್ಲರೂ, "ಅಯ್ಯೋ! ಇಷ್ಟೇನೆ ಇದರ ಗುಟ್ಟು" ಎಂದುಕೊಂಡರಂತೆ. ಚಿತ್ರಲಿಪಿ ಹಾಗೆ ಸುಲಭ! ಅದರ ಗುಟ್ಟು ಒಡೆದರೆ ಅದು ಸುಲಭ, ಇಲ್ಲದಿದ್ದರೆ ಕಷ್ಟ.

# ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದು. ೨. ಪ್ರತಿಯೊಂದು ಉತ್ತರದು ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು. ೩. ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನ ವನ್ನು ಕೊಡಲಾಗುವುದು ೪ ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ: ಪುಸ್ತಕದ ಬಹುಮಾನ ೨೦. ೫. ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು. ೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು ೭. ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ, ಅದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ನಿಲ್ಲಬಾರದಾಗಿ ಪ್ರಾರ್ಥನೆ

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | ✿ | ೨ | ✿ | ೩ |
| ✿ | ೪ | ✿ | ೫ | ✿ |
| ೬ | ✿ | ೭ | ✿ | ೮ |
| ✿ | ೯ | ✿ | ೧೦ | ✿ |
| ೧೧ | ✿ | ೧೨ | ✿ | ೧೩ |

ರಿಜಿಸ್ಟರು ನಂಬರು ..

............. ...

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ :—

೧-೪-೭ ಸೂರ್ಯನ ಸಾರಥಿ ೧೧-೧೨-೧೩ ಹೊಟ್ಟೆಯಲ್ಲಿರುವ ಕೋಶಗಳಲ್ಲಿ ಒಂದು ೧-೬-೧೧ ಮಗಳಗಂಡ ೨-೫ ೮ ಚಿಪ್ಪು ೪-೭ ಕಾಲಿನ ಒಡವೆ ೧೦ ೭ ಧನ ೧೦-೧೩ ಒಂಭತ್ತು + ಒಂದು ೯-೬ ದೇವತೆಯ ಹೆಸರು ೩-೫-೮ ಕೊನೆಯು ಸ್ಥಿತಿ.

(೧) ನಿಯಮಗಳು ಮೊದಲಿದ್ದಂತೆ (೨) ಪಕ್ಕದಲ್ಲಿ ಹೆಸರಿಗೆ, ರಿಜಿಸ್ಟರ್ ನಂಬರಿಗೆ ಜಾಗವಿರಲಿ

## ಉತ್ತರಗಳು.

**ಚಿತ್ರಲಿಪಿ**

ಗುಡ್ಡದಲ್ಲಿ ಹುಲಿಯು ಕಾಯ್ದು ಇದ್ದು ಒಂದು ಹಸುವನ್ನು ಹಿಡಿಯಿತು ಆ ದನವು ಕೂಗಿಕೊಂಡಿತು ಸುತ್ತ ಮುತ್ತಲೂ ಇದ್ದವರು ಓಡಿ ಹೋಗಿ ಕತ್ತಿ ಕೊಡಲಿ ದೊಣ್ಣೆಗಳಿಂದ ಹೊಡೆದು, ಅದನ್ನು ಧ್ವಂಸಮಾಡಿ ಹಸುವನ್ನು ಬಿಡಿಸಿಕೊಂಡರು

**ಚೌಕಬಂಧಸ್ಪರ್ಧೆ.**

೧-೪-೭ — ಹರಟೆ
೬-೭ — ಗಂಟೆ.
೫-೮-೭ — ಜಾಗಟೆ.
೧೩-೧೦ — ಮರ.
೧೩-೮-೩ — ಮಗಳು
೧೦ ೧೨ — ರಣ.
೬-೧೧ — ಪತಿ

## ವಿನೋದ.

ಉಪಾಧ್ಯಾಯ :—ಏನೋ ಸಿದ್ಧ! ನೀನು ಮಾಡಿರುವ ಲೆಕ್ಕಗಳೆಲ್ಲ ತಪ್ಪು ನಿಮ್ಮಪ್ಪನಿಗೆ ಹೇಳುತ್ತೇನೆ.

ಸಿದ್ಧ :—ಆ ಲೆಕ್ಕಗಳೆಲ್ಲಾ ನಮ್ಮಪ್ಪಾನೇ ಮಾಡಿಕೊಟ್ಟದ್ದು ಸಾ !

ಉಪಾಧ್ಯಾಯ :—ಕುದುರೆಗೆ ಎಷ್ಟೋ ಕೊಂಬು? ಮರುಳು !

ಮರುಳ :—ಎರಡುಸಾ !

ಉಪಾ :—ಅದು ಹೇಗೋ ?

ಮ :—ಕಾಕ್ಕೆ ಒಂದು ದಾಕ್ಕೆ ಒಂದು ಅಂತು ಎರಡು ಸಾ !

ಅಶ್ವತ್ಥ ನಾರಾಯಣರಾವ್

## ಒಗಟೆ.

೧ ಒಂದು ಅಂಕಣದ ಮನೆಮಾಡಿ, ಬೆಂದವನ ಹಿಡಿದುತಂದು ಕೂಡಿ ಚಂದದಿಂ ನಾರಿಯರು ಕರಪಿಡಿದು ಒಟ್ಟಾಗಿ ಮೆಟ್ಟಿದರೆ, ನೂರು ನೂರಾದುವು

೨ ಅಣ್ಣ ಎಂದರೆ ಬರುವುದಿಲ್ಲ. ಅಪ್ಪ ಎಂದರೆ ಓಡಿಬಂದು ಕೂಡಿಕೊಳ್ಳುತ್ತವೆ

೩ ಉದ್ದೀರಾಯನಿಗೆ ಒಂದೇ ಹಲ್ಲು

೪ ಬಾಯಿಯಲ್ಲಿ ಹಾಕುವುದು ಬೂದಿಯಾಗಿ ಬೀಳುತ್ತೆ.

ಜಿ ಕೆ. ಚಂದ್ರಶೇಖರಯ್ಯ

---




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ॥—ಮಾರ್ಗಶಿರ—ಡಿಶಂಬರ್ ೧೯೩೫ | ಪುಸ್ತಕ ೭

# ಮಗುವಿನ ಮಾತು

ಸಂಗ್ರಹ :—ಹೊಯ್ಸಳ

**ಮಗು**

ಕರೀನೆಲವೇ ಕರೂನಾಡೇ
ಕೊಡು ಕೊಡು ಹತ್ತೀ
ಕೊಡು ಕೊಡೂ ಹಿಂಜಿ.

**ನೆಲ**



ಉಳಬೇಡವೆ ನನ್ನ
ಹೂಳಬೇಡವೆ ಬೀಜ ?
ಮಳೆ ಬರಬೇಕು ;
ಕಳೇ ಕೀಳಬೇಕು
ಬೆಳೆ ಬರಬೇಕು ;
ತಾಳು ತಾಳು ಕೊಟ್ಟೆ.

**ಮಗು**



ತಖ್ಲಿ ತಖ್ಲಿ ತಿರುಗು ತಿರುಗು
ಹುರೀ ಮಾಡು, ದಾರಾ ಮಾಡು
ಸುತ್ತಿಗೊ ಸುತ್ತಿಗೊ ಬೇಗ.

**ತಖ್ಲಿ**

ನಾನು ಚಿಕ್ಕವನು
ನಾನು ಕೊಡೋದು ಇಷ್ಟೇಸರಿ
ಅವಸರವಿದ್ದರೆ
ಚರಕ ಕರಿ.

ಮಗು



ಆ ಕೈಲಿ ಚಕ್ರ
ಈ ಕೈಲಿ ಹಿಂಜಿ
ಹಿಡೀಬೇಕು
ತಿರುವಬೇಕು
ಗೊಯ್ಯೆಂತು, ಸೊಯ್ಯೆಂತು
ಅದೊ ಹಾಲು ಹಿಂಡಿಧಾಂಗೆ
ಬಂತು ಬಂತು ದಾರ

ಮಗು



ಬಾಪೂಜೀ ! ಬಾಪೂಜೀ !
ಬರೀ ಲಂಗೋಟಲಿದ್ದಿಯಾ ?
ಚಳಿಯಲ್ಲವೆ !
ಮಳೆಯಲ್ಲವೆ ? ನಿಂಗೇ !
ನಿನ್ನ ನೋಡಿದರೆ
ನನಗೇ ನಡುಗುತ್ತೆ ವೈ.
ನಾನು ಬೆಳೀತೇನೆ
ಹತ್ತೀ ಬೆಳೀತೇನೆ
ದಾರಾ ತೆಗೀತೇನೆ
ಬಟ್ಟೇನೇಯುತೇನೆ
ನಾನು ನೇದದ್ದೂಂತ ಕಳಿಸ್ತೇನೆ.
ಉಟ್ಕೊಗೊಂತೀಯಾ ?
ತೊಟ್ಕೊಗೊಂತೀಯಾ ?
ಬೆಚ್ಚಗಿರ್ತೀಯಾ ?

# ನಕ್ಷತ್ರ.

ನಾವು ದಿನವೂ ನಿಶಿಯ ವೇಳೆ ಅನೇಕ ನಕ್ಷತ್ರಗಳನ್ನು ಕಾಣುತ್ತಲೇ ಇದ್ದೇವೆ. ಆದರೆ ಅವುಗಳ ವಿಚಾರವಾಗಿ ನಮಗೆ ಎಷ್ಟು ಮಟ್ಟಿಗೆ ವಿಚಾರಗಳು ತಿಳಿದಿವೆ ?

ರಾತ್ರಿಯ ವೇಳೆ ಆಕಾಶದಲ್ಲಿ ನಕ್ಷತ್ರಗಳಿರುವಂತೆ ಹಗಲೂ ಕೂಡ ಇರುತ್ತವೆ ರಾತ್ರಿಯ ಸಮಯಕ್ಕಿಂತಲೂ ಹಗಲಿನಲ್ಲಿಯೇ ಒಂದು ನಕ್ಷತ್ರವು ನಮ್ಮ ಭೂಮಿಗೆ ಹತ್ತಿರ ವಾಗಿಯೂ ಪ್ರಕಾಶಮಾನವಾಗಿಯೂ ಬೆಳಗುತ್ತದೆ. ಅದರ ಪ್ರಭೆಯಿಂದ ಬೇರೆ ನಕ್ಷತ್ರ ಗಳು ಆಗ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಈ ನಕ್ಷತ್ರವೂ ಇತರ ತಾರೆಗಳಂತೆಯೇ ಪೂರ್ವದಲ್ಲಿ ಮೂಡಿ ಪಶ್ಚಿಮದಲ್ಲಿ ಮುಳುಗುವುದು. ಇದರ ಕಾಂತಿಯು ಮರೆಯಾದಂತೆ ಇತರ ಚುಕ್ಕಿಗಳು ಮಿಣುಗುವುದು ತೋರುವುದು ಹಗಲಿನಲ್ಲಿ ಹೊಳೆಯುವ ನಕ್ಷತ್ರವೇ ಸೂರ್ಯ.

ಸೂರ್ಯನು ಒಂದು ನಕ್ಷತ್ರ. ಹಾಗೆಯೇ ನಕ್ಷತ್ರಗಳೂ ಸೂರ್ಯಗಳು ಆದರೆ ಉಳಿದ ಎಲ್ಲಾ ನಕ್ಷತ್ರಗಳಿಗಿಂತಲೂ ಕೇವಲ ಸಮೀಪದಲ್ಲಿರುವುದರಿಂದ ಇದು ಮಾತ್ರ ಅತಿ ಪ್ರಕಾಶ ಮಾನವಾಗಿಯೂ, ದೊಡ್ಡದಾಗಿಯೂ ತೋರುವುದು.

ಸೂರ್ಯನಂತೆಯೇ ತಾರೆಗೆಗಳೂ ಪೂರ್ವದಲ್ಲಿ ಮೂಡಿ ಪಶ್ಚಿಮದಲ್ಲಿ ಮುಳುಗುವುವು. ಆದರೆ ಒಂದು ನಕ್ಷತ್ರವು ಮಾತ್ರ ತನ್ನ ಸ್ಥಾನವನ್ನು ಬಿಟ್ಟು ಚಲಿಸದೇ ಇರುವುದು. ಅದರ ಹೆಸರು ಧ್ರುವನಕ್ಷತ್ರ ಉಳಿದ ಚುಕ್ಕಿಗಳೆಲ್ಲವೂ ಇದಕ್ಕೆ ಪೂರ್ವದಿಂದ ಪಶ್ಚಿಮಕ್ಕೆ ಸದಾಪ್ರದಕ್ಷಿಣೆ ಮಾಡುತ್ತಿರುವುವು. ಈ ಧ್ರುವ ತಾರೆಗೆಯು ಉತ್ತರದಿಕ್ಕಿಗೆ ಸರಿ ಯಾಗಿ ಕಾಣುತ್ತಿರುವುದು.

ಇದಕ್ಕೆ ಸಮೀಪದಲ್ಲಿಯೇ ಏಳು ಅತಿ ಪ್ರ ಕಾ ಶ ಮಾ ನ ವಾ ದ ನಕ್ಷತ್ರಗಳ ಗುಂಪೊಂದು ಇದೆ ಅದನ್ನು ಸಪ್ತಋಷಿಮಂಡಲವೆನ್ನುವರು ಇವುಗಳ ಒಳ ಕೊನೆಯ ಎರಡು ನಕ್ಷತ್ರಗಳು ಸದಾ ಧ್ರುವತಾರಗೆಯ ಕಡೆಗೆ ಸರಿಯಾಗಿ ಕಲ್ಪಿತ ರೇಖೆಯ ಬಿಂದು ಗಳಂತೆ ಇರುವುವು.

ಹಿಂದೂಗಳು ಕೆಲ ಕೆಲವು ನಕ್ಷತ್ರಗಳನ್ನು ಒಂದೊಂದು ಮಂಡಲವನ್ನಾಗಿರುವಂತೆ ಭಾವಿಸಿ ಅವುಗಳಿಗೊಂದೊಂದು ಹೆಸರನ್ನು ಕೊಟ್ಟಿರುವರು. ಇವೇ ಮೇಷ. ವೃಷಭ ಮುಂತಾದ ರಾಶಿಗಳು. ಒಂದೊಂದು ರಾಶಿಯಲ್ಲಿಯೂ ಕೆಲ ಕೆಲವು ಮುಖ್ಯ ನಕ್ಷತ್ರ ಗಳಿರುವವು. ಮೇಷರಾಶಿಯಲ್ಲಿ ಅಶ್ವಿನಿ. ಭರಣಿ. ಎಂಬ ನಕ್ಷತ್ರ ಮಂಡಲಗಳಿವೆ. ಅಶ್ವಿನಿ ಯಲ್ಲಿ ಕುದರೆ ಮುಖದ ಆಕಾರಕ್ಕೆ ಹೊಂದಿರುವ ಮೂರು ನಕ್ಷತ್ರಗಳಿವೆ ಹೀಗೆ

ವಿಂಗಡಿಸಲ್ಪಟ್ಟಿರುವ ರಾಶಿಗಳು ಮಾತ್ರವಲ್ಲದೆ ಬೇರೆ ರಾಶಿಗಳೂ ಉಂಟು. ಸಪ್ತರ್ಷಿ ಮಂಡಲ. ತ್ರಿಶಂಕು ಮೃಗಶಿರಾ. ಮುಂತಾದುವು ಈ ತೆರನವು.

ಆಕಾಶದಲ್ಲಿ ತೋರುವ ನಕ್ಷತ್ರಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ಹೆಸರನ್ನು ಕೊಟ್ಟಿರುವರು. ಅವುಗಳ ಸ್ಥಾನಗಳನ್ನು ಅರಿತು ಆಕಾಶದ ಒಂದು ಪಟವನ್ನು ಬರೆದಿರುವರು

ಆಕಾಶದಲ್ಲಿ ರಾತ್ರಿಯ ವೇಳೆಯೂ ಕೂಡ ಬರಿಯ ಕಣ್ಣಿಗೆ ಕಾಣದಷ್ಟು ದೂರವಾಗಿರುವ ತಾರಾ ರಾಶಿಗಳೆಷ್ಟೋ ಇವೆ.

ಆಕಾಶದ ವಿಚಾರವಾದ ಶಾಸ್ತ್ರಕ್ಕೆ ಖಗೋಳ ಶಾಸ್ತ್ರವೆಂದು ಹೆಸರು.

ನಾವೆಲ್ಲರೂ ಹಲ ಕೆಲವು ನಕ್ಷತ್ರಗಳು ಅವುಗಳ ವಿಚಾರಗಳನ್ನು ತಿಳಿದು ಗುರುತಿಸಲು ಬಲ್ಲವರಾಗಿರಬೇಕು. ಈ ವಿಚಾರವಾಗಿ ಮುಂದೆ ಹೆಚ್ಚಿಗೆಯ ವಿಷಯಗಳನ್ನು ತಿಳಿಸುವೆವು.

## ನೀರುಳ್ಳಿಯೂ ಮತ್ತು ಕಣ್ಣೀರು

ಮಗೂ, ನಾನು ಯಾರು ? ಕಚ್ಚುವುದಿಲ್ಲ ಬೈಯುವುದಿಲ್ಲ. ಹೊಡಿಯುವುದಿಲ್ಲ. ನನ್ನನ್ನು ಕಚ್ಚಿದರೆ, ನಿನ್ನ ಕಣ್ಣಿನಿಂದ ನೀರು ಸುರಿಯುತ್ತದೆ. ಹೇಳು ನೋಡೋಣ. ನೀರುಳ್ಳಿ.

ನೀರುಳ್ಳಿಗೂ ಕಣ್ಣೀರಿಗೂ ಏನು ಸಂಬಂಧ? ಕಣ್ಣಿನಲ್ಲಿ ನೀರು ಸದಾ ಬರುತ್ತಿರುತ್ತದೆ. ಈ ನೀರು, ಕಣ್ಣುಗುಡ್ಡೆಗಳನ್ನು ಶುಭ್ರವಾಗಿ ತೊಳೆದು, ಚೆನ್ನಾಗಿ ಕಾಣುವಂತೆ ಮಾಡುತ್ತದೆ. ಆ ನೀರು ಮೆದುಳಿನಿಂದ ಬಂದು, ಕಣ್ಣುರೆಪ್ಪೆಗಳ ಮೂಲಕವಾಗಿ, ಗುಡ್ಡೆ ಮೇಲೆಲ್ಲಾ ಹರಡಿ ನಂತರ, ಮೂಗಿಗೆ ಹೋಗಿ ಸೇರುತ್ತದೆ. ಈ ಕಾರಣದಿಂದಲೇ ನಾವು ಸದಾ ರೆಪ್ಪೆ ಬಡಿಯುವುದು.

ಕಾರಣಾಂತರಗಳಿಂದ ಹೆಚ್ಚಾಗಿ ನೀರು ಬಂದರೆ, ಎಲ್ಲರಿಗೂ ಕಾಣುವಹಾಗೆ ಹೊರಕ್ಕೆ ಹರಿದುಹೋಗುತ್ತದೆ ನೀರುಳ್ಳಿಯನ್ನು ಹೆಚ್ಚಿದಕೂಡಲೆ ನಮ್ಮ ಕಣ್ಣಿಗೆ ಕಾಣದ ಕೆಲವು ಪದಾರ್ಥಗಳು ಹೊರಕ್ಕೆ ಬರುತ್ತವೆ ಇವು, ಬಹುಸೂಕ್ಷ್ಮವಾಗಿರುವ ಕಣ್ಣು ಮೂಗುಗಳ ನರಗಳಿಂದ ಹೆಚ್ಚು ಹುರುಪಿನಿಂದ ಕೆಲಸವನ್ನು ಮಾಡಿಸುತ್ತವೆ. ಕೂಡಲೇ ಮೆದುಳಿನಿಂದ ನೀರು ಹೆಚ್ಚಾಗಿ ಹರಿದು ಬಂದು ಎಲ್ಲರಿಗೂ ಕಾಣುವಂತೆ ಹೊರಕ್ಕೆ ಹರಿದುಹೋಗುತ್ತದೆ. ಹೀಗೆ, ಹೆಚ್ಚಾಗಿ ಕಣ್ಣೀರು ಹರಿಯುವುದರಿಂದ ಕಣ್ಣು ರೆಪ್ಪೆಗಳು, ಗುಡ್ಡೆಗಳು ಸದಾ ಶುದ್ಧವಾಗಿರುತ್ತವೆ. ಹೆಚ್ಚಾಗಿ ಯಾರಿಗೆ ಕಣ್ಣೀರು ಬರುವುದಿಲ್ಲವೋ, ಅವರು ಆಗಾಗ ಈರುಳ್ಳಿಯನ್ನು ಹೆಚ್ಚುವುದು ಒಳ್ಳೆಯದು.

# ಜನ್ಮಾಂತರ



ಹುಳುವಾಗಿ ಉಪ್ಪು ನೇರಿಳೆಯ ಸೊಪ್ಪು ತಿಂದಿತು. ಬಲಿತು. ಒಂದು ಗೂಡು ಕಟ್ಟಿಕೊಂಡು ಅದರಲ್ಲಿ ಮಲಗಿ ನಿದ್ದೆಮಾಡಿತು.



ಗೂಡು ಬಲಿತು ಒಡೆದರೆ, ಅದರಿಂದ ಹುಳುವು ಚಿಟ್ಟೆಯಾಗಿ ಈಚೆಗೆ ಬರುವುದು. ಚಿಟ್ಟೆಯು ಬಣ್ಣ ಬಣ್ಣದ ರೆಕ್ಕೆಗಳನ್ನು ಮೆರೆಸಿಕೊಂಡು ಹಾರಾಡುತ್ತಿದ್ದು ಮೊಟ್ಟೆಗಳನ್ನಿಕ್ಕುವುದು.



ಈ ಹುಳದ ಗೂಡಿನಿಂದಲೇ ರೇಶ್ಮೆಯು ಬರುವುದು ಗೂಡು ಬಲಿತರೆ ರೇಶ್ಮೆ ಚೆನ್ನಾಗಿರುವುದಿಲ್ಲ. ಆದರಿಂದ ಗೂಡು ಬಲಿಯುವುದಕ್ಕಿಂತ ಮುಂಚೆಯೇ ಅದನ್ನು ಬೇಯಿಸಿ ರೇಶ್ಮೆಯನ್ನು ತೆಗೆದುಕೊಳ್ಳುತ್ತಾರೆ.



ರೇಶ್ಮೆಯು ಮುಟ್ಟುವುದಕ್ಕೆ ಮೃದು ನೋಡುವುದಕ್ಕೆ ಹೊಳೆಪು. ಅದನ್ನು ಹಾಕಿಕೊಂಡರೆ ಚೆಂದ; ಬೆಳೆದರೆ ಲಾಭ

# ಹಳ್ಳಿಯ ಮೇಲ್ವಿಚಾರಣೆ



ಇದೇ ಇರಬೇಕು ಹಳ್ಳಿ !



ದಯಮಾಡಿ ! ನಮ್ಮ ಹಳ್ಳೀ

ನೋಡಿ ಬನ್ನಿ.



ಇದು ನಮ್ಮೂರ ಭಾವಿ.




ಇದು ನಮ್ಮೂರ ಪಾಠಶಾಲೆ




ಇದು ನಮ್ಮೂರ ಕಾಫೀ ಹೋಟೆಲ್ !




ನಿಮ್ಮೂರು ಬಹಳ ಚೆನ್ನಾಗಿದೆ ಗೌಡರೆ !

# ಬೆಂಗಳೂರಿನ ಲಾಲ್‌ಬಾಗ್

ಬೆಂಗಳೂರಿನಲ್ಲಿ ನೋಡಬೇಕಾದ ಅನೇಕ ಸ್ಥಳಗಳುಂಟು ಅವುಗಳಲ್ಲಿ ಲಾಲ್‌ಬಾಗ್ ತೋಟವೂ ಒಂದು. ಕೋಟೆಗೆ ಆಗ್ನೇಯವಾಗಿ ಸುಮಾರು ಒಂದು ಮೈಲಿದೂರದಲ್ಲಿದೆ



ಇದನ್ನು ಹೈದರ್‌ಖಾನನು ಆರಂಭಿಸಿದನು. ಅನಂತರ ಮೈಸೂರು ಇಂಗ್ಲೀಷರ ಸ್ವಾಧೀನದಲ್ಲಿ ಬಂದಾಗ ಅವರು ಅದನ್ನು ಇನ್ನೂ ದೊಡ್ಡದು ಮಾಡಿದರು, ದೇಶದೇಶಾಂತರದ ಗಿಡಮರಗಳನ್ನು ತಂದು ನೆಟ್ಟು ಬೆಳೆಸಿದರು. ಈಗ ತೋಟವು ಬಹು ಸುಂದರವಾದ ತೋಟವೆನಿಸಿಕೊಂಡಿದೆ.

ಇದರ ಮಗ್ಗುಲಲ್ಲಿ ಎತ್ತರವಾದ ಬಂಡೆಯ ಮೇಲೆ ಕೆಂಪೇಗೌಡನು ನಾಲ್ಕು ದಿಕ್ಕಿನಲ್ಲಿಯೂ ಮಂಟಪಗಳನ್ನು ಕಟ್ಟಿಸಿದನಂತೆ. ಇನ್ನೂ ಉಳಿದ ಮೂರು ಮಂಟಪಗಳು ಈ ನಗರದ ಬೇರೆ ಬೇರೇ ದಿಕ್ಕುಗಳಲ್ಲಿವೆ.

## ಒ ಗ ಟೆ

೧ ಕುಂತೀ ನಂದನ ಸಂವತ್ಸರದಲ್ಲಿ ದಾರೀತಲೆ ಮಾಸದಲ್ಲಿ ಕರೀದ್ಹೋಗಿ ಬಿಳೀದು ಬಂದು ಏಳಸೆ ತಿಥಿ ಒಂದು ಕಣ್ಣಿನ ವಾರದಲ್ಲಿ ಗಜವೈರಿ ಲಗ್ನದಲ್ಲಿ ನಿನ್ನ ಕಂದನಿಗೆ ಲಗ್ನವನ್ನು ಇಟ್ಟಿರುವೆನು. ಇದರ ಅರ್ಥವೇನು ?

೨ ಅಕ್ಕನ ಮನೆಯಲ್ಲಿ ದೀಪ ಹಚ್ಚಿದರೆ ತಂಗೀ ಮನೆಯಲ್ಲಿ ಬೆಳಕುಬರುತ್ತದೆ

೩ ಮುಸುಕೊಳಗೆ ಮುಸುಕಾಗಿ ಬಿಳುಪೊಳಗೆ ಕೆಂಪಾಗಿ, ಕೆಂಪೊಳಗೆ ಬಿಳುಪಾಗಿ, ಹಲವು ಮಕ್ಕಳನ್ನು ಹೊಟ್ಟೆಯೊಳಗಿಟ್ಟುಕೊಂಡಿರುವ ನಾನು ಯಾರು ?

೪ ನಾನು ನನ್ನ ಏಳು ಅಕ್ಷರಗಳಿಂದ ಮೈಸೂರು ದೇಶದಲ್ಲಿ ಬೆಳಗುತ್ತಿದ್ದೇನೆ. ೧ ೨, ೭, ಸೇರಿದರೆ ಮರ್ಯಾದೆ ಮಾಡುವ ಒಂದು ವಸ್ತುವೆಂದೂ, ೩, ೪, ಭೂಪಾಲನೆಂದೂ, ೪, ೫, ಪ್ರಜೆಯೆಂದೂ ೫, ೬, ಹೆಂಗಸರ ಇಷ್ಟವಸ್ತುವೆಂದೂ, ೫, ೬, ೭, ಪಟ್ಟಣವೆಂದೂ, ೨, ೪, ತಮಾಷೆಯೆಂದೂ, ೩, ೬, ಸಂಗೀತಕ್ಕೆ ಸೇರಿದ ಒಂದು ಭಾಗವೆಂದೂ, ೫, ೭, ದೇಹಕ್ಕೆ ಸೇರಿದ ವಸ್ತುವೆಂದೂ, ೨, ೫, ಅಭಿಪ್ರಾಯವೆಂದೂ ೨, ೭, ಗೃಹಕೃತ್ಯದ ವಸ್ತುವೆಂದೂ ೨, ೬, ತಂದೆ ತಾಯಿಗೆ ಪ್ರೀತಿಯಾದದ್ದೆಂದೂ, ಅರ್ಥವಾಗುತ್ತದೆ. ಅಂತಹ ನಾನು ಯಾರು ?

೫ ನೀರಿಗೆ ಹೋಗಬೇಡ, ನೀರನ್ನು ಮುಟ್ಟಬೇಡ, ನೀರು ತರದೇ ಬರಬೇಡ.

೬ ನಾನು ಹತ್ತು ಅಕ್ಷರದ ಪ್ರಸಿದ್ಧ ಬಂಗಾಳಿಯನು. ೧ ೨,೩, ಶಿವನನ್ನೂ ೪,೫, ಬೆಳಕು ಕೊಡುವವನನ್ನೂ ೬,೭, ಬುದ್ಧಿಯನ್ನೂ ೮,೯,೧೦, ದೊಡ್ಡ ಜಲಭಾಗವನ್ನೂ ಸೂಚಿಸುತ್ತೇನೆ ಹಾಗಾದರೆ ನಾನು ಯಾರು ?

೭ ಸುತ್ತುವುದು ಸುತ್ತುವುದು ಮಾಲೆ ತಾನಲ್ಲ, ವಿಸ್ತರಿಸಿ ಬರೆವುದಕೆ ಕಂಠ ಮೊದಲಿಲ್ಲ, ಪೆಟ್ಟಿಗೆಯ ತುಂಬುವರೆ ಆಭರಣವಲ್ಲ. ಇದನ್ನು ಹೇಳಬಲ್ಲ ಜಾಣನಿಗೆ ಅರಿದಿಲ್ಲ.

೮ ಎಲೆ ಎಲೆ, ಓ. ರಾಮಚಂದ್ರ ನೆಲದೊಳಗೆ ಏನು ಶುದ್ಧಿ ? ಕೊಕ್ಕುಂಟು ಕೂಗಲರಿಯೆ, ರೆಕ್ಕೆಯುಂಟು ಹಾರಲರಿಯೆ ? ಇದು ಏನು ?

೯ ಅರೇಕಲ್ಲಿನ ಮೇಲೆ ಮರ ಮೂಡಿದುದು ಕಂಡೆ. ಮರದಮೇಲೆರಡು ಕೈ ಕಂಡೆ ಇದು ಹೇಳಬಲ್ಲ ಜಾಣರಿಗೆ ಕಡಲೆಪುರಿ ಉಂಡೆ.


ಚಂದ್ರ 16.6 ದಿವಸ
ಕೇತು 5055 ವರ್ಷ
ರಾಹು 3160 ವರ್ಷ
ಶನಿ 1470 ವರ್ಷ
ಸಮೀಪದ ನಕ್ಷತ್ರಕ್ಕೆ 4 · ಕೋಟಿ ವರ್ಷ
ಬುಧ 740 ವರ್ಷ
ಅಂಗಾರಕ 76 ವರ್ಷ
ಶುಕ್ರ 50 ವರ್ಷ
ಸೂರ್ಯ 177 ವರ್ಷ

# ಎಷ್ಟೆಷ್ಟು ದೂರ?

ನಾವು ಭೂಮಿಯಲ್ಲಿದ್ದೇವೆ ನಮ್ಮ ಭೂಮಿಯ ಸುತ್ತ ಮುತ್ತ ಆಕಾಶದಲ್ಲಿ ಸೂರ್ಯ, ಚಂದ್ರ, ಗುರು, ಶುಕ್ರ, ಬುಧ, ಅಂಗಾರಕ ಮೊದಲಾದ ಗ್ರಹಗಳೂ ಲಕ್ಷಾಂತರ ನಕ್ಷತ್ರಗಳೂ ಇವೆ ನಮಗೂ ಅವಕ್ಕೂ ಎಷ್ಟುದೂರ? ಎಂಬುದನ್ನು ತೋರಿಸಿಕೊಡುವ ಚಿತ್ರವಿದು

ಗಂಟೆಗೆ ೬೦ ಮೈಲಿಯಂತೆ ಹೋಗುವ ರೈಲಿನಲ್ಲಿ ಕುಳಿತುಕೊಂಡು ಹಗಲು ರಾತ್ರಿ ಎನ್ನದೆ ಪ್ರಯಾಣಮಾಡಿದರೆ, ನಾವು ಸೂರ್ಯನ ಬಳಿಗೆ ಹೋಗುವುದಕ್ಕೆ ೧೭೭ ವರ್ಷ ಹಿಡಿಯುವುದು ಹಾಗೆಯೇ ಶುಕ್ರ ಗ್ರಹದ ಬಳಿಗೆ ಹೋಗಲು ೫೦ ವರ್ಷ ಹಿಡಿಯುವುದು. ಭೂಮಿಯ ಉಪಗ್ರಹವಾದ ಚಂದ್ರನು ಭೂಮಿಗೆ ಬಹಳ ಸಮೀಪದಲ್ಲಿರುವನು ಅದರಿಂದ ಸುಮಾರು ೧೭ ದಿವಸಗಳಲ್ಲಿ ಹೋಗಬಹುದು.

ಹಾಗೆಯೇ ಪ್ರತಿಯೊಂದು ಗ್ರಹಕ್ಕೂ ಹೋಗಲು ಎಷ್ಟು ದಿವಸ ಹಿಡಿಯುವುದು ಎಂಬುದನ್ನು ಅಲ್ಲಲ್ಲಿ ಗುರುತಿಸಿದೆ ನೋಡು. ರಾಹು ಕೇತುಗಳು ಛಾಯಾ ಗ್ರಹಗಳು. ಎಂದರೆ ನೆರಳುಗಳು. ಆದರೂ ಅವನ್ನು ಗ್ರಹಗಳಂತೆಯೇ ಭಾವಿಸುವರು.

ನಕ್ಷತ್ರಗಳು ನಮ್ಮಿಂದ ಬಹುದೂರದಲ್ಲಿವೆ ಸಮೀಪದಲ್ಲಿರುವ ನಕ್ಷತ್ರಕ್ಕೆ ಹೋಗಲು ನಾಲ್ಕು ಕೋಟಿ ವರ್ಷವಾಗುವುದು.

## ಕಣ್ಣುಮುಚ್ಚಿಕೊಂಡು ನೆಟ್ಟಗೆ ನಡೆಯಲು ಸಾಧ್ಯವೇ?

ಸಾಧ್ಯವಿಲ್ಲವೆಂಬ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಹಾಗೆ ಯಾರಾದರೂ ನಡೆದರೆಂದರೆ ಅದು ಅತಿಶಯದ ವಿಷಯವೇ.

ಕಣ್ಣುಮುಚ್ಚಿ ನೇರವಾಗಿ ನಡೆಯಲು ಸಾಧ್ಯ. ನಮ್ಮ ಕಾಲುಗಳ ಹೆಜ್ಜೆ ಅಳತೆಗಳು ಒಂದೇ ಸಮನಾಗಿ ಇರಬೇಕು.

ಅಂದರೆ, ಒಂದೇ ಅಳತೆಯ ಹೆಜ್ಜೆಗಳನ್ನು ಹಾಕಲು ಯಾರಿಗೂ ಸಾಧ್ಯವಿಲ್ಲ. ಏಕೆಂದರೆ, ಪ್ರತಿಯೊಬ್ಬರ ಕಾಲುಗಳೂ, ಸಾಧಾರಣವಾಗಿ ಒಂದೇ ಉದ್ದಳತೆಯಲ್ಲಿದ್ದಂತೆ ಕಂಡರೂ, ಸರಿಯಾಗಿ ಅಳತೆ ಮಾಡಿದರೆ, ಒಂದು ಉದ್ದವಾಗಿಯೂ, ಮತ್ತೊಂದು ಸ್ವಲ್ಪ ಮೋಟಾಗಿಯೂ ಇರುತ್ತದೆ. ಈ ಕಾರಣದಿಂದ ಹೆಜ್ಜೆಯ ಅಳತೆಯು ಒಂದೇ ಸಮನಾಗಿರುವುದಿಲ್ಲ

ಅಲ್ಲದೆ, ಕಣ್ಣು ಮುಚ್ಚಿ, ಕೆಲವು ಹೆಜ್ಜೆ ದೂರ ಸಹ ನಡೆಯಲು ಆಗುವುದಿಲ್ಲ. ಹೆಜ್ಜೆಗಳ ಅಳತೆಯ ವ್ಯತ್ಯಾಸವೊಂದೇ ಅಲ್ಲ ಕಾರಣ. ಸರಿತೂಕದಿಂದ ದೇಹವನ್ನು ಮುಂದಕ್ಕೆ ಸಾಗಿಸಬೇಕು. ಕಣ್ಣುಗಳೇ ಈ ಕೆಲಸವನ್ನು ಸರಿಯಾಗಿ ಮಾಡುವುದು ಕಣ್ಣಿಲ್ಲದವರು ಹೆಜ್ಜೆಗಳನ್ನು ಸರಿಯಾಗಿ ಹಾಕಲಾರರು. ಬೀಳುತ್ತೇವೆಂಬ ಭಯದಿಂದ ಹೆಚ್ಚು ಕಡಿಮೆಯಾಗಿ ಹಾಕುತ್ತಾರೆ. ಏಕೆಂದರೆ, ದೇಹದ ತೂಕವು ಎಡಕ್ಕೂ ಬಲಕ್ಕೂ ಸರಿಯಾಗಿರದೆ, ಹೆಚ್ಚು ಕಡಿಮೆಯಾಗಿ ಹೆಜ್ಜೆಗಳ ಅಳತೆಯೂ ಹೆಚ್ಚು ಕಡಿಮೆಯಾಗಿರುತ್ತವೆ ಈ ಕಾರಣಗಳಿಂದ ಕಣ್ಣುಮುಚ್ಚಿ ನೇರವಾಗಿ ನಡೆಯಲು ಸಾಧ್ಯವಿಲ್ಲ.

## ಹತ್ತು ಹತ್ತಾಗಿ ಏಕೆ ಎಣಿಸುತ್ತೇವೆ?

ಬಲ್ಲಿರಾ ನೀವು!

ಹನ್ನೆರಡು, ಹನ್ನೆರಡಾಗಿ ಏಕೆ ಎಣಿಸಬಾರದು? ಎಂದು ನೀವು ಕೇಳಬಹುದು ಪ್ರಶ್ನೆಯು ಸರಿಯಾದುದೇ! ಹತ್ತು, ಇದರ ಬದಲಾಗಿ ಹನ್ನೆರಡು ಎಂದರೆ ಬಹಳ ಅನುಕೂಲ ಲೆಕ್ಕಮಾಡಲು ಬಹುಸುಲಭ. ಭಾಗಮಾಡಲು ಕಷ್ಟವಿಲ್ಲ. ಅನೇಕವೇಳೆಗಳಲ್ಲಿ ಹನ್ನೆರಡು ಹನ್ನೆರಡಾಗಿಯೇ ಎಣಿಕೆಮಾಡುತ್ತೇವೆ. ಒಂದು ಅಡಿ, ಉದ್ದಳತೆ ಎಂದರೆ, ಹನ್ನೆರಡು ಅಂಗುಲ. ಹಣ್ಣುಹಂಪಲುಗಳನ್ನು ಹನ್ನೆರಡು, ಹನ್ನೆರಡಾಗಿ (ಡಜನ್) ಎಣಿಸುತ್ತೇವೆ ಒಂದು ವರುಷದಲ್ಲಿ ಹನ್ನೆರಡು ತಿಂಗಳುಗಳಿವೆ. ಇಷ್ಟು ರೂಢಿಯಲ್ಲಿದ್ದರೂ, ಹತ್ತು ಹತ್ತಾಗಿಯೇ ಎಣಿಸುತ್ತೇವೆ. ಇದಕ್ಕೆ ಕಾರಣ? ಇದು ಏನು ನಮ್ಮ ಹಿರಿಯರು ಹಾಕಿದ ಮೋಲ್ಪಂಗ್ತಿಯೋ? ಅಲ್ಲ. ಸ್ವಲ್ಪ ಯೋಚಿಸಿ ನೋಡೋಣ. ಮಕ್ಕಳು ಲೆಕ್ಕ ಹೇಗೆ ಮಾಡುತ್ತವೆ? ಹೇಳಿ. ತಮ್ಮ ಕೈ ಬೆರಳುಗಳೆಷ್ಟು? ಹತ್ತು. ಹತ್ತೇ ಬೆರಳುಗಳಿರುವ ಕಾರಣ ಹತ್ತಾದನಂತರ ಎಣಿಸಿದ ಬೆರಳನ್ನೇ ಎಣಿಸಬೇಕು. ಎಲ್ಲಾ ದೇಶಗಳಲ್ಲಿಯೂ ಎಣಿಕೆಯನ್ನು ಹತ್ತು ಹತ್ತಾಗಿಯೇ ಮಾಡುತ್ತಾರೆ. ಎಲ್ಲರಿಗಿರುವುದು ಬೆರಳುಗಳು ಹತ್ತೇ!

# ಇದು ಏನು ?

೧



ಅವತಾರ

೨



ತಾಯಿಯನ್ನು ಕೊಂದವನು

೩



ಕೃಷ್ಣನ ಹೆಸರು

೪



ಒಂದು ಕಣಿವೆ

೫



ಶ್ರೀಮಂತರ ಯಾತ್ರಾಸ್ಥಳ

೬



ಬೆಂಗಳೂರು ಜಿಲ್ಲೆಯ ಒಂದು ಭಾಗ

೭



ಜಲಪಾತ

೮

ಒಂದು ಬೆಟ್ಟ







# ಟಾಮ್ - ಟಾಮ್

ಭಾವೀ ಕಟ್ಟೆಯ ಬೀದಿಯಲ್ಲಿ
ಈಶ್ವರ ದೇವರ ಗುಡಿಯಲ್ಲಿ
ಆರತಿ ಇಂದು, ಅಭಿಷೇಕವಿಂದು

ಭಕುತರೆ ಬನ್ನಿ
ಕಾಣಿಕೆ ತನ್ನಿ

ಹೇಳಲಿಲ್ಲ ಅಂದೀರಿ!
ಕೇಳಲಿಲ್ಲ ಅಂದೀರಿ!

ಟಮ.ಟಂ, ಟಮ'ಟಂ, ಟಮ'ಟಂ....

೨

ಗೋವಿಂದಸಾಮಿ ಪೇಟೆಯಲಿ
ಶಿವಣ್ಣ ಶೆಟ್ಟಿ ಷಾಪರ' ಎದ್ದ
ಮನೆಹರಾಜು, ಮರಹರಾಜು
ಅಗ್ಗದ ಮಾಲು
ಸಿಕ್ಕದ ಲಾಭ
ಬೇಕಾದರೆ ಬನ್ನಿ
ಸಾಕಾದರೆ ನಿಲ್ಲಿ
ಟಮ'ಟಂ, ಟಮ ಟಂ, ಟಮ'ಟಂ....

೩

ಜೀವಣ್ಣಪ್ಪನ ಕೇರಿಯಲಿ
ಇಲಿಗಳ ಸಾವು, ಪ್ಲೇಗಿನಕಾಟ
ಬಿಟ್ಟರೆ ಸೌಖ್ಯ, ನಿಂತರೆ ನಷ್ಟ

ಗಡಿಯನು ಮೀರಿ
ಗುಡಿಯನು ಸೇರಿ
ತಿಳೀಲಿಲ್ಲ ಅಂದೀರಿ !
ಹೇಳೀಲಿಲ್ಲ ಅಂದೀರಿ !
ಟಮ್‌ಟಂ, ಟಮ್‌ಟಂ, ಟಮ್‌ಟಂ....

೨



ಮಕ್ಕಳ ಕಳ್ಳರು ಬಂದಿಹರಂತೆ
ಊರಿನ ಕೇರಿಯ ತುಂಬಿಹರಂತೆ
ಮಕ್ಕಳ ಜೋಕೆ, ಅಳುವುದು ಏಕೆ ?
ಅಮ್ಮನ ಕೇಳಿ
ಮನೆಗಳಲ ಡಿ
ಹೇಳಲಿಲ್ಲಿ ಅಂದೀರಿ !
ಕೇಳಲಿಲ್ಲ ಅಂದೀರಿ !
ಟಮ್‌ಟಂ, ಟಮ್‌ಟಂ, ಟಮ ಟಂ....

೩

ಬಿಸಲಿನ ಹಣ್ಣನು ತಿನ್ನುತ ತಿರುಗುವೆ
ಮುಂದಾಗುವುದನು ಇಂದೇ ತೋರುವೆ
ನುಡಿದುದೆ ನುಡಿಯುವೆ ಕೂಗುವ ಬಂಡೆಗೆ
ತಿರಸ್ಕಾರ ಮಾಡದೆ
ಪುರಸ್ಕಾರ ಮಾಡಿ
ಮರತೆವು ಅಂದೀರಿ !
ಕೊರತೆಯ ಹೇಳೀರಿ !
ಟಮ್‌ಟಂ, ಟಮ ಟಂ, ಟಮ ಟಂ....

'ಗೋಪಾಲ'

# ಕಾಗದಗಳಿಂದ ಹೂವು ಮಾಡುವ ವಿಧಾನ.

---

ತೆಳುವಾದ ಕೆಂಪು ಕಾಗದದಲ್ಲಿ (ಚಿತ್ರ ೧.) ೧೦ ರೇಕುಗಳನ್ನು ಕತ್ತರಿಸು. ಆ ಮೇಲೆ ೯ ಅಂಗುಲದ ತಂತಿಯನ್ನು ತೆಗೆದುಕೊ (ಚಿತ್ರ ೨.) ತಂತಿಗೆ ೩ ರೇಕುಗಳನ್ನು ಸುತ್ತಿ ದಾರದಿಂದ ಕಟ್ಟು (ಚಿತ್ರ ೩.) ಇನ್ನು ೩ ರೇಕುಗಳನ್ನು ಸಡಿಲವಾಗಿ ಸುತ್ತು (ಚಿತ್ರ ೪) ಹಸರು ಕಾಗದವನ್ನು ೪ ಪದರವಾಗಿ ಮಡಿಸಿ (ಚಿತ್ರ ೫) ರಲ್ಲಿ ತೋರಿಸಿದಂತೆ ಆಕಾರವನ್ನು ಬರೆದು ಕತ್ತರಿಸು (ಚಿತ್ರ ೬.) ರಂತೆ ರೇಕುಗಳಾಗುವುವು. ಈ ರೇಕುಗಳನ್ನು ಹೂವಿನ ಕೆಳಗೆ ಕಟ್ಟು (ಚಿತ್ರ ೭) ಹಸರು ಕಾಗದದಲ್ಲಿ ೬ ಎಲೆಗಳನ್ನು ಕತ್ತರಿಸು (ಚಿತ್ರ ೮) ಅದನ್ನು ಕಂಬಿಯಿಂದ ಕಟ್ಟು (ಚಿತ್ರ ೯.) ಆ ಮೇಲೆ ಇನ್ನೊಂದು ದೊಡ್ಡ ಕಂಬಿಗೆ ಕಟ್ಟು (ಚಿತ್ರ೧೦) ೧೧ನೇ ಚಿತ್ರದಲ್ಲಿ ತೋರಿಸಿದ ಹಾಗೆ ಮುಗಿಸಿಬಿಡು.


1


2


3


4


5


6


7


11


8


9


01

From TREASURE CHEST

# ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದು. ೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು ೩ ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನ ವನ್ನು ಕೊಡಲಾಗುವುದು ೪ ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ. ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ: ಪುಸ್ತಕದ ಬಹುಮಾನ ೨೦. ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು. ೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು. ೭. ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ. ಅದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ನಿಲ್ಲಬಾರದಾಗಿ ಪ್ರಾರ್ಥನೆ

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | | ೨ | | ೩ |
| | ೪ | | ೫ | |
| ೬ | | ೭ | | ೮ |
| | ೯ | | ೧೦ | |
| ೧೧ | | ೧೨ | | ೧೩ |

ರಿಜಿಸ್ಟರು ನಂಬರು......

............ ...

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ:—

೧-೪-೭ ಸೂರ್ಯನ ಸಾರಥಿ ೧೧-೧೨-೧೩ ಹೊಟ್ಟೆಯಲ್ಲಿರುವ ಕೋಶಗಳಲ್ಲಿ ಒಂದು ೧-೬-೧೧ ಮಗಳಗಂಡ ೨-೫-೮ ಚಿಪ್ಪು ೪-೭ ಕಾಲಿನ ಒಡವೆ ೧೦ ೭ ಧನ ೧೦ ೧೩ ಒಂಭತ್ತು + ಒಂದು ೯-೬ ದೇವತೆಯ ಹೆಸರು ೩-೫-೮ ಕೊನೆಯ ಸ್ಥಿತಿ

(೧) ನಿಯಮಗಳು ಮೊದಲಿದ್ದಂತೆ (೨) ಪಕ್ಕದಲ್ಲಿ ಹೆಸರಿಗೆ. ರಿಜಿಸ್ಟರ್ ನಂಬರಿಗೆ ಜಾಗವಿರಲಿ




ನವರಾತ್ರಿ ಉತ್ಸವ ನೋಡಲು ಮೈಸೂರಿಗೆ ಹೋಗಿದ್ದೆ. ನೀನು ಯಾವ ಊರಿಗೆ ಹೋಗಿದ್ದೆ? ರಜಾಕಾಲವನ್ನು ಹೇಗೆ ಕಳೆದೆ? ಈ ವಿಚಾರವಾಗಿ ಏನಾದರೂ ನೀನು ಬರೆಯುವೆ ಎಂದು ನಂಬಿದ್ದೆ. ಆದರೆ ಆಶೆಗೆತಕ್ಕ ಫಲ ದೊರೆಯಲಿಲ್ಲ. ನಿನಗೆ ಅವಕಾಶ ದೊರೆಯಲಿಲ್ಲವೋ? ಇರಬಹುದು ಹಬ್ಬದ ಸಡಗರ; ಹಬ್ಬದ ಮೇಲೆ ಹಬ್ಬ.

ನಿಮ್ಮೂರಿನಲ್ಲಿ ದೀಪಾವಳಿ ಹಬ್ಬಹೇಗೆ ನಡೆಯಿತು? ನಮ್ಮೂರಿನಲ್ಲಿ ಈ ಗಲಾಟೆ ಎಂದಿನಂತೆ ಇಲ್ಲ. ಕೊಳ್ಳುವ ಜನವೇ ಬಹುಕಮ್ಮಿ ಇದಕ್ಕೆ ಕಾರಣವೂ ಉಂಟು. ಪರದೇಶದ ಪದಾರ್ಥಗಳಿಗೆ ಬೆಲೆಕೊಟ್ಟು, ತಂದು, ಸುಟ್ಟು ಬೂದಿಮಾಡಿದರೆ, ಬರುವ ಫಲವಾದರೂ ಏನು? ಅದೇ ಹಣಕ್ಕೆ, ಹೊಸಬಟ್ಟೆಯನ್ನು ಕೊಂಡು, ತೊಟ್ಟರೆ ಮನಸ್ಸಿಗೆಷ್ಟೋ ಆನಂದ. ನಮ್ಮ ಬಟ್ಟೆಯನ್ನೇ ಕೊಂಡು ತೊಡುವುದರಿಂದ ಆಗುವ ಸಂತೋಷವನ್ನು ಹೇಳಿದರೆ ಇತರರಿಗೆ ಸರಿತೋರುವುದಿಲ್ಲ. ಉಪಯೋಗಿಸುವವರಿಗೆ ಮಾತ್ರ ಗೊತ್ತುಂಟು.

ಎಂದಿನಂತೆ ಈ ಸಲವೂ ವಿಶ್ವವಿದ್ಯಾನಿಯಲದ ಘಟಿಕೋತ್ಸವವು ನಡೆಯಿತು. ಶ್ರೀಮದ್ಯುವರಾಜರವರೇ ಸ್ವಹಸ್ತದಿಂದ, ಅಧ್ಯಯನ ಮುಗಿಸಿದ ವಿದ್ಯಾರ್ಥಿಗಳಿಗೆ, ಪಟ್ಟಪತ್ರಗಳನ್ನೂ, ಬಿರುದು ಬಿಲ್ಲೆಗಳನ್ನೂ ದಯಪಾಲಿಸಿದರು. ಈ ವಿದ್ಯಾರ್ಥಿಗಳಿಗೆ, ಅಂದು ಒಂದು ಜೀವಮಾನದ ಸುಖದಿನವು. ಕಷ್ಟಪಟ್ಟು ಓದಿದರೆ ನೀನೂ ಒಂದುದಿನ ಅಂತಹ ಸುಖದಿನವೊಂದನ್ನು ಕಾಣುವೆ. ಈ ಸಮಾರಂಭದಲ್ಲಿಯೇ, ಆಹ್ವಾನಿತರಾದ, ಅಲಹಾಬಾದಿನ ಲೀಡರ್ ಪತ್ರಿಕೆಯ ಸಂಪಾದಕರಾದ ಶ್ರೀ ಸಿ. ವೈ. ಚಿಂತಾಮಣಿಯವರ ಉಜ್ವಲಭಾಷಣವೂ ನಡೆಯಿತು

ಇತಿ, ನಿನ್ನ 'ಅಣ್ಣ.'

## ಚಿತ್ರಪರಿಚಯ :- ನಾಗಪೂಜೆ

ನಾವು ಹಿರಿಯರ ಅನುಗ್ರಹವನ್ನು ಪಡೆಯಬೇಕಾದರೆ, ನಾವೇ ಸ್ವತಃ ಅವರ ಮುಂದೆ ಹೋಗಿ ನಿಂತು, ನಮ್ಮನ್ನು ಕುರಿತು ಹೇಳಿಕೊಂಡರೆ ಸಾಧ್ಯವಾಗುವುದಿಲ್ಲ. ಯಾರಾದರೂ ಬೇರೊಬ್ಬರು ಶಿಫಾರಸು ಮಾಡಬೇಕು. ಶಿಫಾರಸು ಮಾಡುವವರು ನಮ್ಮನ್ನೂ ಆ ದೊಡ್ಡಮನುಷ್ಯರನ್ನೂ ಚೆನ್ನಾಗಿ ಬಲ್ಲವರಾಗಿರಬೇಕು. ಇಲ್ಲವಾದರೆ ಅವರ ಹೇಳಿಕೆಗೆ ಬೆಲೆ ಬರುವುದಿಲ್ಲ.

ದೇವರು ಮಹನೀಯನು. ನಾವು ಸಾಮಾನ್ಯರು ನಮ್ಮ ಪರಿಚಯ ಅತನಿಗೆ ತುಂಬಾ ಕಡಿಮೆ. ಹೀಗಿರುವಲ್ಲಿ ನಾವೆಷ್ಟು ಮೊರೆಯಿಟ್ಟರೂ ಅದನ್ನಾತನು ಗಮನಿಸುವುದಿಲ್ಲ. ಆದ್ದರಿಂದ ಆತನ ಅನುಗ್ರಹವನ್ನು ಸಂಪಾದಿಸಲು ಆತನಿಗೆ ಕೇವಲ ಪ್ರೀತಿಪಾತ್ರನಾದ ಬೇರೊಬ್ಬಾತನನ್ನು ಆಶ್ರಯಿಸಬೇಕು. ಆದಿಶೇಷನು ದೇವರಿಗೆ ಸುಪ್ಪತ್ತಿಗೆ. ಯಾವಾಗಲೂ ದೇವರು ಆತನ ಮೇಲೆ ಪವಳಿಸಿರುವನು. ದೇವರಿಗೆ ಆತನ ಮೇಲೆ ತುಂಬಾ ಪ್ರೀತಿ. ಆದ್ದರಿಂದ ನಾವು ಮೊದಲು ಆದಿಶೇಷನನ್ನು ಪೂಜಿಸಿದರೆ ಆತನು ನಮಗಾಗಿ ದೇವರಲ್ಲಿ ಶಿಫಾರಸು ಮಾಡುವನು. ನಾವೆಲ್ಲಾ ಹಾಗೇ ಮಾಡೋಣ!

ನಮ್ಮ ಹಿರಿಯರು, ನಾಗಚತುರ್ಥಿ, ನಾಗಪಂಚಮಿ, ಸುಬ್ಬರಾಯನ ಷಷ್ಠಿಗಳಲ್ಲೀ ನಾಗರನ್ನು ಎಂದರೆ ಆದಿಶೇಷನನನ್ನು. ಪೂಜಿಸಬೇಕೆಂದು ಗೊತ್ತುಮಾಡಿದ್ದಾರೆ. ಆ ದಿನ ನೇಮದಿಂದಿದ್ದು ನಾಗರಿಗೆ ತನಿ ಎರೆಯಬೇಕು. ತನಿಯೆರೆಯುವುದೆಂದರೆ, ಹಾಲು ತುಪ್ಪ ಎರೆಯುವುದು. ನಾಗರಿಗೆ ಇದರ ಮೇಲೆ ಪ್ರಾಣ. ಆತನಿಗೆ ಇಷ್ಟವಾದುದನ್ನು ಅರ್ಪಿಸಿದರೆ, ಆತನ ಪ್ರೀತಿಯನ್ನು ಜಾಗ್ರತೆ ಸಂಪಾದಿಸಬಹುದು. ತನಿ ಎರೆಯುವುದರ ವಿಚಾರ ಇನ್ನೂ ಜಾಸ್ತಿ ಬೇಕಾದರೆ ನಿಮ್ಮಜ್ಜಿಯನ್ನು ಕೇಳು. ಹಾಗೆಯೇ, ನಾಗಪಂಚಮಿ ಕಥೆಯನ್ನೂ ಕೇಳಿ ತಿಳಿದುಕೋ. ಚಲೋಕಥೆ ಅದು!

ಈ ತ್ರಿವರ್ಣಚಿತ್ರದಲ್ಲಿ ಸುವಾಸಿನಿಯರು ನಾಗರಿಗೆ ತನಿ ಎರೆಯುತ್ತಿದ್ದಾರೆ ತಿಳಿಯಿತೇ ಮಗೂ!

---

## ಚಂದ್ರನಲ್ಲಿ ಚೀಣಾಮನುಷ್ಯ

[ಶೇಷು ಸೋದರ ಸಂಘ, ಶಿವಮೊಗ್ಗ]

**ಚಂದ್ರನಲ್ಲಿ ಕಳಂಕವಿದೆ ಅದನ್ನು ಕೆಲವರು ಜಿಂಕೆ ಎನ್ನುತ್ತಾರೆ ಇನ್ನೂ ಕೆಲವರು ಮೊಲ ಅನ್ನುತ್ತಾರೆ ಚೀಣಾ ದೇಶದವರು ಅದಕ್ಕೆ ಈ ಕಥೆಯನ್ನು ಹೇಳುತ್ತಾರೆ ಕೇಳಿ—**

ಒಂದಾನೊಂದು ಕಾಲದಲ್ಲಿ ಒಬ್ಬ ಹಣ್ಣುಹಣ್ಣು ಮುದುಕನು ಒಂದು ರಸ್ತೆಯಲ್ಲಿ ನಿಧಾನವಾಗಿ ಹೋಗುತ್ತಿದ್ದನು. ದಾರಿಯಲ್ಲಿ ಒಬ್ಬ ದೇವತೆಗೆ ಆ ಮುದುಕನಲ್ಲಿ ಕನಿಕರವುಂಟಾಯಿತು ಅವನ ಕಷ್ಟವನ್ನು ನೀಗಿಸಬೇಕೆಂದು ಮನಸ್ಸುಂಟಾಯಿತು

ಆದುದರಿಂದ ಅವನನ್ನು ನೀಲವಾದ ಆಕಾಶದಲ್ಲಿರುವ ಸ್ವರ್ಗಕ್ಕೆ ಕಳುಹಿಸಬೇಕೆಂದು ಮನಸ್ಸುಮಾಡಿ ಮುದುಕನಿಗೆ ಈ ರೀತಿ ಹೇಳಿದನು

"ಈ ಎರಡು ಮಾತ್ರೆಗಳನ್ನು ತೆಗೆದುಕೊ. ಇವುಗಳನ್ನು ಏಳುತಿಂಗಳು ಮತ್ತು ಹದಿನೈದು ದಿನಗಳವರೆಗು ಇಟ್ಟರು ಕೊನೆಯ ದಿನ ಆರನೆಯ ಗಂಟೆಗೆ ದಕ್ಷಿಣ ದಿಕ್ಕಿನಲ್ಲಿ ನೋಡು ಆಕಾಶದಲ್ಲಿ ಒಂದು ಬಾಗಿಲು ತೆರೆದಿರುವುದು.

"ಈ ಮಾತ್ರೆಗಳನ್ನು ನುಂಗು ಕೂಡಲೇ ನೀನು ಒಬ್ಬ ದೇವ ಪುರುಷನಾಗುವೆ. ಆ ಬಾಗಿಲಿನಿಂದ ಸ್ವರ್ಗಕ್ಕೆ ಹೋಗಬಹುದು."

ಮುದುಕನಿಗೆ ಬಹಳ ಸಂತೋಷವಾಯಿತು ಮನೆಗೆಹೋಗಿ ತನ್ನ ಹೆಂಡತಿಗೆ ಸಂಗತಿಯನ್ನೆಲ್ಲಾ ಹೇಳಿದನು. ಅವಳು ಅದನ್ನು ನಂಬಲಿಲ್ಲ. ಅವನು ಆ ಮಾತ್ರೆಗಳನ್ನು ತೋರಿಸಲು ಅವಳು ನಿಜವೆಂದು ತಿಳಿದಳು ಕಡೆಯ ಆ ದಿನವು ಬರಲು ಮುದಕನ ಹೆಂಡತಿಯು ಗಂಡನಿಗಿಂತ ಮುಂಚೆ ಎದ್ದಳು ಆ ಮಾತ್ರೆಗಳಲ್ಲಿ ಒಂದನ್ನು ತೆಗೆದುಕೊಂಡು ಹೊರಗೆ ಹೊರಟಳು. ದಕ್ಷಿಣದ ಕಡೆ ಆಕಾಶದಲ್ಲಿ ಒಂದು ಬಾಗಿಲು ತೆರೆದಿದ್ದಿತು ಅವಳು ಆ ಮಾತ್ರೆಯನ್ನು ನುಂಗಿದಳು. ಆಕಾಶದಿಂದ ಒಂದು ವಿಮಾನವು ಇಳಿದು ಬರಲು ಅದರಲ್ಲಿ ಕೂತಳು. ವಿಮಾನವು ಮೇಲಿನ ಸ್ವರ್ಗಕ್ಕೆ ಅವಳನ್ನು ಕರೆದುಕೊಂಡುಹೋಯಿತು. ಕೆಲವು ಕ್ಷಣಗಳಲ್ಲಿಯೇ ಮುದುಕನು ಹೊರಗೆ ಬಂದು ನೋಡಿದನು ಹೆಂಡತಿಯು ವಿಮಾನದಲ್ಲಿ ಮೇಲಕ್ಕೆ ಹೋಗುತ್ತಿದ್ದುದನ್ನು ಕಂಡನು ತಾನು ಉಳಿದ ಇನ್ನೊಂದು ಮಾತ್ರೆಯನ್ನು ನುಂಗಿದನು ಆದರೆ ಆಕಾಶದಲ್ಲಿ ಯಾವ ಬಾಗಿಲೂ ತೆರೆಯಲಿಲ್ಲ ಇನ್ನೊಂದು ವಿಮಾನವು ಮಾತ್ರ ಇಳಿದು ಬಂದಿತು ಮುದುಕನು ಅದರಲ್ಲಿ ಕುಳಿತನು. ಅದು ಆಕಾಶಕ್ಕೆ ಏರಹತ್ತಿತು ಮೇಲಕ್ಕೆ ಹೋಗುತ್ತ ಹೋಗುತ್ತ ದಕ್ಷಿಣದ ಕಡೆಯಲ್ಲಿ ಒಂದು ಬಾಗಿಲು ಕಂಡಿತು ಆದರೆ ಅದರೊಳಕ್ಕೆ ಹೋಗುವಂತಿರಲಿಲ್ಲ. ಸರಳುಗಳಿಂದ ಮುಚ್ಚಿತ್ತು. ಅವನು ಬಾಗಿಲಬಳಿಗೆ ಬಂದು ಅಳುತ್ತಾ ನಿಂತನು. ಬಹಳ ಹೊತ್ತು ಅತ್ತರೂ ಯಾರೂ ಮಾತನಾಡಿಸಲಿಲ್ಲ

ಕೊನೆಗೆ ಒಬ್ಬ ದೇವತೆಯು ಬಂದು, "ನೀನು ಸುಮ್ಮನೆ ಏಕೆ ಅಳುತ್ತೀಯೆ? ಒಳಕ್ಕೆ ಹೋಗಲಾರೆ ಚಂದ್ರನಲ್ಲಿರುವ ಹಿಮದ ಅರಮನೆಯನ್ನು ನಿನಗೆ ಕೊಡುತ್ತೇನೆ. ಇಷ್ಟವಿದ್ದರೆ ನಿನಗೆ ಕೊಡುತ್ತೇನೆ ಇಷ್ಟವಿದ್ದರೆ ನೀನು ಅಲ್ಲಿರು ವರ್ಷಕ್ಕೊಂದಾವರ್ತಿ ಈ ಬಾಗಿಲು ತೆರೆಯುವುದು. ಆಗ ನೀನು ನಿನ್ನ ಹೆಂಡತಿಯನ್ನು ನೋಡಬಹುದು" ಎಂದನು. ಅಂದಿನಿಂದ ಆ ಮುದುಕನು ಅಲ್ಲಿಯೇ ಇದ್ದಾನೆ. ಈಗಲೂ ಕೂಡ ನಾವು ಅವನನ್ನು ಚಂದ್ರನಲ್ಲಿ ಕಾಣಬಹುದು. (ವಿಶ್ವಕರ್ಣಾಟಕ)

ಚಿತ್ರಲಿಪಿಗೆ ಉತ್ತರ: ದೇವರಿಗೆ ಹೂವು ಪೂಜೆ ಮಾಡಿ ವರವನ್ನು ಬೇಡುತ್ತಾರೆ. ದೊರೆಯ ಆನೆ ಪಲ್ಲಕ್ಕಿ ಬೇಡಿದರೆ, ತಿರುಕನು ಊಟವನ್ನು, ಮಕ್ಕಳು ಹಣ್ಣು ಹಂಪಲುಗಳನ್ನು ಕೇಳಿಕೊಳ್ಳುತ್ತಾರೆ




ವಿದ್ಯಾ ಪರಾ ದೇವತಾ

ಕಟ್ಟು ೯ | ಯುವ ಸಂ॥—ಪುಷ್ಯ—ಜನವರಿ ೧೯೩೬ | ಪುಸ್ತಕ ೮

# ಮಗುವಿನ ಕೂಗು

ಶ್ರೀ ಹೊಯಿಸಳ

ಹೈ ಯೆಂಬೋದೂ ಕುದುರೇ ಕಂಡು

ಕೂ ಯೆಂಬೋದೂ ಕುನ್ನಿಯು ಕಂಡು

ಮ್ಯಾ ವೆಂಬೋದೂ ಸೀಬಿಯು ಕಂಡು

ತಾ ಯೆಂಬೋದೂ ತಿಂಡೀ ಕಂಡು

ಎ ಯೆಂಬೋದೂ ಸಿಟ್ಟಿನ ಕೂಗು

ಊ ಯೆಂಬೋದೂ ಅಳು ಬಂದಾಗ

ಆ ಯೆಂಬೋದೂ ತಾಂಬೂಲಕ್ಕೆ

ಸಾ ಯೆಂಬೋದೂ ಸಂಗೀತಕ್ಕೆ

ಇವು ಕೇಳಿಲ್ಲವು
ಮಗುವಿನ
ಕೂಗು

## ಅಲಂಕಾರ

ಮಕ್ಕಳು ಎಂದರೆ ಮುದ್ದು. ತಂದೆತಾಯಿಗಳು ತಮಗೆ ಗತಿಯಿಲ್ಲದಿದ್ದರೂ ಮಕ್ಕಳಿಗೆ ಒಡವೆ ವಸ್ತುಗಳನ್ನು ಹಾಕಿ ಅಲಂಕರಿಸಿನೋಡಿ ಸಂತೋಷಪಡುತ್ತಾರೆ

ಹೀಗೆ ಅಲಂಕಾರ ಪಡೆದಿರುವ ಮಗುವಿನ ಚಿತ್ರವೊಂದು ಇಲ್ಲಿದೆ. ತಲೆಯ ಮೇಲೆ ಒಂದು ವಜ್ರದ ಪುಟ್ಟ ಮಲಕು ಹಾಕಿದೆ. ಪೂರ್ವದಲ್ಲಿ ಒಂದು ಸಣ್ಣ ಚಂಡನ್ನು ತಲೆಯ ಮೇಲಿಟ್ಟು ಅದಕ್ಕೆ ಮಲಕು ಹಾಕುತ್ತಿದ್ದರು ಈಗ ಈ ಮಗುವಿನ ತಲೆಯಮೇಲೆ ಸುಂದರವಾದ ಹೂವುಗಳನ್ನು ಸಿಂಗರಿಸಿ ಅದಕ್ಕೆ ಆ ಮಲಕು ಕಟ್ಟಿದ್ದಾರೆ ಪುಟ್ಟ ಮಗು ಪುಟಾಣಿ ಮಲಕು. ಕಿವಿಯ ಕಡಕು, ಕತ್ತಿನ ಹಾರ, ನಡುವಿನ ಡಾಬು, ಕೈಯ ಬಳೆಗಳಂತೂ ನೀನೂ ಎಲ್ಲೆಲ್ಲೂ ಕಂಡಿರುವವೇ ! ಈ ಚಿತ್ರದಲ್ಲಿ ಒಂದು ವಿಶೇಷವಿದೆ ಹುಡುಕಿನೋಡು.

(ಮಕ್ಕಳಿಗೆ ತಲೆಯ ಕೂದಲು ಕತ್ತರಿಸುವುದು ಹೊಸ ಸಂಪ್ರದಾಯ ಈ ಮಗುವಿಗೆ ತಲೆಯ ಕೂದಲು ಕತ್ತರಿಸಿದೆ)

## ಎಚ್ಚರಿಕೆ

ಈ ಚಿತ್ರದಲ್ಲಿ ನೀನು ನೋಡುವುದು ಮಗುವಿನ ಅಂದವನ್ನು ಮಾತ್ರವಲ್ಲ ಅದರ ಮನಸ್ಸಿನ ಭಾವವೂ ಕಂಡುಬರುತ್ತದೆ. ಅದನ್ನೂ ನೋಡು ಮಗುವು ಬಾಯಿಬಿಟ್ಟುಕೊಂಡಿದೆ ಕಣ್ಣನ್ನು ಅಗಲವಾಗಿ ತೆರೆದಿದೆ. ಕೈಗಳು ಮಡಿಸಿಕೊಂಡಿವೆ ಇದರಿಂದ ಏನು ತೋರುವುದು ? ಯಾರೋ ಚಿಟಿಕೆ ಹೊಡೆದೋ ಚಪ್ಪಾಳೆಯನ್ನು ತಟ್ಟಿಯೋ ಮಗುವಿನ ಗಮನವನ್ನು ತಮ್ಮ ಕಡೆಗೆ ಎಳೆದಿದ್ದಾರೆ. ಅವರೂ ಹೊಸಬರು ಇರಬೇಕು. ಹಳೆಬರಾಗಿದ್ದರೆ, ಮಗುವು ಅವರನ್ನು ಗುರುತಿಸುತ್ತಿತ್ತು. ಅಷ್ಟೇ ಅಲ್ಲ ಸಂತೋಷಪಟ್ಟು ಎತ್ತಿಕೊಳ್ಳಿ ಎಂದು ಕೈಗಳನ್ನು ನೀಡುತ್ತಿತ್ತು

ಇಷ್ಟು ಇಲ್ಲ, ಅದರಿಂದ ಗುರುತರಿಯದ ಹೊಸಬರ ಕಡೆ ನೋಡುತ್ತಿದೆ.

(ಚಿತ್ರಗಳು ಹಿಂದಿನ ಪುಟದಲ್ಲಿವೆ)

---

# ವಿಜಯನಗರ

( ಹಂಪಿ )

---

ದೆಹಲಿಯಲ್ಲಿ ಮಹಮ್ಮದ್‌ಬಿನ್ ತೊಗಲಕ್‌ನು ಆಳುತ್ತಿದ್ದಾಗ ತುಂಗಭದ್ರೆಯ ತೀರದಲ್ಲಿ ಆನೆಗೊಂದಿಯ ಅರಸುಗಳು ಆಳುತ್ತಿದ್ದರು. ಅವರು ಹಳೇಬೀಡಿನ ಹೊಯ್ಸಳರ ವಂಶದವರಂತೆ.

ಇವರು ವಿದ್ಯಾರಣ್ಯನೆಂಬ ಒಬ್ಬ ಯತಿಯ ಸಹಾಯದಿಂದ ಒಂದು ಸಾಮ್ರಾಜ್ಯವನ್ನು ಕಟ್ಟಿದರು ಸಾಮ್ರಾಜ್ಯವೆಂದರೆ ಹಲವು ರಾಜ್ಯಗಳು ಸೇರಿರುವ ಒಂದು ಭಾರಿಯ ರಾಜ್ಯ. ಈ ಸಾಮ್ರಾಜ್ಯವನ್ನು ಕಟ್ಟಿದವರ ಹೆಸರು ಹಕ್ಕರಾಯ ಬುಕ್ಕರಾಯ ಎಂದು ಇವರಿಬ್ಬರೂ ಅಣ್ಣತಮ್ಮಂದಿರು

ಇವರು ಕಟ್ಟಿದ ರಾಜ್ಯವು ತುಂಗಭದ್ರಾನದಿಯ ತೀರದಲ್ಲಿ ಆರಂಭವಾಗಿ ಐವತ್ತು ವರ್ಷಗಳೊಳಗಾಗಿ ದಕ್ಷಿಣದೇಶವನ್ನೆಲ್ಲ ಆಕ್ರಮಿಸಿಕೊಂಡಿತು ಉತ್ತರದಲ್ಲಿ ಕೃಷ್ಣಾನದಿಯಿಂದ ಹಿಡಿದು ರಾಮೇಶ್ವರದವರೆಗೆ ಬೆಳೆಯಿತು ಈ ಅವಸರದಲ್ಲಿ ಬಹಳ ಪ್ರಸಿದ್ಧರಾದವರು ಕೃಷ್ಣದೇವರಾಯ ಅಳಿಯ ರಾಮರಾಯ.

ಕೃಷ್ಣದೇವರಾಯನ ಕಾಲದಲ್ಲಿ ರಾಜ್ಯವು ಬಹಳ ಬೆಳೆಯಿತು ಈಗಿನ ಪೂರಿ ಗಂಜಾಂವರೆಗೂ ಹಬ್ಬಿತು. ಅಳಿಯ ರಾಮರಾಯನ ಕಾಲದಲ್ಲಿ ತಾಳಿಕೋಟೆಯ ಯುದ್ಧವಾಗಿ, ರಾಜ್ಯವು ಅಳಿದು ಹೋಯಿತು ಮತ್ತೆ ಆ ರಾಜ್ಯವು ತಲೆಯೆತ್ತಲಿಲ್ಲ.

ಅಲ್ಲಿಂದ ಮುಂದಕ್ಕೂ ಆ ವಂಶದ ಅರಸರು ಕೆಲವು ಕಾಲ ಹೆಸರಿಗೆ ಅರಸರಾಗಿದ್ದರು. ಅಂತಹ ಹೆಸರಿನ ಅರಸರಿಂದಲೇ ಇಂಗ್ಲೀಷರು ಮದರಾಸನ್ನು ಮೊದಲು ತೆಗೆದುಕೊಂಡದ್ದು.

ಆ ಸಾಮ್ರಾಜ್ಯವು ಹೆಸರಾಗಿ ಬಾಳಿದಾಗ ಅದಕ್ಕೆ ವಿಜಯನಗರ ಸಾಮ್ರಾಜ್ಯವೆಂದು ಹೆಸರು. ಅದರ ರಾಜಧಾನಿ ವಿಜಯನಗರ ಆ ನಗರವು ೧೪ ಮೈಲಿ ಉದ್ದ ೯ ಮೈಲಿ ಅಗಲವಾಗಿತ್ತಂತೆ. ಅದರ ವೈಭವದ ಕಾಲದಲ್ಲಿ ಅದನ್ನು ನೋಡಿದ್ದ ಅನೇಕರು ಯಾತ್ರಿ



ಕಲ್ಲುತೇರು ಹಂಪಿ.



ವಿರೂಪಾಕ್ಷ ಸ್ವಾಮಿ ದೇವಾಲಯದ ಗೋಪುರ ಹಂಪಿ.



ಉಗ್ರನ ಸಿಂಹ ಸ್ವಾಮಿ ಹಂಪಿ.



ವಿಠಲರಾಯನ ಮಂಟಪ, ಹಂಪಿ



ಗಜಶಾಲೆ, ಹಂಪಿ.



ಕಮಲಮಹಲ್ ಹಂಪಿ.

ಕರು ಅದನ್ನು ಬೇಕಾದ ಹಾಗೆ ವರ್ಣಿಸಿದ್ದಾರೆ ಆಗ ಅಲ್ಲಿನ ಅಂಗಡಿಗಳಲ್ಲಿ ರತ್ನಗಳನ್ನು ರಾಶಿ ರಾಶಿಯಾಗಿ ಸುರಿದಿರುತ್ತಿದ್ದರಂತೆ ಒಂದೊಂದು ಬೀದಿಯು ಎರಡು ಮೈಲಿ ಮೂರು ಮೈಲಿ ಉದ್ದವಿರುತ್ತಿದ್ದಿತಂತೆ. ರಾಜಬೀದಿಗಳಲ್ಲಿ ಯಾವಾಗಲೂ ಆನೆ ಕುದುರೆ ಪಾಲಕ್ಕಿಗಳು ತಿರುಗುತ್ತಿದ್ದವಂತೆ.

ಈಗ ಆ ಭಾರಿಯ ನಗರವು ಇಲ್ಲ. ಅದನ್ನು ತಾಳೀಕೋಟೆಯ ಯುದ್ಧವಾದ ಮೇಲೆ ಶತ್ರುಗಳು ಮುತ್ತಿ ಆರುತಿಂಗಳು ದಿನ ಒಂದೇ ಸಮನಾಗಿ ಕೊಳ್ಳೆ ಹೊಡೆದರಂತೆ ಈಗ ಅಲ್ಲಿರುವುದು ಬರಿಯ ಹಾಳುಕೊಂಪೆ ಈಗಿನ ಹಂಪೆಯು ಹಾಳುಕೊಂಪೆ ಅಲ್ಲಿ ಏನೂ ಇಲ್ಲ ಒಂದು ವಿರೂಪಾಕ್ಷನ ದೇವಾಲವು ಮಾತ್ರ ಉಳಿದಿದೆ. ಆ ವಿರೂಪಾಕ್ಷನ ದೇವಾಲಯದ ವಿಚಾರವಾಗಿ ಒಂದು ಕಥೆಯನ್ನು ಹೇಳುತ್ತಾರೆ.

ಶತ್ರುಗಳು ಊರನ್ನು ಲೂಟಿಮಾಡುತ್ತ ದೇವಸ್ಥಾನದ ಬಳಿಗೆ ಬಂದರಂತೆ ಅದನ್ನು ಧ್ವಂಸಮಾಡಬೇಕೆಂದು ಅವರ ಇಷ್ಟ ಆದರೆ ಅಲ್ಲಿ ದೇವಸ್ಥಾನವು ಉರಿಯುತ್ತಿದ್ದಂತೆ ಅವರಿಗೆ ಕಂಡು, ಅವರು ಹೆದರಿ ಓಡಿಹೋದರಂತೆ ಈ ಕಥೆಯು ನಿಜವೋ ಸುಳ್ಳೋ. ಅಂತೂ ಈಗಲೂ ಆ ದೇವಸ್ಥಾನವು ಮಾತ್ರ ಅಚ್ಚಳಿಯದಂತೆ ನಿಂತಿದೆ.

ಅಲ್ಲಿ ಇನ್ನೂ ಒಂದು ವಿಶೇಷವುಂಟು ಆ ದೇವಾಲಯದ ಗೋಪುರವು ಬಹಳ ಭಾರಿಯಾದುದು. ಅದನ್ನು ಕಟ್ಟಿರುವ ರೀತಿಯು ಬಹಳ ಚೆನ್ನಾಗಿದೆಯೆಂದು ಅನೇಕರು ಬಂದು ನೋಡಿಕೊಂಡು ಹೋಗುತ್ತಾರೆ ಈಗ ವರ್ಷಕ್ಕೊಮ್ಮೆ ಅಲ್ಲಿ ಜಾತ್ರೆಯಾಗುತ್ತದೆ ಆಗ ಸುಮಾರು ಒಂದು ಲಕ್ಷ ಜನರು ಸೇರುತ್ತಾರೆ

ಆ ಹಾಳೂರಿನಲ್ಲಿ ಹಿಂದಿನ ಕಾಲದ ಗುರುತುಗಳು ಇನ್ನೂ ಕೆಲವಿವೆ. ಅದರಲ್ಲಿ ವಿಜಯ ವಿಟ್ಠಲನ ಗುಡಿಯೂ ಒಂದು ಅದು ಹಳೇಬೀಡು ಬೇಲೂರುಗಳಲ್ಲಿರುವ ಜಾತಿಯ ಗುಡಿ ಅಲ್ಲಿರುವ ಕಲ್ಯಾಣ ಮಂಟಪವನ್ನು ವಿಟ್ಠಲರಾಯನ ಮಂಟಪವೆಂದೂ ಕರೆಯುತ್ತಾರೆ. ಇಲ್ಲಿರುವ ಒಂದೊಂದು ಕಂಭವೂ ಬಳಪದ ಕಲ್ಲಿನದು. ಹೊಡೆದರೆ ಕಂಚಿನಂತೆ ಸದ್ದು ಬರುತ್ತದೆ ಬುದ್ಧಿವಂತರು ಆ ಕಂಭಗಳ ಹತ್ತಿರನಿಂತು ಸರಿಯಾಗಿ ಹೊಡೆಯುತ್ತ ಬಂದರೆ ವಾದ್ಯವನ್ನು ಬಾಜಿಸಿದಂತಾಗುವುದು.

ಕಲ್ಲುತೇರು ಕೂಡ ಅಂದವಾದುದು. ಅದು ಸುಮಾರು ಎರಡಾಳು ಎತ್ತರವಿದೆ. ಪೂರ್ವದಲ್ಲಿ ಅದರಲ್ಲಿ ದೇವರನ್ನು ಕುಳ್ಳಿರಿಸಿ ದೇವಸ್ಥಾನದಲ್ಲಿ ಮೆರವಣಿಗೆ ಮಾಡುತ್ತಿದ್ದರಂತೆ! ಈಗ ಅದು ಒಂದು ಕಡೆ ಹಾಗೆಯೇ ನಿಂತಿದೆ.

ಕಲ್ಯಾಣಮಂಟಪ ಕಲ್ಲು ತೇರುಗಳೆರಡರ ಚಿತ್ರವನ್ನೂ ಕೊಟ್ಟಿದೆ. ನೋಡು. ಕಲ್ಲುತೇರಿನ ಕೆತ್ತನೆ ಕೆಲಸದ ಅಂದಚೆಂದಗಳು ಚಿತ್ರದಲ್ಲಿಯೂ ಕಾಣುತ್ತಿವೆ.

ವಿಜಯನಗರದ ಚಕ್ರವರ್ತಿಗಳು ಆನೆ ಕುದುರೆಗಳನ್ನು ಬಹಳವಾಗಿ ಇಟ್ಟಿದ್ದರು. ಅವರ ಬಳಿ ನೂರಾರು ಆನೆಗಳಿದ್ದುವು. ಅವುಗಳನ್ನು ಅವರು ಬಯಲಿನಲ್ಲಿ ಕಟ್ಟುತ್ತಿರಲಿಲ್ಲ ಅದಕ್ಕಾಗಿ ಬೇರೆಯೊಂದು ಕಟ್ಟಡವನ್ನು ಕಟ್ಟಿಸಿದ್ದರು. ಅದಕ್ಕೆ ಗಜಶಾಲೆಯೆಂದು ಹೆಸರು ಆ ಗಜಶಾಲೆಯ ಚಿತ್ರವನ್ನೂ ಕೊಟ್ಟಿದೆ.

ಹಾಗೆಯೇ ಕಮಲ ಮಹಲಿನ ಚಿತ್ರವನ್ನೂ ನೋಡು. ಚಕ್ರವರ್ತಿಗಳು ಮಂತ್ರಾಲೋಚನೆಮಾಡುತ್ತಿದ್ದ ಸ್ಥಳವದು. ಎಂದರೆ ರಾಜ್ಯವನ್ನು ಆಳುವ ವಿಚಾರ, ಯುದ್ಧಗಳ ವಿಚಾರ ಮುಂತಾದವನ್ನು ಕುರಿತು ರಾಜರು ತಮ್ಮ ಮಂತ್ರಿಗಳೊಡನೆ ಆಲೋಚಿಸುತ್ತಿದ್ದ ಸ್ಥಳ. ಅದನ್ನು ಕಮಲದ ಆಕಾರವಾಗಿ ಕಟ್ಟಿರುವುದರಿಂದ ಅದಕ್ಕೆ ಕಮಲ ಮಹಲ್ ಎಂದು ಹೆಸರಂತೆ.

ವಿಜಯನಗರವು ಈಗ ಬರಿಯ ಕಲ್ಲುಗುಡ್ಡಗಳ ಕಾಡು. ಅಲ್ಲಲ್ಲಿ ಹಿಂದಿನ ಗುರುತುಗಳು ಕಾಣುತ್ತವೆ ಆದರೂ ಕಾಡುಬೆಳೆದು ಹೋಗಿ ನೋಡುವ ಕಣ್ಣಿನಲ್ಲಿ ನೀರಿಗೆ ಬದಲು ರಕ್ತವು ಕಾರುತ್ತದೆ.

---

### "ಇದು ಯೇನು"ಗೆ ಉತ್ತರ

೧. ನರಸಿಂಹ ೨. ಪರಶುರಾಮ ೩. ಬಾಲಕೃಷ್ಣ ೪ ಗಂಟೆವಿನಾಯಕ ೫. ಬಸವನ ಗುಡಿ ೬ ಆನೆಕಲ್ಲು ೭. ಶಿವನಸಮುದ್ರ ೮. ಕುದುರೇಮುಖ.

### ಒಗಟಿಗೆ ಉತ್ತರ

೧ ಪಾರ್ಥಿವ ಸಂವತ್ಸರದ ಮಾರ್ಗಶಿರ ಮಾಸ ಶುಕ್ಲಪಕ್ಷ ಸಪ್ತಮೀ ಶುಕ್ರವಾರ ಸಿಂಹಲಗ್ನದಲ್ಲಿ ನಿನ್ನ ಮಗನಿಗೆ ಲಗ್ನವನ್ನು ಇಟ್ಟಿರುವೆನು.
೨. ಕೊಡಿ ಒಲೆ, ೩ ಬೆಳ್ಳುಳ್ಳಿ ೪ ಚಾಮರಾಜನಗರ ೫. ತೆಂಗಿನಕಾಯಿ
೬. ಈಶ್ವರ ಚಂದ್ರ ವಿದ್ಯಾ ಸಾ ಗ ರ
೭. ಹಾವು, ೮ ಶುಂಠಿ ೯ ಗಂಧದ ಕಲ್ಲಿನ ಮೇಲೆ ಗಂಧ ತೇಯುವುದು.

---




**ಮಗೂ,**

ಎರಡು ಮೂರು ಸಲದಿಂದ ಮಕ್ಕಳ ಪುಸ್ತಕ ನೋಡಿ ನಿನಗೆ ಅಬ್ಬಾ ಎನ್ನಿಸಿರಬೇಕು. "ಅದೆಷ್ಟು ಚಿತ್ರಗಳು ಬರುತ್ತಿವೆ!" ಎಂದು ನೀನು ಆಶ್ಚರ್ಯಪಟ್ಟಿರಬೇಕು. ಹೌದು. ಇನ್ನು ಮುಂದೆ ಹಾಗೆಯೇ ಮಾಡಬೇಕು ಎಂದು ಆಸೆ. ನೋಡೋಣ ನಡೆದಷ್ಟು ದಿವಸ ಹಾಗೆ ಮಾಡೋಣ

ಈ ಸಲದ ಪುಸ್ತಕದಲ್ಲಿ ಹಂಪೆಯ ಚಿತ್ರಗಳು ಬಂದಿವೆ. ಹಂಪೆಯು ಪೂರ್ವಕಾಲದಲ್ಲಿ ವಾನರರ ರಾಜಧಾನಿಯಾಗಿತ್ತು ರಾಮಾಯಣದಲ್ಲಿ ರಾಮನಿಗೆ ರಾವಣನ ಮೇಲೆ ಯುದ್ಧಮಾಡಲು ಸಹಾಯಮಾಡಿದವರು ಆ ವಾನರರು. ಈಗಿನ ಹಂಪೆಯು ವಿಜಯನಗರದ ಚಕ್ರವರ್ತಿಗಳ ರಾಜಧಾನಿಯಾಗಿತ್ತು. ಆಗ ಬಹುವೈಭವದಿಂದ ಬಾಳುತ್ತಿದ್ದಿತು. ಈಗ ಪಾಳುಕೊಂಪೆಯಾಗಿದೆ. ನೋಡಿದರೆ ನೀರು ಬರುವ ಕಣ್ಣಿನಲ್ಲಿ ರಕ್ತವು ಬರುತ್ತದೆ

ಈ ಸಲ ಮತ್ತೆ ಮತ್ತೆ ಮಕ್ಕಳ ಪುಟವನ್ನು ಆರಂಭಿಸಿದ್ದೇನೆ. ನೀನು ಬರೆಯದೆ ಹೋಗಬೇಡ. ಬರೆದು ಬಂದ ಕಥೆಗಳನ್ನೆಲ್ಲ ಓದಿ, ಅವುಗಳಲ್ಲಿ ಯಾವುದು ಚೆನ್ನಾಗಿದೆ ನೋಡಿ ಮುದ್ರಿಸುತ್ತೇನೆ. ಆದರೆ ನೀನು ಬರೆಯುವಾಗ ಆ ಕಥೆ ನಿನಗೆ ಎಲ್ಲಿ ಸಿಕ್ಕಿತು ಅದನ್ನೂ ಬರೆ.

ಇತಿ, 'ನಿನ್ನ ಅಣ್ಣ'

# ಇದು ಯೇನು?

 

ಶಿವಭಕ್ತನಾದ ರಾಕ್ಷಸ.

 

ಕನ್ನಡದ ಕವಿಗಳಲ್ಲೊಬ್ಬ

 

ಮೈಸೂರು ಬೆಂಗಳೂರು ನಡುವೆ ಇರುವ
ಸ್ಟೇಷನ್ಗಳಲ್ಲೊಂದು.

 

ಮೈಸೂರಿನ ಬೆಟ್ಟಗಳಲ್ಲೊಂದು.

## ಒ ಗ ಟೆ

೧ ವನದಲ್ಲಿ ಹುಟ್ಟಿ, ವನದಲಿ ಬೆಳೆದು ವನದಿಂದ ಹೊರಟು, ವನಜಲೋಚನನ ಶಿಖರಕ್ಕೇರುವುದು ಯಾವುದು? ಬೇಲಿಯಲಿ ಬೆಳೆವುದು, ಬೇಲಿಯಲಿ ಹೋಗುವನ ಬೆರಳಿಡಿಸಿ ಮಾತನಾಡಿಸುವುದು. ಯಾವುದು? ಅಂಗಳದೆ ಹುಟ್ಟುವುದು, ಅಂಗಳದೆ ಬೆಳೆವುದು, ತಂಗಿ ಮಕ್ಕಳನು ಹಂಗಿಸಿ ಮಾತಾಡುವುದು. ಯಾವುದು? ತೋಟದಲಿ ಹುಟ್ಟುವುದು ತೋಟದಲಿ ಬೆಳೆವುದು. ರಾಟೆ ರುದ್ರಾಕ್ಷಿ ಯೆನಿಸಿಕೊಂಡಿರುವುದು ಯಾವುದು? ಗಗನದೆ ಹುಟ್ಟುವುದು, ಗಗನದೆ ಬೆಳೆಯುವುದು. ಗಮಗಮನೆ ಲೋಕದ ಮೂಗನು ಸೆಳೆವುದು. ಯಾವುದು?

೨ ಕಪ್ಪಟ್ಟೆಕಾಡಿ ಜಂಜರಗಣ್ಣಿ ತಲೆ ಬೋಳಿ ಹೊಕ್ಕಾಳೆ ನಿಡಸಂತೆವಳಗೆ ತಕ್ಕವರ್ಹಿಡಿದು ಯಳತಂದು ಅವಳನ್ನು ತಕ್ಕಡೀಲಿ ಕೂರ್ಸಿ ತೂಕಮಾಡಿದರು.

೩ ಕಾಗೆಗಿಂತ ಕರ್‍ರಗೆ ನೀರ್ಗೋಳಿಗಿಂತ ಬೆಳ್ಳಗೆ, ತಾನೋಡಿದರೆ ಸಣ್ಣದ್ದು, ಸುಮದ್ರಕ್ಕಿಂತ ದೊಡ್ಡದ್ದು ಇದು ಏನು?

೪ ನೋಡಿದರೆ ನೋಟಗಳು, ನಕ್ಕರೆ ನಗುಗಳು, ಒಡೆದರೆ ತುಂಡುಗಳು.

---

## ಬುದ್ಧಿಯ ಪರೀಕ್ಷೆ

ಒಂದು ಪಾತ್ರೆಯ ತುಂಬ ಹತ್ತುಸೇರು ತುಪ್ಪವಿದೆ. ಅಳೆಯಲು ೭ ಸೇರಿನ ಮತ್ತು ಪಾತ್ರೆಗಳು ಎರಡಿವೆ. ಸಮವಾಗಿ ಇಬ್ಬರಿಗೆ ಬರುವಂತೆ ಹೇಗೆ ಹಂಚಬೇಕು?

೨ ಹತ್ತು ಹಣ್ಣುಗಳನ್ನು ಇಬ್ಬರಿಗೆ ಹಂಚಬೇಕು ಒಬ್ಬನು ಆರು ಹಣ್ಣನ್ನೂ ಮತ್ತೊಬ್ಬನು ನಾಲ್ಕು ಹಣ್ಣುಗಳನ್ನೂ, ಜೊತೆಗೆ ಎರಡಾಣೆಯನ್ನು ತೆಗೆದುಕೊಂಡರೆ, ಪ್ರತಿಹಣ್ಣಿನ ಬೆಲೆ ಏನು?

೩ ಹದಿನೇಳು ಕುದುರೆಗಳನ್ನು ಮೂರು ಮಂದಿಗೆ ಹಂಚಬೇಕು. ಮೊದಲನೆಯವನಿಗೆ ಅರ್ಧಭಾಗವನ್ನೂ ಎರಡನೆಯವನಿಗೆ ಮೂರರಲ್ಲಿ ಒಂದು ಭಾಗವನ್ನೂ, ಮೂರನೆಯವನಿಗೆ ಒಂಭತ್ತರಲ್ಲಿ ಒಂದು ಭಾಗವನ್ನೂ ಕೊಡಬೇಕು. ಇದು ಹೇಗೆ?

---

# ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಆದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕುದು. ೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕುದು. ೩ ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನ ವನ್ನು ಕೊಡಲಾಗುವುದು ೪ ಮೊದಲನೆಯ ಬಹುಮಾನ ಎರಡು ರೂಪಾಯಿ· ಎರಡನೆಯ ಬಹುಮಾನ ಒಂದು ರೂಪಾಯಿ. ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ: ಪುಸ್ತಕದ ಬಹುಮಾನ ೨೦. ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕುದು. ೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು. ೭. ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ (ಮಕ್ಕಳ ಪುಸ್ತಕಕ್ಕೆಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ. ಆದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ನಿಲ್ಲಬಾರದಾಗಿ ಪ್ರಾರ್ಥನೆ.

## ಚೌಕಬಂಧ ಸ್ಪರ್ಧೆ

| ೧ |  | ೨ |  | ೩ |
|---|---|---|---|---|
|  | ೪ |  | ೫ |  |
| ೬ |  | ೭ |  | ೮ |
|  | ೯ |  | ೧೦ |  |
| ೧೧ |  | ೧೨ |  | ೧೩ |

ರಿಜಿಸ್ಟರು ನಂಬರು...... ............ ...

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ.—

೧-೨ ಶತ್ರು ೬-೭ ಪೆಟ್ಟಿಗೆಯು ಎಳೆಯುವ ಖಾನಿ ೯-೧೦ ಹೊಲದ ಬೇಲಿಯಲ್ಲಿ ಬೆಳೆಯುವ ಗಿಡ ೧-೪-೭ ನವಧಾನ್ಯಗಳಲ್ಲಿ ಒಂದು ೬-೯-೧೨ ಕತ್ತಿಯ ಬಾಯಿ, ೧೧-೯ ಬಲರಾಮನ ಆಯುಧ ೧೩-೧೦ ಹಾರುವ ಪ್ರಾಣಿ ೩-೫-೭ ಕಮಲದ ಕನ್ನಡದ ಹೆಸರು ೪-೫-೨ ಕುಮಾರಿಯತದ್ಭವ

# ಸ್ಪರ್ಧೆಯಲ್ಲಿ ಬಹುಮಾನಗಳನ್ನು ಪಡೆದವರು

## ಪುಸ್ತಕ ಬಹುಮಾನ

೧ನೆಯ ಬಹುಮಾನ :—ಚಿ|| ಎಚ್‌. ಸಿ. ರಾಜಶೇಖರ ಮೂರ್ತಿ
ಮಿಡಲ್ III ಇಯರ್ ಕ್ಲಾಸ್ ಹೊನ್ನವಳ್ಳಿ.

೨ನೆಯ ಬಹುಮಾನ :—ಶ್ರೀಮತಿ ವೈ ಎಂ. ಸುಂದರಮ್ಮ
c/o ಶ್ರೀ ವೈ. ಎಸ್‌. ಮಹಾಬಲಜೋಯ್ಸರು. ಬೆಂಗಳೂರು.

೩ನೆಯ ಬಹುಮಾನ :—ಚಿ|| ಸಿ ಶ್ರೀನಿವಾಸನ್
s/o ಸಿ ಗೋಪಾಲಕೃಷ್ಣಯ್ಯಂಗಾರ್ ಬೆಂಗಳೂರು

೧ ಶ್ರೀಮತಿ ಎ ಟಿ. ಕನಕಲಕ್ಷ್ಮಿ
c/o ಶ್ರೀ ಎ ಟಿ. ಆಚಾರ್ಯ ೧೯೨, ವಿಶ್ವೇಶ್ವರಪುರಂ ಬೆಂಗಳೂರು ಸಿಟಿ.

೨ ಚಿ|| ಎ ನರಸಿಂಹಸ್ವಾಮಿ,
s/o ಶ್ರೀ ಅನಂತರಾಮಯ್ಯನವರು ಅಮಲ್ದಾರರು ಚಿತ್ರದುರ್ಗ.

೩ ಶ್ರೀಮತಿ ಕೆ ಜಿ. ಇಂದಿರಮ್ಮ
c/o ಶ್ರೀ ಆರ್. ಕೆ. ಜಯತೀರ್ಥಾಚಾರ್ ಅಡ್ವೋಕೇಟ್ ಶಿವಮೊಗ್ಗಾ

೪ ಶ್ರೀಮತಿ ಬಿ. ಸಿ. ಮೀನಾಕ್ಷಿ
c/o ಶ್ರೀ ಬಿ. ರಾಮಸ್ವಾಮಯ್ಯನವರು ಗೀತಾ. ಶಂಕರಪುರ ಬೆಂಗಳೂರು

೫ ಶ್ರೀಮತಿ ಎಚ್‌. ಬಿ. ಸುಶೀಲಮ್ಮ V ನೆಯ ತರಗತಿ ಗರ್ಲ್ಸ್ ಸ್ಕೂಲು, ಬೀರೂರು

೬ ಶ್ರೀಮತಿ ಜಿ ಕೆ ಮಾದಮ್ಮ IVನೆ ತರಗತಿ ಗರ್ಲ್ಸ್ ಸ್ಕೂಲ್ ಅಜ್ಜಂಪುರ

೭ ಚಿ|| ಪಿ. ಬಿ ಸುಶೀಲಮ್ಮ
c/o ಶ್ರೀ ಪಿ ಭೀಮರಾಯರು ಅಡ್ವೋಕೇಟ್, ಶೇಷಾದ್ರಿಪುರಂ ಬೆಂಗಳೂರು

೮ ಚಿ|| ಗೋಪಾಲ ವೆಸ್ಟ್ಲೀ, ವಾಣೀವಿಲಾಸ ರಸ್ತೆ. ಮೈಸೂರು

೯ ಚಿ|| ಎಚ್‌. ಎಸ್‌. ವೆಂಕಟರಾವ್,
ವಿದ್ಯಾರ್ಥಿ, ವೆಂಗಸಂದ್ರ ಬೇತಮಂಗಲದ ಪೋಸ್ಟ್

೧೦ ಚಿ|| ಎಸ್‌. ಕೆ. ಶ್ರೀಕಂಠನ್ IV ತರಗತಿ ಲಕ್ಷ್ಮೀಪುರಂ ಸ್ಕೂಲ್, ಮೈಸೂರು.

೧೧ ಚಿ|| ಕೆ. ಟಿ. ತಿರುಮಲರಾಜು IV ಇಯರ್ ಮಿಡಲ್ ಸ್ಕೂಲ್, ಚಿಕ್ಕಮಗಳೂರು.

೧೨ ಶ್ರೀಮತಿ ಎಚ್‌. ವಿ. ಜಯಲಕ್ಷ್ಮಿ
c/o ಶ್ರೀ ಎಚ್‌. ಎಸ್‌. ವೆಂಕಟದಾಸಪ್ಪನವರು ಮಲ್ಲೇಶ್ವರ ಬೆಂಗಳೂರು ಸಿಟಿ.

---

ಈಸಲ ಸ್ಪರ್ಧೆಗೆ ೧೬ ಜನರು ಮಾತ್ರ ಬಂದಿದ್ದಾರೆ ಅದರಲ್ಲಿ ಒಬ್ಬರದು ಎರಡು ತಪ್ಪು. ಅವನ್ನು ಬಿಟ್ಟು ಉಳಿದವರಿಗೆಲ್ಲ ಪುಸ್ತಕಗಳನ್ನೇ ಹಂಚಿದೆ. ೧, ೨, ೩, ನೆಯ ಬಹುಮಾನಗಳು ಗೌರವಾರ್ಥಮಾತ್ರ

# ಚಿತ್ರಪರಿಚಯ

ಈಸಲದ ವರ್ಣಚಿತ್ರವು ಒಬ್ಬ ಕುಂಬಾರಗಿತ್ತಿಯದು. ಒಂದು ಕುಂಬರ ಹೆಣ್ಣು ತಲೆಯ ಮೇಲೆ ನಾಲ್ಕು ಮಡಿಕೆಗಳನ್ನು ಹೊತ್ತುಕೊಂಡು ಕಂಕುಳಲ್ಲಿ ಒಂದು ಮಡಿಕೆ ಯನ್ನು ಇಟ್ಟುಕೊಂಡು ಹೊರಟಿದ್ದಾಳೆ. ಇಷ್ಟು ಮಡಿಕೆಗಳನ್ನು, ಅವೂ ದೊಡ್ಡ ದೊಡ್ಡವು, ತೆಗೆದುಕೊಂಡು ಹೊರಟಿರುವುದು ಎಲ್ಲಿಗೆ? ಸಂತೆಗೇ ಇರಬೇಕು. ಇಲ್ಲದೆ ನೀರಿಗಾಗಿದ್ದರೆ ಐದು ಹರವಿ ಕೊಂಡುಹೋಗುವುದುಂಟೆ?

ಇವಳು ಬಡವರ ಹೆಣ್ಣೆ? ಭಾಗ್ಯವಂತರ ಹೆಣ್ಣೆ? ಎಂಬುದನ್ನು ಗೊತ್ತುಮಾಡಿ ಕೊಳ್ಳಲು ಇವಳ ವಸ್ತ್ರ ಭೂಷಣ (ಒಡಿವೆ)ಗಳನ್ನು ನೋಡು. ಮೂಗಿನಲ್ಲಿ ಇಟ್ಟಿರುವ ನತ್ತು, ಬೊಟ್ಟು, ಬೇಸರಿಗಳು, ಕಿವಿಯಲ್ಲಿರುವ ಚಳತುಂಬಿನ ಜಾತಿಯ ಲೋಲಕ್ಕು ಗಳು, ಕೈಗಳಿಗೆ ಚಿನ್ನದ ಬಳೆಗಳು, ಉಟ್ಟಿರುವುದು ಜರತಾರಿಯ ಸೀರೆ, ಕತ್ತಿನಲ್ಲಿ ಚಿನ್ನದ ಗುಂಡು ಎಲ್ಲದಕ್ಕಿಂತಲೂ ಹೆಚ್ಚಾಗಿ ತಲೆಯನ್ನು ಅಂದವಾಗಿ ಬಾಚಿಕೊಂಡಿರು ವುದು ಇವೆಲ್ಲವೂ ಭಾಗ್ಯವಂತರ ಮನೆಯ ಹೆಣ್ಣು ಇವಳು ಎಂಬುದನ್ನು ತೋರಿಸುತ್ತವೆ.

ಇನ್ನೊಂದು ವಿಶೇಷವಿದೆ ನೋಡು. ಈ ಹೆಣ್ಣು ಸೆರಗನ್ನು ಬಲಭುಜದ ಮೇಲೆ ಹೊದ್ದಿದ್ದಾಳೆ. ನಮ್ಮ ದೇಶದಲ್ಲಿ ಹೆಂಗಸರು ಸೆರಗನ್ನು ಬಲಭುಜದ ಮೇಲೆ ಹೊದಿಯುವುದೂ ಉಂಟು ಎಡಭುಜದ ಮೇಲೆ ಹೊದೆಯುವುದೂ ಉಂಟು. ಹಾಗೆ ಬಲಭುಜದ ಮೇಲೆ ಹೊದೆಯುವದೂ ಸಾಮಾನ್ಯವಾಗಿ ತಮಿಳು ಅಥವಾ ತೆಲಗು ಮಾತನ್ನು ಆಡುವರು. ಕನ್ನಡ ಮಾತಾಡುವರೆಲ್ಲ ಸಾಮಾನ್ಯವಾಗಿ ಎಡ ಭುಜದ ಮೇಲೆಯೇ ಸೆರಗು ಹೊದಿಯುತ್ತಾರೆ.

ಉತ್ತರ ಬರೆದವರು

೧. ಎ. ಎಲ್. ಸ್ವಾಮಿ, ೨. ಶ್ರೀಪಾದ ನರಸಿಂಹ ಕುಲಕರಣಿ.

## ಕ ಥೆ

### ತಾರೆ ಆಕಾಶಕ್ಕೆ ಹೋದದ್ದು.

ತಾರೆಯು ಹುಟ್ಟಿದ್ದು ಬಡವರ ಮನೆಯಲ್ಲಿ ಆದರೇನು? ಬಡವರಿಗೆ ಮಕ್ಕಳು ಬೇಡವೇ? ಅವಳನ್ನು ತಾಯಿತಂದೆಗಳು ಬಲು ಪ್ರೀತಿಯಿಂದ ಬೆಳೆಸಿದರು. ತಾರೆಯು ಚಂದ್ರನ ಹಾಗೆ ಬೆಳೆದಳು.

ಒಂದು ದಿನ ತಾರೆಯು ಸಂಜೆಹೊತ್ತಿನಲ್ಲಿ ಅಲೆಯುತ್ತಿದ್ದಳು. ತಂಗಾಳಿಯು ಬೀಸುತ್ತಿತ್ತು. ಎಲ್ಲಿ ನೋಡಿದರೂ ಎಲ್ಲರೂ ಸಂತೋಷವಾಗಿದ್ದರು. ತಾರೆಯು ಅತ್ತ ಕಡೆ ಇತ್ತ ಕಡೆ ನೋಡುತ್ತ ತಲೆಯೆತ್ತಿನೋಡಿದಳು ಸೂರ್ಯನು ಮುಳುಗಿದ್ದಾನೆ. ಸಂಜೆಗೆಂಪು ಪಡುವಲಿನ ಆಕಾಶದಲ್ಲಿ ಕುಂಕುಮ ಚೆಲ್ಲಿದ ಹಾಗೆ ಮೆರೆಯುತ್ತಿದೆ. ನೋಡಿ ಅವಳಿಗೆ ಬಹಳ ಸಂತೋಷವಾಯಿತು ಹಾಗೆಯೇ ನೋಡುತ್ತ ಇರುವಾಗ ಅಲ್ಲಿ ಒಂದು ಹೊಳೆಯುತ್ತಿರುವ ತಾರೆಯು ಕಣ್ಣಿಗೆ ಬಿತ್ತು

ಅದನ್ನು ನೋಡಿ ತಾರೆಗೆ "ಆಹಾ! ನಾನೂ ಆಕಾಶದಲ್ಲಿದ್ದರೆ! ಮೋಡದ ಮೇಲೆ ಕುಳಿತು ಲೋಕವೆಲ್ಲ ಸುತ್ತಬಹುದು!" ಎನ್ನಿಸಿತು ಹಾಗೆಯೇ ಆ ತಾರೆ ಯನ್ನೇ ನೋಡುತ್ತ ಮನೆಗೆ ಬಂದಳು ಅವಳು ಊಟಮಾಡಿ ಮಲಗುವವರೆಗೂ ಅವ ಳಿಗೆ ಅದೇ ಯೋಚನೆ.

ಅವಳು ಮಲಗಿದಳು. ನಿದ್ದೆಯು ಬಂತು. ಆಗ ಒಂದು ಕನಸು ಕನಸಿನಲ್ಲಿ ಯಾರೋ ಬಂದಿದ್ದಾರೆ. ಗುರುತು ತಿಳಿದಂತಿದೆ ತಾರೆಯು 'ನೀವು ಯಾರಮ್ಮಾ?' ಎಂದು ಕೇಳಿದಳು. ಬಂದಾಕೆಯು 'ನನ್ನ ಹೆಸರೂ ತಾರೆ' ಎಂದಳು.

ತಾರೆಗೆ ಆಶ್ಚರ್ಯವಾಯಿತು. ಆಕೆಯು ಹೇಳಿದಳು. "ತಾರಾ! ನಾನೂ ನೀನೂ ಒಂದೇ ನೀನು ಇಲ್ಲಿರುವೆ ನಾನು ಅಲ್ಲಿರುವೆ. ನೀನು ಒಳ್ಳೆಯ ಕೆಲಸ ಮಾಡಿದರೆ ನಾನು ಬೆಳ್ಳಗೆ ಬೆಳಗುವೆನು ನೀನು ಕೆಟ್ಟಕೆಲಸಮಾಡಿದರೆ, ನಾನು ಕಪ್ಪಗೆ ಆಗಿ ಮೋಂ ಕಾಗುವೆನು" ಎಂದು ಹೇಳಿದಳು. ತಾರೆಯನ್ನು ಬಲವಂತಮಾಡಿ ಆಕಾಶಕ್ಕೆ ಕರೆದು ಕೊಂಡು ಹೋದಳು ಅಲ್ಲಿ ಎಲ್ಲವನ್ನೂ ತೋರಿಸಿದಳು ಅಷ್ಟರಲ್ಲಿ ತಾರೆಗೆ ಎಚ್ಚರ ವಾಯ್ತು ಅಂದಿನಿಂದ ಅವಳು ನಿತ್ಯವೂ ಆ ತಾರೆಯನ್ನು ಹುಡುಕಿನೋಡುವಳು. ಆ ತಾರೆಯು ಕೆಲವು ದಿನ ಮುಚ್ಚಂಜೆಗೆ ಕಾಣುವುದು. ಇನ್ನು ಕೆಲವುದಿನ ಮುಂಜಾನೆ ಕಾಣುವುದು: ಅದು ಬೆಳ್ಳಗೆ ಬೆಳಗುವುದನ್ನು ಕಂಡಾಗಲೆಲ್ಲ ತಾರೆಗೆ ಬಹಳ ಸಂತೋಷ! ಏಕೆ?

# ಆ ಹಾ ರ

## ಊಟ ಬಲ್ಲವನಿಗೆ ರೋಗವಿಲ್ಲ ಮಾತು ಬಲ್ಲವನಿಗೆ ಜಗಳವಿಲ್ಲ

ನಾವು ಏನೇನೋ ತಿನ್ನುತ್ತೇವೆ. ಕೆಲವು ವೇಳೆ ನಾಲಗೆಯ ಚಪಲಕ್ಕಾಗಿ ತಿನ್ನುತ್ತೇವೆ ಇನ್ನು ಕೆಲವು ವೇಳೆ ಅವರಿವರ ಬಲವಂತಕ್ಕಾಗಿ ತಿನ್ನುತ್ತೇವೆ. ಬಹಳ ಕೊಂಚ ವೇಳೆ ಹಸಿವಾಯಿತೆಂದು ತಿನ್ನುತ್ತೇವೆ. ಇದರಲ್ಲಿ ಹಸಿವಾದಾಗ ತಿನ್ನುವುದೇ ಸರಿ.

ಆಹಾರ ರುಚಿಯಾಗಿರಬೇಕು. ಇಲ್ಲದಿದ್ದರೆ ಯಾರೂ ತಿನ್ನುವುದೇ ಇಲ್ಲ. ಅದನ್ನು ನಾವೆಲ್ಲರೂ ಬಲ್ಲೆವು ಹಾಗೆಯೇ ನಮಗೆ ಅರಗುವ ಹಾಗೆಯೂ ಇರಬೇಕು. ನಮಗೆ ಒಗ್ಗುವುದಾಗಿಯೂ ಇರಬೇಕು ಹಾಗಿಲ್ಲದಿದ್ದರೆ, ಅಜೀರ್ಣವಾಗಿ ಬಾಯಿ ಕೆಟ್ಟಿದೆಯೆಂದು ಅವರೇಕಾಯಿ ಹುಳಿ ತಿಂದ ಹಾಗಾಗುವುದು.

ಒಂದೇ ಜಾತಿಯ ಆಹಾರವನ್ನು ತಿನ್ನುವುದು ಒಳ್ಳೆಯದಲ್ಲ ಬ್ರಾಹ್ಮಣರು ಶ್ರಾದ್ಧದ ಅಡುಗೆಗಳನ್ನು ಮಾಡುವಂತೆ ಸಾಧ್ಯವಾದಷ್ಟು ಹೆಚ್ಚು ಜಾತಿ ಅಡುಗೆಗಳಿರುವುದು ಒಳ್ಳೆಯದು. ಒಂದೇ ಜಾತಿಯ ಆಹಾರದಿಂದ ದೇಹಕ್ಕೆ ಬೇಕಾದ ಪದಾರ್ಥಗಳೆಲ್ಲ ಸಿಕ್ಕುವುದಿಲ್ಲ ಅದರಿಂದ ನಾನಾ ಜಾತಿಯ ಆಹಾರಗಳನ್ನು ತಿನ್ನಬೇಕು.

ದೇಹದಲ್ಲಿ ಬೇರೆ ಬೇರೆ ಅಂಗಗಳಿಗೆ ಬೇರೆ ಬೇರೆ ಪದಾರ್ಥಗಳು ಬೇಕು ತಲೆಯಲ್ಲಿರುವ ಮಿದುಳು ಬೆಳೆಯುವುದಕ್ಕೆ ಒಂದು ವಿಧವಾದ ಆಹಾರವು ಬೇಕು. ರಕ್ತವು ಹೆಚ್ಚುವುದಕ್ಕೆ ಮತ್ತೊಂದು ಆಹಾರವು ಬೇಕು ಮೂಳೆಯು ಗಟ್ಟಿಯಾಗುವುದಕ್ಕೆ ಮತ್ತೊಂದು ಜಾತಿಯ ಆಹಾರವು ಬೇಕು. ಹೀಗೆ ದೇಹದ ಬೇರೆ ಬೇರೆ ಅಂಗಗಳಿಗೆ ಬೇಕಾದ ಪದಾರ್ಥಗಳನ್ನು ಬೇರೆ ಬೇರೆ ಆಹಾರಗಳು ಒದಗಿಸುತ್ತವೆ ಅದರಿಂದ ವಿವಿಧ ಆಹಾರಗಳು ನಮಗೆ ಬೇಕು.

ಈಚೆಗೆ ವಿದ್ವಾಂಸರು ಪರೀಕ್ಷೆಮಾಡಿನೋಡಿ ಆಹಾರದಲ್ಲಿ ವೈಟಮಿನ್ ಎಂಬ ಸಾರ ಇದೆ. ಅದು ನಮಗೆ ಅತ್ಯಾವಶ್ಯಕವಾಗಿ ಬೇಕಾದುದು ಎಂದು ಗೊತ್ತುಮಾಡಿದ್ದಾರೆ. ಅದರಲ್ಲಿ ಎ ಬಿ. ಸಿ. ಡಿ ಇ ಎಂದು ಹಲವು ಜಾತಿಗಳನ್ನೂ ಗೊತ್ತುಮಾಡಿದ್ದಾರೆ, ಹಾಲು ಮೊಸರು, ಕಾಯಿಪಲ್ಯಗಳು, ಇವುಗಳನ್ನು ಎಲ್ಲರೂ ತಿನ್ನಬೇಕು ಪಪಾಯಿ, (ಪರಂಗೀಹಣ್ಣು), ನಿಂಬೇಹಣ್ಣು. ಮಾವಿನಹಣ್ಣು, ಮೊದಲಾದ ಹಣ್ಣುಗಳನ್ನು ತಿನ್ನಬೇಕು.

ದೇಹವು ಚೆನ್ನಾಗಿ ಬೆಳೆಯಬೇಕು ಚೆನ್ನಾಗಿ ಬೆಳೆದ ದೇಹದಲ್ಲಿ ಮನಸ್ಸೂ ಬುದ್ಧಿಯೂ ಚೆನ್ನಾಗಿ ಬೆಳೆಯುವುವು ಇಲ್ಲದೆ ದೇಹಕ್ಕೆ ಏನಾದರೂ ರೋಗ ರುಜಿನಗಳು ಬಂದಿದ್ದರೆ, ಮನಸ್ಸೂ ಬುದ್ಧಿಯೂ ಕೆಟ್ಟುಹೋಗುತ್ತದೆ. ಅದರಿಂದ ಆಹಾರದ ವಿಚಾರದಲ್ಲಿ ಸರ್ವರೂ ಮುಖ್ಯವಾಗಿ ಮಕ್ಕಳು ಬಲುಎಚ್ಚರಿಕೆಯಿಂದಿರಬೇಕು.

# ಜಗತ್ತಿನಲ್ಲಿ ಏನೇನು ನಡೆಯುತ್ತಿದೆ

ಆಫ್ರಿಕಾದಲ್ಲಿ ಅಬಿಸೀನಿಯಾ ಎಂಬ ದೇಶವೊಂದಿದೆ. ಅದು ಸ್ವತಂತ್ರರಾಜ್ಯ ಯಾರಿಗೂ ಸೇರಿಲ್ಲ. ಆ ದೇಶದ ಒಂದು ಪಕ್ಕದಲ್ಲಿ ಇಂಗ್ಲಿಷಿನವರು, ಒಂದು ಕಡೆ ಇಟಲಿಯವರು, ಇನ್ನೊಂದುಕಡೆ ಫ್ರೆಂಚರು ಬಳಸಿಕೊಂಡಿದ್ದಾರೆ. ಇಟಲಿಯವರಿಗೆ ಈ ರಾಜ್ಯವನ್ನು ತಾವು ತಮ್ಮ ಕೈಕೆಳಗೆ ಮಾಡಿಕೊಳ್ಳಬೇಕೆಂದು ಇಷ್ಟ ಅದಕ್ಕಾಗಿ ಯುದ್ಧವನ್ನು ಆರಂಭಿಸಿದ್ದಾರೆ.

ಯುದ್ಧವು ನಡೆಯುತ್ತಿದೆ ಇಟಲಿಯವರು ಬೇಕಾದಷ್ಟು ಮದ್ದುಗುಂಡು ತೆಗೆದುಕೊಂಡು ಎಷ್ಟೋ ಸಾಹಸಮಾಡುತ್ತಿದ್ದಾರೆ ಆದರೂ ಅವರಿಗೆ ತಕ್ಕಷ್ಟು ಫಲವಾಗಿಲ್ಲ ಅಬಿಸೀನಿಯಾದವರು ಬಹಳ ಬಲದಿಂದ ಕಾದುತ್ತಿದ್ದಾರೆ.

ం ం ం ం

ಇಂಡಿಯವನ್ನು ಇಂಗ್ಲಿಷರು ಆಳುತ್ತಿದ್ದಾರೆ ಇಂಗ್ಲಿಷಿನವರ ದೇಶಕ್ಕೆ ಇಂಗ್ಲೆಂಡ್ ಎಂದು ಹೆಸರು. ಅದರ ಮಗ್ಗುಲಲ್ಲಿಯೇ ಸ್ಕಾಟ್ಲೆಂಡ್ ದೇಶವೂ ವೇಲ್ಸೂ ಇವೆ ಇವೆಲ್ಲವೂ ಸೇರಿ ಒಬ್ಬ ರಾಜರ ಆಳ್ವಿಕೆಯಲ್ಲಿದೆ. ಅವರು ಅಲ್ಲಿನ ದೊರೆಯೇ ಇಂಡಿಯದ ಚಕ್ರವರ್ತಿಗಳು.

ಅವರು ರಾಜ್ಯವನ್ನು ಆಳುವುದು ಪಾರ್ಲಿಮೆಂಟ್ ಮುಖಾಂತರ. ಪಾರ್ಲಿಮೆಂಟ್ ಎಂಬುವುದು ಜನಗಳು ಚುನಾಯಿಸಿದ ಮುಖಂಡರ ಸಭೆ. ಅವರೇ ರಾಜ್ಯವನ್ನು ಆಳುವರು ಈ ಪಾರ್ಲಿಮೆಂಟು ಚುನಾವಣೆಯು ಮೂರುವರ್ಷಕ್ಕೊಮ್ಮೆ ನಡೆಯುವುದು. ಅದು ಈ ಸಲ ನಡೆಯಿತು

ం ం ం ం ం

ಜಪಾನಿನ ಪ್ರಸಿದ್ಧ ಕವಿಗಳೊಬ್ಬರು ಇಂಡಿಯಕ್ಕೆ ಬಂದಿದ್ದಾರೆ ಅವರ ಹೆಸರು ಯೋನಿನಾಗೋಚಿ ಅವರು ಇಂಡಿಯದಲ್ಲೆಲ್ಲ ಸಂಚರಿಸುತ್ತಿದ್ದಾರೆ. ಈಗ ಶಾಂತಿನಿಕೇತನದಲ್ಲಿದ್ದಾರೆ. ಶಾಂತಿನಿಕೇತನವು ಕವಿಗಳಾದ ಶ್ರೀ ರವೀಂದ್ರರದು. ಆತನು ಅಷ್ಟು ಪ್ರಸಿದ್ಧನಾಗಿದ್ದರೂ ಜಂಭವಿಲ್ಲದವನು.

ం ం ం ం

ಇಂಡಿಯದಲ್ಲಿ ಕಾಂಗ್ರೆಸ್ ಎಂಬ ಒಂದು ಸಂಘವಿದೆ ನೀನು ಅದನ್ನು ಬಲ್ಲೆ. ಅದು ಹುಟ್ಟಿ ೫೦ ವರ್ಷಗಳಾಯಿತು. ಅದಕ್ಕಾಗಿ ಹೋದ ತಿಂಗಳಿನಲ್ಲಿ ಇಂಡಿಯದಲ್ಲಿ ಕನ್ಯಾಕುಮಾರಿಯಿಂದ ಕಾಶ್ಮೀರದ ಕೊನೆಯವರೆಗೂ ಎಲ್ಲೆಲ್ಲೂ ದೊಡ್ಡ ಉತ್ಸವಗಳು ಸಂಭ್ರಮದಿಂದ ನಡೆದುವು.




ನೋಡಿದಿರಾ ಛತ್ರಿಯ ತೊಂದರೆ !



ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳು

# ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಯವರು

ಇವರು ಇಂಡಿಯದ ಪ್ರಮುಖರಲ್ಲೊಬ್ಬರು. ಈಗ ಅನ್ನಾಮಲೆ ವಿಶ್ವವಿದ್ಯಾನಿಲಯದ ವೈಸ್ ಛಾನ್ಸೆಲ್ಲರು ಆಗಿದ್ದಾರೆ. ಬೊಂಬಾಯಿನ ಪ್ರಸಿದ್ಧ ಚಿತ್ರಕಾರರಾದ ಚಾವಲಿ ನಾಗೇಶ್ವರರಾಯರು ಇವರ ತೈಲಚಿತ್ರ (ಎಣ್ಣೆಯ ಬಣ್ಣಗಳಿಂದ ಬರೆಯುವ ಚಿತ್ರಕ್ಕೆ ತೈಲಚಿತ್ರವೆಂದು ಹೆಸರು) ವನ್ನು ಬರೆದರು. ಆ ಚಿತ್ರವು ಈಗ ಅನ್ನಾಮಲೆ ವಿಶ್ವವಿದ್ಯಾನಿಲಯದಲ್ಲಿದೆ. ಅದರ ಚಿತ್ರವಿದು.

ಇವರಿಗೆ ಮೈಸೂರಿನ ಮೇಲೆ ಬಹಳ ಅಭಿಮಾನ. ಬೆಂಗಳೂರು ನಗರಕ್ಕೆ ಆಗಿಂದಾಗ ಬರುತ್ತಲೇ ಇರುತ್ತಾರೆ. ಇವರಿಗೆ ಈ ವೂರಿನಲ್ಲಿ ಅನೇಕಾನೇಕ ಪ್ರಿಯ ಸ್ನೇಹಿತರಿದ್ದಾರೆ. ನಮ್ಮ ಮಕ್ಕಳ ಪುಸ್ತಕದಲ್ಲಿ ಆಗಾಗ ಬರೆಯುವ ಶ್ರೀಯುತ ಎಸ್ ಜಿ. ಶಾಸ್ತ್ರಿಗಳಿರುವರಲ್ಲ. ಅವರೂ ಅಂತಹ ಪ್ರಿಯಸ್ನೇಹಿತರಲ್ಲಿ ಒಬ್ಬರು. ಶ್ರೀ ಶ್ರೀನಿವಾಸ ಶಾಸ್ತ್ರಿಗಳು ಬಂದಾಗಲೆಲ್ಲ ಅವರ ಮನೆಯಲ್ಲಿಯೇ ಇಳಿಯುತ್ತಾರೆ.

ಇವರು ಕಳೆದ ತಿಂಗಳಿನಲ್ಲಿ ಮದರಾಸು ನಗರದಲ್ಲಿ ಮಾತನಾಡುತ್ತ ನಮ್ಮ ಶ್ರೀಮನ್ಮಹಾರಾಜರವರ ವಿಚಾರವಾಗಿ ಹೀಗೆ ಹೇಳಿದರು: ಮೈಸೂರಿನ ಮಹಾರಾಜರಂತಹ ದೊರೆಗಳು ಇನ್ನೊಬ್ಬರಿಲ್ಲ. ಅವರನ್ನು ಬಲ್ಲವರು ಪ್ರತಿಯೊಬ್ಬರೂ ಅವರನ್ನು ಗೌರವಿಸುವರು. ಅವರ ಪ್ರಜಾವಾತ್ಸಲ್ಯವು ಅಮೋಘವಾದುದು: ದೇಶದ ಯೋಗಕ್ಷೇಮಕ್ಕಾಗಿ ಅವರು ಹಗಲೂ ಇರುಳೂ ದುಡಿಯುತ್ತಾರೆ

ಮೈಸೂರು ಮಾದರಿಯ ರಾಜ್ಯ. ಮೈಸೂರು ಅಖಿಲಜಗತ್ತಿನಲ್ಲೆಲ್ಲ ಕೀರ್ತಿಯನ್ನು ಪಡೆದಿರುವ ರಾಜ್ಯ! ಅಲ್ಲಿನ ಮಹಾರಾಜರೂ ದಿವಾನರೂ ದಿಗಂತ ಕೀರ್ತಿವಂತರು.

— ಮಕ್ಕಳ ಪುಟ —

## ಪಕ್ಷಿಗಳ ರಾಜನು

ಒಂದಾನೊಂದು ಸಮಯದಲ್ಲಿ ಪಕ್ಷಿಗಳೆಲ್ಲಾ ಒಬ್ಬ ಅರಸನನ್ನು ಆರಿಸಿಕೊಳ್ಳುವುದಕ್ಕೆ ಸಭೆಸೇರಿದವು. ಆ ಸಭೆಯಲ್ಲಿ ನವಿಲು ಮುಂದೆ ಒಂದು ಸ್ವರ್ಣವರ್ಣದ ತನ್ನ ಗರಿಗಳನ್ನು ಹರಡಿ ತೋರಿಸಿತು, ಸಕಲಪಕ್ಷಿಗಳೂ ಅದರ ಶೋಭಾರಾಶಿಯನ್ನು ಕಂಡು ಅದನ್ನೇ ಅರಸನನ್ನಾಗಿ ಇಟ್ಟುಕೊಳ್ಳುವುದಕ್ಕೆ ಸಮ್ಮತಿಸಿದವು ಮೂರುದಿವಸದ ಮೇಲೆ ನವಿಲಿಗೆ ಪಟ್ಟಕಟ್ಟಬೇಕೆಂದು ನಿರ್ಣಯವಾಯಿತು ಕೊನೆಗೆ ಸಭೆ ಅಗಲುವುದಕ್ಕಿರಲು ಒಂದು ಕಾಗೆಯು ಮುಂದೆ ಬಂದು ನಿಂತು ಹೀಗೆ ಬೇಡಿಕೊಂಡಿತು. "ಮಹಾರಾಯಾ ನಾನು ನಿನ್ನದಾಸನು ನನಗೊಂದು ಶಂಕೆ ಬಂದಿದೆ. ಅಪ್ಪಣೆಯಾದರೆ ಅರಿಕೆಮಾಡಿಕೊಳ್ಳುತ್ತೇನೆ." ನೀಲಕಂಠನು, "ಅಪ್ಪಾ ನಿರ್ಭಯದಿಂದ ಮಾತನಾಡು" ಎಂದು ಅಪ್ಪಣೆಕೊಟ್ಟಿತು ಆಗ ಕಾಗೆಯು, "ಎಲೈ ರಾಜನೆ! ನಾವು ನಿನ್ನನ್ನು ಅರಸನನ್ನಾಗಿ ನೇಮಿಸಿದ್ದೇವೆ ನಮ್ಮ ಪ್ರಾಣಗಳು ನಿನ್ನ ಸ್ವಾಧೀನವಾಗಿವೆ. ಸರ್ವರನ್ನೂ ರಕ್ಷಿಸುವ ಭಾರವು ನಿನ್ನದು. ನಮ್ಮಂಥಾ ಬಡವರಿಗೆ ಹದ್ದು ಗೂಬೆ ಇವುಗಳಿಂದ ವಿಪತ್ತು ಪ್ರಾಪ್ತವಾಗುತ್ತದೆ, ನೀನು ಯಾವ ರೀತಿಯಲ್ಲಿ ಈ ಬಾಧೆಯನ್ನು ತಪ್ಪಿಸಿ, ನಮ್ಮನ್ನು, ಸಂರಕ್ಷಣೆ ಮಾಡುವೆ? ಈ ಸಂಶಯುವನ್ನು ತಪ್ಪಿಸಿ ನಮ್ಮ ಭಯನಿವಾರಣೆ ಮಾಡಬೇಕು" ಎಂದು ದೈನ್ಯದಿಂದ ಬೇಡಿಕೊಂಡಿತು. ಈ ಪ್ರಶ್ನೆಯನ್ನು ಕೇಳಿದ ತಕ್ಷಣವೇ 'ನಿಜ' ಮಯೂರನ ಸೌಂದರ್ಯವು ನಮ್ಮ ಸಂರಕ್ಷಣೆಮಾಡಲಾರದು. ಇವನು ರಾಜನಾಗಿರುವುದಕ್ಕೆ ಯೋಗ್ಯನಲ್ಲ' ಎಂದು ಪಕ್ಷಿಗಳು ನಿಶ್ಚಯಿಸಿದವು

ಎಂ. ಸಿ. ಶ್ರೀನಿವಾಸನ್

## ವಿವೇಕಿಯಾದ ನಾಯಿ

ಒಂದು ದಿನ ಒಂದು ನಾಯಿಯ ಮೇಲೆ ಗಾಡಿಯು ಹರಿದು ಹೋಯಿತು. ಒಬ್ಬ ವೈದ್ಯನು ಅದನ್ನು ಮನೆಗೆ ತೆಗೆದುಕೊಂಡುಹೋಗಿ, ಅದರ ಗಾಯಗಳಿಗೆ ಮದ್ದು ಹಾಕಿ ಬಟ್ಟೆಯನ್ನು ಕಟ್ಟಿದನು ಮಾರನೆ ದಿನ ಅದು ತಾನಾಗಿಯೇ ವೈದ್ಯನ ಬಳಿಗೆ ಬಂತು. ಅವನು ಅದರ ಗಾಯಗಳಿಗೆ ಪುನಃ ಮುಲಾಮನ್ನು ಹಚ್ಚಿದನು. ಪ್ರತಿದಿನವೂ ನಾಯಿಯು ಅವನ ಬಳಿಗೆ ಹೋಗುತ್ತಿತ್ತು ಅದಕ್ಕೆ ಚನ್ನಾಗಿ ಗುಣವಾದ ಮೇಲೆ ಅದು ಬಂದುಹೋಗುವ ಪದ್ಧತಿಯಾಯಿತು ಒಂದು ದಿನ ಅದು ಬಹಳವಾಗಿ ಕಡಿಸಿಕೊಂಡು ಗಾಯಮಾಡಿಕೊಂಡಿದ್ದ ಮತ್ತೊಂದು ನಾಯನ್ನು ಕರೆದುಕೊಂಡು ಬಂದಿತು. ಬಾಗಿಲು ತೆರೆದಾಗ ಅದು ಆ ನಾಯಿಯನ್ನು ವೈದ್ಯನ ಔಷಧ ಶಾಲೆಯೊಳಕ್ಕೆ ಕಿವಿಯನ್ನು ಕಚ್ಚಿಕೊಂಡು ಎಳೆದುಕೊಂಡು ಹೋಯಿತು.

ಎಂ. ಸಿ. ಸಂಪತ್



ಮಹಮ್ಮದೀಯ ತರುಣಿ

ಚಿತ್ರಕಾರರು :— ಯಸ್. ವಿ. ಯಸ್. ರಾಮರಾವು

"ಭಾರತಿ"ಯ ವಿಶ್ವಾಸದಿಂದ

Printed at the Makkala Pustaka Press, Bangalore City




ವಿದ್ಯಾಪರಾ ದೇವತಾ

ಕಟ್ಟು ೯ | ಯುವ ಸಂ|| – ಮಾಘ—ಫೆಬ್ರುವರಿ ೧೯೩೬ | ಪುಸ್ತಕ ೯

# ಕೆಲವು ಹಳ್ಳಿಯ ಹಾಡುಗಳು

ಸಂಗ್ರಾಹಕ-"ಪದ್ಮನಾಭ"

(ಕ ಂ ಠೀ ರ ವ)

ಮಕ್ಕಳ ಪಾಶಕ್ಕೆ ಹಕ್ಕಿ ಕಟ್ಟಿತು ಗೂಡ
ಸಿಕ್ಕಿತು ಶಿವನ ಬಲೆಯಲ್ಲಿ ಬಲೆಗಾರ
ಮಕ್ಕಳ ತಾಯ ಕೊಲಬೇಡ

ಮುದ್ದು ನೀನಳದೀರು ; ಎದ್ದಾಗ ಹಾಲುಣ್ಣು ;
ನಿದ್ದೆ ಬಂದಾಗ ಪವಡಿಸು-ಬಾಲ ನೀನು
ಬುದ್ಧಿ ಬಂದಾಗ ಹರದಾಡು

ಹಾಲುಂಬ ಬಟ್ಟಲು ಆರು ಕೊಟ್ಟರೊ ಬಾಲಂಗೆ
ದೇವೇಂದ್ರ ಕೊಟ್ಟ, ಶಚಿ ಕೊಟ್ಟ ಬಟ್ಟಲ
ಆರು ಕೇಳಿದರೂ ಕೊಡೆನೆಂಬ

ಬಾಡದಿರು ಬಳ್ಳಿ ನೀನು ಬಣ್ಣ ಕೆಡದಿರು
ಗೋಡೆಯ ಮೇಲೆ ಹೋಗಿ ಕೂಡಿಬಿಡು
ಬಳ್ಳಿ ನೀನು ನಾಡುಗಾರರಿಗೆ ನೆರವಾಗು

———

# ಅಬ್ಸೀನಿಯಾ ದಳಪತಿಗಳು



ಜನರಲ್ ನಸೀಬು (ದಕ್ಷಿಣದ ರಣರಂಗದಲ್ಲಿರುವ ದಳವಾಯಿ)



ಜನರಲ್ ರಾಸ'ಸೆಯೂಮ'—(ಉತ್ತರದ ರಣರಂಗದಲ್ಲಿರುದ ದಳವಾಯಿ)

# ಯುದ್ಧ

ಇಟಲಿ ಅಬಿಸೀನಿಯಗಳಿಗೆ ಯುದ್ಧವು ಆಗುತ್ತಿರುವುದು ನಿನಗೆ ಗೊತ್ತು. ಈಸಲ ಎರಡೂ ಕಡೆಯಲ್ಲಿ ಯುದ್ಧ ಮಾಡುತ್ತಿರುವ ದಳವಾಯಿಗಳ ಚಿತ್ರಗಳನ್ನು ಕೊಟ್ಟಿದೆ

ಅಬಿಸೀನಿಯವು ಆಫ್ರಿಕದಲ್ಲಿರುವ ಒಂದು ದೇಶ. ಅದರ ಸುತ್ತಲೂ ಇಟಲಿ, ಫ್ರಾನ್ಸ್, ಬ್ರಿಟನ್, ದೇಶಗಳ ಸೀಮೆಗಳು ಇವೆ. ಇದುವರೆಗೆ ಆಫ್ರಿಕದಲ್ಲಿ ಇನ್ನೂ ಸ್ವತಂತ್ರವಾಗಿರುವ ರಾಜ್ಯವೆಂದರೆ ಇದೊಂದೇ. ಮಿಕ್ಕರಾಜ್ಯಗಳೆಲ್ಲ ಯೂರೋಪಿಯನ್ನರ ಪಾಲಾಗಿವೆ ಅಥವಾ ಯೂರೋಪಿಯನ್ನರ ರಕ್ಷಣೆಗೆ ಒಳಗಾಗಿವೆ. ಅಬಿಸೀನಿಯವು ಮಾತ್ರ ಹಾಗಿಲ್ಲ. ಅಲ್ಲಿ ಒಬ್ಬ ಚಕ್ರವರ್ತಿಯಿದ್ದಾನೆ. ಆತನಿಗೆ ರಾಸ ಟಫಾರಿಯೆಂದು ಹೆಸರು ಆತನು ಇದುವರೆಗೂ ಯಾರಿಗೂ ತಲೆಬಗ್ಗಿಸಿಲ್ಲ

ಇಟಲಿಯಲ್ಲಿ ಈಗ ಕೆಲವು ವರ್ಷಗಳಿಂದ ಹೊಸ ಹುರುಪು ಹುಟ್ಟಿದೆ. ಅದರ ಫಲವಾಗಿ ಇಟಲಿಯು ಇನ್ನೂ ಅಷ್ಟು ದೇಶವನ್ನು ಆಕ್ರಮಿಸಬೇಕು ಎಂದುಕೊಂಡಿತು. ಅದಕ್ಕಾಗಿ ಏನೇನೋ ನೆಪಗಳನ್ನು ಹೇಳಿ ಯುದ್ಧಕ್ಕೆ ಕಾಲುಕರೆಯಿತು. ಯಾರು ಯಾರು ಏನೇನು ಹೇಳಿದರೂ ಕೇಳದೆ ಯುದ್ಧಕ್ಕೆ ಆರಂಭಿಸಿತು.



ಮಾರ್ಷಲ್ ಬಡೊಗ್ಲಿಯೋ
ಇಟಲಿಯ ಮುಖ್ಯದಳವಾಯಿ

ಯುದ್ಧವು ಆರಂಭವಾಗಿ ಈಗ ಮೂರು ತಿಂಗಳಾಯಿತು. ಇಟಲಿಗೆ ಯುದ್ಧಕ್ಕೆ ಬೇಕಾದ ವಿಮಾನ, ಮೆಷೀನ್‌ಗನ್, ಮೊದಲಾದ ಸಾಮಾನುಗಳು ಬೇಕಾದಹಾಗೆ ಇದ್ದುವು ಅದರಿಂದ ಇಟಲಿಯು ಬಲುಬೇಗ ಅಬಿಸೀನಿಯವನ್ನು ಗೆದ್ದು ಬಿಡಬಹುದೆಂದು ಎಲ್ಲರೂ ಎಂದುಕೊಂಡಿದ್ದರು. ಆದರೆ ಅದು ಹಾಗಾಗಲಿಲ್ಲ. ಇಟಲಿಯು ಗೆದ್ದ ಭೂಮಿಯನ್ನೆಲ್ಲ ಅಬಿಸೀನಿಯವು ಗೆದ್ದುಕೊಳ್ಳುತ್ತಿರುವುದಲ್ಲದೆ, ಈಗ ಅವರಿಗೆ ನೀರಿಗೆ ನೀರು ಕುಡಿಸುತ್ತಿದೆ.

ಯುದ್ಧದಿಂದ ಅನೇಕರಿಗೆ ನಷ್ಟವಾಗುತ್ತದೆ. ಅನೇಕರು ಸತ್ತುಹೋಗುತ್ತಾರೆ. ಅದರಿಂದ ಯುದ್ಧಮಾಡುವುದು ಒಳ್ಳೆಯದಲ್ಲ. ಆದುದರಿಂದ ಎಲ್ಲರೂ ಈ ಯುದ್ಧವು ನಿಲ್ಲಲಿ ಎಂದು ದೇವರಿಗೆ ಹರಕೆ ಹೊರಬೇಕು.




ಮಗೂ,

ಕಳೆದ ತಿಂಗಳು ನೀನು ಕ್ರಿಸ್‌ಮಸ್ ರಜವನ್ನು ಆನಂದವಾಗಿ ಕಳೆದಿರಬೇಕು ಅಲ್ಲವೆ? ಈ ಸಲ ರೈಲ್ವೆ ಕಂಪೆನಿಯವರು-ನಮ್ಮ-ದೇಶದಲ್ಲಿ ಎರಡಿವೆ ಒಂದು ನಮ್ಮ ದೇಶದ್ದು, ಇನ್ನೊಂದು ಎಂ. ಎಸ್. ಎಂ. ಕಂಪೆನಿಯದು.-ಒಂದು ಜಾತಿಯ ಟಿಕೇಟ್ ಗಳನ್ನು ಮಾಡಿದ್ದರು. ಅದನ್ನು ಕೊಂಡುಕೊಂಡವರು ಎಲ್ಲಿಂದೆಲ್ಲಿಗೆ ಯಾವಾಗ ಬೇಕಾದರೂ ಎಷ್ಟು ಸಲ ಬೇಕಾದರೂ ಹೋಗಿ ಬರಬಹುದಾಗಿತ್ತು. ನೀನೂ ಅಂತಹ ಟಿಕೇಟು ತೆಗೆದುಕೊಂಡು ಬೇಕು ಬೇಕಾದ ಕಡೆಯೆಲ್ಲ ಹೋಗಿ ಬಂದಿರಬೇಕು. ಅಲ್ಲವೆ?

ಕಳೆದ ತಿಂಗಳು ಕೊನೆಯಲ್ಲಿ ಮೈಸೂರಿನಲ್ಲಿ ಒಂದು ದೊಡ್ಡ ಸಮ್ಮೇಳನವು ನಡೆಯಿತು ಆಲ್ ಇಂಡಿಯ ಓರಿಯಂಟಲಿಸ್ಟ್ಸ್ ಕಾನ್ಫರೆನ್ಸ್ ಎಂದು ಅದರ ಹೆಸರು ಇಂಡಿಯವು ಬಹಳ ಪುರಾತನವಾದ ದೇಶ ಎಂಬುದನ್ನು ಬಲ್ಲೆಯಷ್ಟೆ? ಆ ಹಿಂದಿನ ಕಾಲದ ವಿಷಯಗಳನ್ನೂ ಇಂಡಿಯಕ್ಕೆ ಸಂಬಂಧಪಟ್ಟಿರುವ ಚರಿತ್ರೆ, ಸಾಹಿತ್ಯ, ಮೊದಲಾದ ವಿಷಯಗಳನ್ನೂ ಓದಿ ಪಂಡಿತರಾದವರೆಲ್ಲರೂ ಇಲ್ಲಿಗೆ ಬಂದು ಸೇರಿದ್ದರು ಶ್ರೀ ಯುವರಾಜರು ಆ ಸಮ್ಮೇಳನವನ್ನು ಆರಂಭಮಾಡಿದರು. ಶ್ರೀಮನ್ಮಹಾರಾಜರು ಆ ಸಮ್ಮೇಳನಕ್ಕೆ ಬಂದಿದ್ದವರಿಗೆಲ್ಲ ಒಂದು ಔತಣವನ್ನು "ಬೃಂದಾವನ" ಉದ್ಯಾನವನದಲ್ಲಿ ನಡೆಸಿದರು.

ಈ ಸಲದ ಕಾನ್ಫರೆನ್ಸಿನಲ್ಲಿ ಕವಿಗಳದೂ ಒಂದು ಕಾನ್ಫರೆನ್ಸ್ ಆಯಿತು ಅದರಲ್ಲಿ ನಮ್ಮ ನಾಡಿನ ಕವಿಗಳಾದ ಶ್ರೀ ಪುಟ್ಟಪ್ಪನವರಿಗೆ ಒಂದು ಚಿನ್ನದ ಮೆಡಲ್ ಬಂದಿತು. ಇದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯ ಅಲ್ಲವೆ? ನೀನೂ ಅವರಂತಾಗು. ನಿನ್ನಿಂದಲೂ ನಮ್ಮ ನಾಡಿನ ಕೀರ್ತಿ ಬೆಳೆಯಲಿ.

ಇತಿ, ಅಣ್ಣ

# ಇದು ಯೇನು ?




ಬೆಂಗಳೂರಿನ ಹತ್ತಿರುವ ಪ್ರಸಿದ್ಧ ಯಾತ್ರಾಸ್ಥಳ.




ಅಂಜೂರಕ್ಕೆ ಪ್ರಸಿದ್ಧವಾದ ವೂರು. ಪೂನಾಬಳಿಯಿದೆ.





ಮೈಸೂರು ದೇಶದ ದಕ್ಷಿಣದಲ್ಲಿರುವ ಬೆಟ್ಟ





ವೀರಶೈವ ಗುರುಗಳಿರುವ ಸ್ಥಳ

## ಉತ್ತರಗಳು

| | | | | |
|---|---|---|---|---|
| ಅ ೧ | ✿ | ರಿ ೨ | ✿ | ತಾ ೩ |
| ✿ | ವ ೪ | ✿ | ವ ೫ | ✿ |
| ಅ ೬ | ✿ | ರಿ ೭ | ✿ | ಕು ೮ |
| ✿ | ಲ ೯ | ✿ | ಕ್ಕ ೧೦ | ▣ |
| ಹ ೧೧ | ▣ | ಗು ೧೨ | ▣ | ಹ ೧೩ |

ಹೋದಸಲ ೪-೫-೨ ಕುಮಾರಿಯ ತದ್ಭವ ಎಂದು ಇದ್ದುದು ೮-೫-೨ ಎಂದಿರ ಬೇಕು. ಅದರಿಂದ ಈಸಲ ಒಂದು ತಪ್ಪಿದ್ದರೂ ಒಪ್ಪಿಕೊಳ್ಳಲಾಗಿದೆ.

## ಬುದ್ಧಿಯ ಪರೀಕ್ಷೆಯ ಉತ್ತರ

೧. ೭ ಸೇರಿನ ೩ಸೇರಿನ ಪಾತ್ರೆಗಳಿವೆ, ಮೊದಲು ೭ ಸೇರಿನ ಪಾತ್ರೆಗೆ ತುಂಬಿ ಅದರಲ್ಲಿ ೩ ಸೇರಿನ ಪಾತ್ರೆಯಿಂದ ಎರಡುಸಲ ತೆಗೆದರೆ ೧ ಸೇರು ಉಳಿಯುತ್ತದೆ. ಅದನ್ನು ಒಂದೆಡೆ ಇಟ್ಟುಕೋ, ಇನ್ನೊಂದುಸಲ ೭ ಸೇರಿನ ಪಾತ್ರೆ ತುಂಬಿ ಅದರಿಂದ ೩ ಸೇರಿನ ಪಾತ್ರೆಗೆ ಹೊಯ್ದು ಉಳಿದ ೪ ಸೇರನ್ನು ಮೊದಲಿನ ೧ ಸೇರಿನ ಜೊತೆಗೆ ಸೇರಿಸು

೨. (ಮಂತ್ರಿ ಅಪ್ಪಾಜಿಯು ಮಾಡಿದಂತೆ) ನಿನ್ನ ಕುದುರೆಯನ್ನು ಲೆಕ್ಕಕ್ಕೆ ಸೇರಿಸಿ ಹಂಚು. ನಿನ್ನ ಕುದುರೆಯು ನಿನಗೇ ಉಳಿಯುವುದು. ಲೆಕ್ಕವೂ ಸರಿಹೋಗುವುದು.

''ಇದು ಯೇನು''ಗೆ ಉತ್ತರ-ಘಂಟಾಕರ್ಣ, ಮಂಗರಸ, ಹುಲಿಕೆರೆ, ನಂದಿಬೆಟ್ಟ

ಒಗಟೆಗೆ ಉತ್ತರ—ತಾವರೆ, (ವನ-ನೀರು) ಮುಳ್ಳು, ತುಲಸೀಗಿಡ, ಹತ್ತಿ, ಪಾದರಿ ಹುವ್ವು, ೨. ಮೆಣಸು, ೩ ಕಣ್ಣು, ೪ ಕನ್ನಡಿ.

# ಈ ಸ್ಪರ್ಧೆಯ ನಿಯಮಗಳು

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದು. ೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದು ೩. ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು ೪. ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯ ಬಹುಮಾನ ಪುಸ್ತಕದ ಬಹುಮಾನ ೨೦ ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದು ೬ ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು ೭ ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ. (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ, ಅದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ನಿಲ್ಲಬಾರದಾಗಿ ಪ್ರಾರ್ಥನೆ

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | | ೨ | | ೩ |
| | ೪ | | ೫ | |
| ೬ | | ೭ | | ೮ |
| | ೯ | | ೧೦ | |
| ೧೧ | | ೧೨ | | ೧೩ |

ರಿಜಿಸ್ಟರು ನಂಬರು ....

............. ...

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ:—

೧, ೩, ಸಣ್ಣ ಮರಿ ೧, ೫, ೨, ದೊಡ್ಡದು ೬, ೧೧, ನಾಲ್ಕು ಶತಮಾನಗಳ ಹಿಂದಿನ ಕರ್ನಾಟಕದ ರಾಜಧಾನಿ ೯, ೭, ೫, ಹಿಮಾಲಯದ ಕ್ಷೇತ್ರಗಳಲ್ಲಿ ಒಂದು ೬, ೯, ೧೨, ಒಂದೇ ಸಮನಾಗಿ ನೆನೆಯುತ್ತಿರುವುದು ೯, ೭, ೧೦, ಮೈಸೂರು ನಗರದ ರುಚಿಯಾದ ತರಕಾರಿ ೧೦, ೧೨, ಭೂಮಿ, ೧೩, ೧೨, ಕೋಳಿ, ೮, ೩, ಯುದ್ಧದಲ್ಲಿ ಶತ್ರುಗಳು ಹೊಡೆದುಕೊಂಡು ಹೋಗುವುದು. ೮, ೫, ೨, ಜಪಾನಿಗೆ ಸೇರಿರುವ ದೇಶ

# ಚಿತ್ರಪರಿಚಯ

ಈಸಲ ಬಂದಿರುವ ಚಿತ್ರವು ಒಬ್ಬ ಮಹಮ್ಮದೀಯ ಕನ್ನೆಯದು. ಕನ್ನೆಯೆಂದರೆ ಮದುವೆಯಾಗದವಳು.

ಮಹಮ್ಮದೀಯರು ಮಹಮ್ಮದ್ ಎಂಬ ಗುರುವನ್ನು ನಂಬಿರುವವರು. ಆತನು ೧೨೦೦ ವರ್ಷಗಳ ಕೆಳಗೆ ಅರೇಬಿಯದಲ್ಲಿ ಹುಟ್ಟಿದನು ಆತನು ಸ್ಥಾಪಿಸಿದ ಮತಕ್ಕೆ ಮಹಮ್ಮದೀಯ ಮತವೆಂದು ಹೆಸರು

ಮಹಮ್ಮದೀಯರು ಈಗ ಪ್ರಪಂಚದಲ್ಲಿ ಬೇಕಾದ ಹಾಗೆ ಇದ್ದಾರೆ. ಯೂರೋಪಿನಲ್ಲಿರುವ ಡ್ಯಾನ್ಯೂಬ್ ನದಿಯಿಂದ ಹಿಡಿದು ತುರ್ಕಿಸ್ಥಾನ ಮಧ್ಯ ಏಷ್ಯಾ, ಪಾಮಿರ್, ಬಳಸಿಕೊಂಡು ಹಿಮಾಲಯಾ ಮಗ್ಗುಲಲ್ಲಿ ಹೊರಟು ಪೆಸಿಫಿಕ್ ಸಾಗರದವರೆಗೂ ಬರುವಂತೆ ಒಂದು ಗೆರೆಯನ್ನೆಳೆ ಆ ಗೆರೆಗೆ ದಕ್ಷಿಣದಲ್ಲಿರುವ ದೇಶಗಳಲ್ಲೆಲ್ಲ ಮಹಮ್ಮದೀಯರು ಇದ್ದಾರೆ. ಇಂಡಿಯ ಒಂದರಲ್ಲೆ ಮಹಮ್ಮದೀಯರು ಸುಮಾರು ೭ ಕೋಟಿ ಇದ್ದಾರೆ.

ಇವರು ಉಡುಗೆ ತೊಡುಗೆಗಳಲ್ಲಿ ಹಿಂದೂಗಳಿಗಿಂತ ತೀರ ಭಿನ್ನವಾಗಿದ್ದಾರೆ. ಹಿಂದೂಗಳು ಪಂಚೆ ಉಡುತ್ತಾರೆ ಇವರು ಷರಾಯಿ ತೊಡುತ್ತಾರೆ ಇವರಲ್ಲಿ ಬಡವರು ತೀರಕೊಳಕರು ಶ್ರೀಮಂತರು ಶುಚಿರುಚಿಗಳಲ್ಲಿ ಬಹಳ ಉತ್ತಮರು ಅವರಿಗಿಂತ ಅಂದವಾಗಿಯೂ ಚೆಂದವಾಗಿಯೂ ಉಟ್ಟುತೊಡುವವರೇ ಇಲ್ಲವೆನ್ನಬಹುದು

ಇವರಲ್ಲಿ ಬೆಳ್ಳಗೆ ಬಹುಸುಂದರರಾಗಿರುವವರೂ ಇದ್ದಾರೆ. ಕುರುಪಿಗಳಾಗಿ ಇರುವವರೂ ಇದ್ದಾರೆ ಇವರೂ ಕ್ರಿಸ್ತರಂತೆ ಬೇರೆ ಬೇರೆ ಮತಗಳಿಂದ ಜನರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುತ್ತಾರೆ.

ಈಗ ಕೊಟ್ಟಿರುವ ಚಿತ್ರವು ಈ ಜಾತಿಯವರ ಹೆಣ್ಣಿನದು ಈ ಜಾತಿಯ ಹೆಂಗುಸರು ಬುರುಕಿ ಹಾಕಿಕೊಳ್ಳುತ್ತಾರೆ ಇವರಲ್ಲಿ ಘೋಷಾ ಸಂಪ್ರದಾಯವುಂಟು. ಇವರಲ್ಲಿ ತಂದೆ, ಅಣ್ಣತಮ್ಮಂದಿರು, ಗಂಡ, ಇವರನ್ನು ಬಿಟ್ಟು, ಇನ್ನಾರನ್ನೂ ಹೆಂಗುಸರು ನೋಡುವುದಿಲ್ಲ

ಚಿತ್ರದಲ್ಲಿ ನೋಡು: ಹುಡುಗಿಯ ತಲೆಯ ಮೇಲೆ ಒಂದು ಮುಸುಕಿದೆ ಅದನ್ನು ಬೇಕೆಂದಾಗ ಮುಖದ ಮೇಲಕ್ಕೆ ಎಳೆದುಕೊಳ್ಳಬಹುದು ಮೂಗಿನಲ್ಲಿರುವ ಮುಖರವು ಸಾಮಾನ್ಯವಾಗಿ ಮಹಮ್ಮದೀಯರ ಹೆಂಗುಸರು ಮಾತ್ರ ಹಾಕಿಕೊಳ್ಳುವ ಒಡವೆ. ಉತ್ತರ ದೇಶದವರು ಈ ಮುಖರವನ್ನು ಉಪಯೋಗಿಸುತ್ತಾರೆ ನಮ್ಮಲ್ಲಿ ಅಪರೂಪ.

ಈಸಲ "ಆಫ್ರಿಕಾಖಂಡ" ಎಂಬ ಲೇಖನದಲ್ಲಿ ಆ ದೇಶದ ಮಹಮ್ಮದೀಯರ ನಡೆವಳಿಗಳನ್ನು ಕುರಿತು ಬರೆದಿದೆ ಅಲ್ಲಿರುವ ಚಿತ್ರಗಳ ಉಡುಗೆಗಳನ್ನೂ ಒಡವೆಗಳನ್ನೂ ಇದರೊಡನೆ ಹೋಲಿಸು

# ಆಫ್ರಿಕಾಖಂಡ

ಆಫ್ರಿಕಾ ವಿಚಾರವಾಗಿ ಬಹಳ ತಿಳಿಯದು. ಸಮುದ್ರತೀರ ಪ್ರಾಂತಗಳ ವಿಚಾರವಾಗಿ ಬೇಕಾದಷ್ಟು ತಿಳಿದಿದ್ದರೂ ಒಳಗಿನ ಭಾಗಗಳ ವಿಚಾರವಾಗಿ ಹೆಚ್ಚಾಗಿಗೊತ್ತಿಲ್ಲ.

ಆಫ್ರಿಕಾ ಮತ್ತು ಏಸಿಯಾ ಖಂಡಗಳನ್ನು ಸೇರಿಸುವ ಭೂಸಂಧಿಯೊಂದು ಇತ್ತು ಅದನ್ನು ಕತ್ತರಿಸಿ ಈಗ ಸೂಯಸ್' ಕಾಲುವೆ ಮಾಡಿದ್ದಾರೆ. ಅದರಿಂದ ಈಗ ಈ ಖಂಡವು ಒಂದು ದ್ವೀಪವಾಗಿದೆ.

ಉತ್ತರದಲ್ಲಿ ಮೆಡಿಟರೇನಿಯನ್ ಸಮುದ್ರ, ಪೂರ್ವಕ್ಕೆ ಕೆಂಪು ಸಮುದ್ರ, ಅರಬ್ಬೀ ಸಮುದ್ರ ಹಿಂದೂಸಾಗರ ಪಶ್ಚಿಮಕ್ಕೆ ಅಟ್ಲಾಂಟಿಕ್' ಸಾಗರ ಈ ನಡುವೆ ಈ ಆಫ್ರಿಕಾ ಖಂಡವಿರುವುದು.

ಉತ್ತರದಲ್ಲಿ ಆಲ್ಜೀರಿಯಾ ಮೊರಾಕೋ ದೇಶಗಳಿವೆ, ಅಲ್ಲಿನ ಜನಗಳ ವಿಚಾರವಾಗಿ ಎರಡು ಮಾತು ಓದೋಣ



ಈ ದೇಶದಲ್ಲಿ ಇರುವವರಲ್ಲಿ ಬಹಳ ಜನ "ಬರ್ಬರ" ಎಂಬ ಜಾತಿಗೆ ಸೇರಿದವರು ಕೆಲವರು ಅರಬ್ಬರು, ಇನ್ನೂಕೆಲವರು ಯೆಹೂದಿಗಳು, ಮತ್ತೆ ಕೆಲವರು ನಿಗ್ರೋಗಳು ಇದ್ದಾರೆ

ಈ ಬರ್ಬರರು ನೋಡುವುದಕ್ಕೆ ಬೈಳಗಿರುವರು. ಮಹಮ್ಮದೀಯ ಜಾತಿಗೆ ಸೇರಿದವರು. ಅರಬ್ಬೀಭಾಷೆಯನ್ನೇ ಮಾತನಾಡುವರು ಅದರಿಂದ ಅನೇಕರು ಇವರನ್ನು ಅರಬ್ಬರೆಂದೇ ಭ್ರಮಿಸುವರು. ಆಕಾರದಲ್ಲಿಯೂ ಭಾಷೆಯಲ್ಲಿಯೂ ಒಂದೇ ರೀತಿಯಾಗಿ ಕಂಡರೂ ಅರಬ್ಬರೂ ಇವರೂ ಬೇರೆ ಬೇರೆ

೧. ದಕ್ಷಿಣ ಅಲ್ಜೀರಿಯಾ ಹೆಂಗುಸು.

ಜಾತಿಯವರು ಅರಬ್ಬರು ಉದ್ದವಾದ ಮುಖವುಳ್ಳವರು ಅವರು ಅಷ್ಟ ಬೆಳ್ಳಗಿಲ್ಲ ಮೂಗು ಸಣ್ಣಗೆ ಉದ್ದವಾಗಿರುವುದು ಬಾಯಿ ಚಿಕ್ಕದು. ದವಡೆಗಳು ಅಷ್ಟು ದೊಡ್ಡವಲ್ಲ. ಕಣ್ಣಾಲಿಗಳು ಕಪ್ಪು, ಕೂದಲು ಕಪ್ಪು. ಅವರು ಹಿಡಿದಕಾರ್ಯವನ್ನು ಸಾಧಿಸಲೇಬೇಕೆಂಬ ಹಟವಿಲ್ಲದವರು ಅಷ್ಟು ಉತ್ಸಾಹಿ

ಗಳೂ ಅಲ್ಲ. ಅವರಿಗೆ ಕಣ್ಮುಚ್ಚಿ ಕುಳಿತಿರುವುದರಲ್ಲಿ ಹೆಚ್ಚು ಆಸಕ್ತಿ. ಅವರು ಸೂಕ್ಷ್ಮ ಬುದ್ಧಿಗಳು ಆದರೂ ಜಗಳಗಂಟರು.

ಬರ್ಬರರು ಗುಂಡುಮುಖದವರು ಬೆಳ್ಳಗಿರುವರು ಮೂಗುಕೊಂಚ ದೊಡ್ಡದು ಕೂದಲು ಅಷ್ಟು ಕಪ್ಪಗಿರುವುದಿಲ್ಲ. ಇವರು ಹಿಡಿದ ಕಾರ್ಯವನ್ನು ಸಾಧಿಸುವ ಹಟಗಾರರು. ಆದರೆ ಕೊಂಚ ಚಪಲರು.

ಬರ್ಬರರಲ್ಲಿ ಸುಮಾರು ೧೨೦೦ ಒಳಭೇದಗಳು ಉಂಟಂತೆ. ಆದರೆ ಅವರಲ್ಲಿ ಮುಖ್ಯವಾದುದು ಮೂರು ಜಾತಿಗಳು ಮಾತ್ರ. ಮೆಡಿಟರೇನಿಯನ್ ಸಮುದ್ರದ ಬಳಿ ವಾಸವಾಗಿರುವ ಕಬೈಲ್ ಎಂಬುವರು ಅಟ್ಲಾಸ್ ಪರ್ವತದ ಬಳಿಯಿರುವ ಷುಲ್ಲಾಲ್‌ಗಳು ಮತ್ತು ಮೊಗದಾರ ಪ್ರಾಂತದಲ್ಲಿ ಎವ "ಸೂ"ಗಳು ಮತ್ತು ಆಟ್ಲಾಸ್ ಪರ್ವತದ ದಕ್ಷಿಣಕ್ಕೆ ಇರುವ ಕರಿಯ ಬರ್ಬರರು. ಇವರಿಗೆ ಹಾರಾಟಿನ್ ಎಂದೂ ಹೆಸರುಂಟು.

ಬರ್ಬರರ ಹೆಂಗುಸರು ಉಡುಗೆ ತೊಡಿಗೆಗಳಲ್ಲಿ ಅರಬ್ಬಿ ಸ್ತ್ರೀಯರಂತೆ ಇಲ್ಲ. ಅರಬ್ಬಿಯವರು ಆಡಂಬರವುಳ್ಳವರು. ಇವರು ಹಾಗಲ್ಲ. ನಡುವಿಗೆ ಒಂದು ಪಾವಡೆಯನ್ನು ಕಟ್ಟಿಕೊಂಡು, ಹೆಗಲಮೇಲೆ ಒಂದು ಶಾಲುವನ್ನು ಹೊದೆದುಕೊಳ್ಳುವರು ಅರಬ್ಬಿಯವರಂತೆ ಮೈಯೆಲ್ಲಾ ಮುಚ್ಚುವ ಬುರುಖಾ ಹೊದೆದುಕೊಳ್ಳುವುದಿಲ್ಲ. ಕತ್ತಿಗೆ ಭಂಗಾರದ ಗೊಲುಸುಗಳನ್ನೂ ಮಣಿಗಳ ಹಾರಗಳನ್ನೂ ಕಿವಿಗಳಿಗೆ ಓಲೆಗಳನ್ನೂ ಕೆಲವರು ಮೂಗುಬಟ್ಟುಗಳನ್ನೂ ಇಟ್ಟುಕೊಳ್ಳುವರು.


೨ ಕಬೈಲ್ ಜಾತಿಯ ಕನ್ನೆ

ಪಟ್ಟಣವಾಸಿಗಳಾದ ಬರ್ಬರರು ಕಲ್ಲುಮನೆಗಳಲ್ಲಿ ವಾಸಮಾಡುವರು. ಇವರ ಮನೆಗಳು ಕೆಲವು ಎರಡು ಅಂತಸ್ತುಗಳಿರುವುದೂ ಉಂಟು. ಇವರಲ್ಲಿ ಕೆಲವರು ಗುಡಾರಗಳಲ್ಲಿಯಾಗಲೀ ಬೇಕೆಂದಾಗ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಸುಲಭವಾಗಿರುವಂತಹ ಗುಡಿಸಲುಗಳಲ್ಲಾಗಲೀ ವಾಸಮಾಡುವರು ಇಂತಹವರು ವ್ಯವಸಾಯದಿಂದ ಜೀವಿಸುವವರು

ಕಬೈಲ್ಸ್ ಜಾತಿಯವರು ಹೆಂಗುಸರನ್ನು ಬಹುಗೌರವವಾಗಿ ಕಾಣುವರು ಅವರಲ್ಲಿಯೂ ಹೆಂಗುಸರು ಬುರಕಿ ಹಾಕಿಕೊಳ್ಳುವುದಿಲ್ಲ. ಅವರಲ್ಲಿ ಘೋಷಾ ಇಲ್ಲ ಹೆಂಗುಸರು ಯಥೇಚ್ಛವಾಗಿ ಓಡಾಡುವುದುಂಟು. ಇವರಲ್ಲಿ ಸಾಮಾನ್ಯವಾಗಿ ಗಂಡುಸರು ಒಬ್ಬಳಿಗಿಂತ ಹೆಚ್ಚಾಗಿ ಮದುವೆಮಾಡಿಕೊಳ್ಳುವುದಿಲ್ಲ.

ಇವರಲ್ಲಿ ಹೆಂಗುಸರು ನಾನಾವರ್ಣಗಳ ಸಣ್ಣಸಣ್ಣ ವಸ್ತ್ರಗಳನ್ನು ತಲೆಗೆ ಕಟ್ಟಿಕೊಳ್ಳುವ ವಾಡಿಕೆಯುಂಟು, ಕೆಲವರು ಅದನ್ನು ಕತ್ತಿನವರೆಗೂ ಇಳಿಯುಬಿಡುವುದೂ ಉಂಟು. (ಚಿತ್ರ ೨ ೩,೪ ೫ ೬ ನೋಡು)

ಸುಮಾರು ೧೨೦೦ ವರ್ಷಗಳ ಹಿಂದೆ ಅರಬ್ಬರು ಅಲ್ಜೀರಿಯಾ ಮೊರಾಕಾ ಮೊದಲಾದ ದೇಶಗಳನ್ನು ಮೊದಲು ಗೆದ್ದರು ಮತ್ತೆ ೮೦೦ ವರ್ಷಗಳ ಹಿಂದೆ ಇನ್ನೊಮ್ಮೆ ಗೆದ್ದರು ಅಂದಿನಿಂದ ಮತ್ತೆ ಇವು ಫ್ರೆಂಚರ ರಾಜ್ಯವಾಗುವವರೆಗೂ ಅಲ್ಲಿ ಅರಬ್ಬರ ಅಧಿಕಾರವೇ ಹೆಚ್ಚಾಗಿತ್ತು

ಅರಬ್ಬಿ ಸ್ತ್ರೀಯರ ಉಡುಗೆತೊಡಿಗೆಗಳು ಇವರಿಂದ ತೀರಭಿನ್ನವಾದವು ಅವರು ಸಣ್ಣದೊಂದು ಚಡ್ಡಿಯನ್ನು ತೊಟ್ಟುಕೊಂಡು ದೊಗಲೆಬಗಲೆಯಾದ ಷರಾಯಿಯನ್ನು ಅದರ ಮೇಲೆ ತೊಟ್ಟುಕೊಳ್ಳುವರು ಮುಖದಲ್ಲಿ ಕಣ್ಣನಷ್ಟು ಬಿಟ್ಟು ಮಿಕ್ಕೆಲ್ಲ ಭಾಗವನ್ನೂ ಮುಚ್ಚಿಕೊಳ್ಳುವಂತಹ ಒಂದು ಸಣ್ಣ ಬಟ್ಟೆಯನ್ನು ಕಟ್ಟಿಕೊಂಡು ಶರೀರವನ್ನೆಲ್ಲ ಬಟ್ಟೆಯಿಂದ ಹೊದೆದುಕೊಳ್ಳುವರು. (ಕೆಲವು ದೇಶಗಳಲ್ಲಿ ಒಂದೇಕಣ್ಣನ್ನು ಮಾತ್ರ ಬಿಟ್ಟಿರುವಂತೆ.) ಹೀಗೆ ಬುರುಕಿಹಾಕಿಕೊಂಡು ನಡೆಯುವ ಈ ಅರಬ್ಬೀ ಹೆಂಗುಸರು ನಡೆಯುತ್ತಿರುವ ಬಟ್ಟೆಗಳ ಮೂಟೆಯಂತಿರುವರಂತೆ! ಬಡವರು ಕೆಲಸ ಕಾರ್ಯಗಳಿಗಾಗಿ ಹೋಗುವಾಗ ತಮ್ಮ ಪದ್ಧತಿಯಂತೆ ಉಡುಪು ಧರಿಸಿದರೂ ಧನಿಕರು ಮನೆಯಲ್ಲಿರುವಾಗಲೂ ಅನೇಕಾನೇಕ ಉಡುಪುಗಳನ್ನು ಧರಿಸಿರುವರಂತೆ. ಅನೇಕರು ಉಗುರುಗಳಿಗೆ ಕೆಂಪು ಬಣ್ಣವನ್ನು ಹಾಕಿಕೊಳ್ಳುವರು ಕೆಲವರು ತಲೆಯ ಕೂದಲಿಗೂ ಇಂತಹ ಬಣ್ಣವನ್ನು ಹಾಕಿಕೊಳ್ಳುವರಂತೆ. ಧನಿಕರಾದವರು ಕಿವಿಗೆ ಲೋಲಕುಗಳು ವಾಲೆಗಳು ಕತ್ತಿಗೆ ಭಂಗಾರದ ಗೊಲಸು, ಕಾಲಿಗೆ ಭಂಗಾರದ ಬಳೆಗಳು, ಕಲ್ಲುಗಳನ್ನು ಕೆತ್ತಿದ ನಗಗಳು ಇವುಗಳನ್ನೆಲ್ಲ ಧರಿಸುವರು ಬಡವರು ಹವಳಗಳು, ಬೆಳ್ಳಿಯ ಒಡವೆಗಳು, ಗಾಜಿನ ಮಣಿಗಳು, ಮೊದಲಾದವನ್ನು ಧರಿಸುವರು ನಡೆಯುವಾಗ ಅವರ ಆಭರಣಗಳು ಸದ್ದಾಗುವಷ್ಟು ಇರುತ್ತದೆ



೩ ಬೌಸಾದಾ ದೇಶದ ಕನ್ನೆ.
(ದಕ್ಷಿಣ ಅಲ್ಜೀರಿಯಾ)

ಅರಬ್ಬಿಯವರ ಮದುವೆಯ ಪದ್ಧತಿಗಳೂ ವಿಚಿತ್ರವಾದವು. ಅಲ್ಲಿ ಹೆಂಗುಸಿಗೆ ಸ್ವಾತಂತ್ರ್ಯವು ಹೆಚ್ಚು. ಆ ಸ್ವಾತಂತ್ರ್ಯವು ವಿವಾಹವಾದ ಮೇಲೂ ಕಡಿಮೆ ಯಾಗುವುದಿಲ್ಲ ಮ

ದುವೆಯಾದ ಮೇಲೆ ಗಂಡ ಹೆಂಡಿರು ಯೂರೋಪಿಯರಂತೆ ವಿಹಾರಕ್ಕಾಗಿ ಹೋಗು ವುದೂ ಉಂಟು. ಮದುವೆಗೆ ಮುಂಚೆ ತರುಣರು ಬಿಡೋಯಿಗ ಗುಂಪುಗಳಲ್ಲಿ ಇದ್ದು ತಮ್ಮ ಧೈರ್ಯಸಾಹಸಾದಿಗುಣಗಳನ್ನು ಪ್ರದರ್ಶಿಸಿ ಬರುವರು.

ಗಂಡು ಹೆಣ್ಣುಗಳಿಗೆ ಮದುವೆಯು ನಿಶ್ಚಯವಾದರೆ, ತಂದೆತಾಯಿಗಳಿಗೆ ವರ್ತಮಾನವು ಅನಂತರ ವಧುವನ್ನು ಚೆನ್ನಾಗಿ ಅಲಂಕರಿಸಿ ಒಂದು ಒಂಟೆಯಮೇಲೆ ಕುಳ್ಳಿರಿಸಿಕೊಂಡು ವರನಮನೆಗೆ ಕರೆದುಕೊಂಡು ಹೋಗುವರು. ಬಳುವಳಿಯ ಪದಾರ್ಥಗಳನ್ನು ಇತರ ಒಂಟೆಗಳ ಮೇಲೆ ಹೇರಿಕೊಂಡು ಬರುವರು. ವರನಮನೆಯು ಎಷ್ಟು ದೂರದಲ್ಲಿದ್ದರೂ ದಾರಿಯ ಉದ್ದಕ್ಕೂ ವಾದ್ಯಗಳಾಗುತ್ತಲೇ ಇರಬೇಕಂತೆ.



೪. ದಕ್ಷಿಣ ಅಲ್ಜೀರಿಯದ ಹೆಣ್ಣು
(ಇವಳು ನಿಗ್ರೋರಕ್ತ ಬೆರಕೆಯಾದವಳು)

ಮದುವೆಯ ದಿನ ನಡೆಯಬೇಕಾಗಿರುವ ಕೆಲಸವು ಬಹಳ ಕೊಂಚ ಆದರೆ ಊಟಗಳು ಮಟ್ಟಿಗೆ ಬಹಳವಾಗಿ ನಡೆಯುವುವು ಗಂಡಸು ಹಲವರನ್ನು ಮದುವೆಮಾಡಿಕೊಂಡರೆ ತಪ್ಪು ಎಂಬ ಅಭಿಪ್ರಾಯವು ಇಲ್ಲವಾದರೂ ಹಾಗೆ ಹಲವರು ಮಡದಿಯರನು ಕಟ್ಟಿ ಕೊಂಡವರು ಬಹಳ ಅಪರೂಪ (ಹೆಂಡತಿಯರನ್ನು ಬದಲಾಯಿಸಿಕೊಳ್ಳುವ ವಿಚಿತ್ರಪದ್ಧತಿಯು ಕೂಡ ಕೆಲವೆಡೆಗಳಲ್ಲಿ ಉಂಟಂತೆ) ಹೆಂಗಸಾಗಲಿ ಗಂಡಸಾಗಲಿ ತನಗೆ ಬೇಡವೆಂದು ತೋರಿದಾಗ ಸುಲಭವಾಗಿ ಒಬ್ಬರನ್ನೊಬ್ಬರು ಬಿಟ್ಟುಬಿಡಬಹುದು ಗಂಡಸಿಗೆ ಹೆಂಡತಿಯು ಬೇಡವೆಂದು ತೋರಿದರೆ, ಅವನು ಅವಳಿಗಾಗಿ ಬಂದಿರುವ ಬಳುವಳಿಯನ್ನೆಲ್ಲ ಹಿಂದಕ್ಕೆ ಕೊಟ್ಟು ಬಿಟ್ಟು ಅವಳನ್ನು ಅವಳ ತಂದೆಯ ಮನೆಗೆ ಕಳುಹಿಸಿ ಬಿಡಬಹುದು. ಹೆಂಗಸಿಗೂ ಹೀಗೆಯೇ ತನಗೆ ಬೇಡವೆಂದು ತೋರಿದಾಗ ಆ ಗಂಡನನ್ನು ಬಿಟ್ಟು ಬಿಡುವ ಹಕ್ಕೂ ಉಂಟು ಸತ್ತವನ ಹೆಂಡತಿಯನ್ನು ಅವನ ತಮ್ಮನೇ ಮದುವೆಯಾಗು ಪದ್ಧತಿಯುಂಟು. ಅರಬ್ಬರಲ್ಲಿ ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು ಒಬ್ಬರನ್ನೊಬ್ಬರು ಮದುವೆಯಾಗುವುದುಂಟು.

ಸ್ವಂತಸಂಪಾದನೆಯುಳ್ಳ ಹೆಂಗುಸು ತಾನು ಸಂಪಾದಿಸಿರುವ ಆಸ್ತಿಯನ್ನು ತನಗೆ ತೋರಿದಂತೆ ಖರ್ಚು ಮಾಡಬಹುದು ಸ್ತ್ರೀಯರನ್ನು ರಕ್ಷಿಸುವ ವಿಚಾರದಲ್ಲಿ ಪುರುಷರು

ಬಹಳ ಶ್ರದ್ಧೆಯನ್ನು ವಹಿಸುವರು. ಪುರುಷರು ತಾವೆಷ್ಟು ಸ್ವಾತಂತ್ರ್ಯವನ್ನು ಅನುಭವಿಸುವರೋ ಸ್ತ್ರೀಯರಿಗೂ ಅವರು ಅಷ್ಟೇ ಸ್ವಾತಂತ್ರ್ಯವನ್ನು ಕೊಟ್ಟಿರುವರು. ದುರ್ನೀತಿಪರಳಾದ ಹೆಂಗಸಿಗೂ ಕೂಡ ಅವರು ಅವಮಾನ ಮಾಡುವುದಿಲ್ಲವಂತೆ. ''ಬಿಡೋಯಿನ್'' ಕುಲದ ಅರಬ್ಬಿಯವರಲ್ಲಿ ರಾಕ್ಷಸ ವಿವಾಹವು ಕೂಡ ವಾಡಿಕೆಯಲ್ಲಿರುವುದಂತೆ! (ರಾಕ್ಷಸ ವಿವಾಹವೆಂದರೆ, ಇಷ್ಟವಿಲ್ಲದ ಹೆಣ್ಣನ್ನು ಎಳೆದುಕೊಂಡು ಹೋಗಿ ಮದುವೆಮಾಡಿಕೊಳ್ಳುವುದು) ಸ್ತ್ರೀಯರು ವಿದ್ಯಾವತಿಯರಲ್ಲ ಪಟ್ಟಣವಾಸಿಗಳಾದ ಧನಿಕರಲ್ಲಿ ಕೆಲವರು ಮಾತ್ರ ಓದು ಬರೆಹ ಬಲ್ಲರು

## ''ಮೂರ್'' ಸ್ತ್ರೀಯರು.

ಮೊರಾಕ್ಕೊ ದೇಶದವರಿಗೆ ಮೂರರು ಎಂದು ಹೆಸರು ಅವರ ಸ್ತ್ರೀಯರು ಅರಬ್ಬಿಯವರಿಗಿಂತ ಸೌಂದರ್ಯವತಿಯರು ಸ್ಪಯಿನ್‌ದೇಶದಲ್ಲಿ ವಾಸವಾಗಿದ್ದ ಮಾರ್ಕರರು ೧೬ನೆಯ ಶತಮಾನದಲ್ಲಿ ಸ್ವದೇಶಭ್ರಷ್ಟರಾಗಿ ಬಂದು ಮೊರಾಕ್ಕೊ ದೇಶದಲ್ಲಿ ನಿಂತು ಅಲ್ಲಿನವರೊಡನೆ ಸೇರಿಹೋದರು. ಅವರೇ ಈ ಮೂರರು. ಅವರು ಆಚಾರವಿಚಾರಗಳಲ್ಲಿ ಬಹುಮಟ್ಟಿಗೆ ಸ್ಪೆಯಿನ್‌ದೇಶದವರನ್ನು ಹೋಲುವರು. ಇವರಿಗೆ ಬಿಳಿಯಬಟ್ಟೆಗಳಲ್ಲಿ ಬಹಳ ಪ್ರೀತಿ ಗಂಡುಸರ ಉಡುಗೆಗಳಲ್ಲಿ ಆಡಂಬರವಿಲ್ಲ ಹೆಂಗುಸರ ಉಡುಗೆಗಳಲ್ಲಿ ಆಡಂಬರವು ಹೆಚ್ಚು. ಒಳಗೆ ಹಗುರವಾದ ಮಲ್ಲಿನ ಬಟ್ಟೆಗಳನ್ನು ತೊಟ್ಟು ಮೇಲೆ ಬೆಳ್ಳಿ ಬಂಗಾರದ ಹೂ ಗಳು ಕೆತ್ತಿದ ಬಣ್ಣ ಬಣ್ಣದ ಅರೆಲಂಗಾದಂತಹ ತೊಡಗೆಗಳನ್ನು ತೊಡುವರು. ಅದರ ಮೇಲೆ ನೀಲಿ, ಕೆಂಪು, ಎಲೆ ಹಸರು ಮೊದಲಾದ ಬಣ್ಣಬಣ್ಣಗಳ ಷರಾಯಿಗಳನ್ನು ಹಾಕಿಕೊಳ್ಳುವರು. ಅದರ ಮೇಲೆ ರೇಶಿಮೆಯ ಪಟ್ಟಿಯನ್ನುನಡುವಿಗೆ ಸುತ್ತುವರು. ಕಾಲಿಗೆ ಸಣ್ಣ ಜೋಡುಗಳನ್ನು ತೊಟ್ಟುಕೊಳ್ಳುವರು



೫. ಬೌಸಾದಾ ದೇಶದ ಯುವತಿ (ದಕ್ಷಿಣ ಅಲ್ಜೀರಿಯಾ)

## ಮೂರರ ಗೃಹಗಳು

ಅರಬ್ಬರ ಗೃಹಗಳಿಗಿಂತ ಮೂರರ ಗೃಹಗಳು ಹೆಚ್ಚು ಶಿಲ್ಪ ಕೌಶಲ್ಯವುಳ್ಳವು ಎಲ್ಲದಕ್ಕಿಂತಲೂ ಹೆಚ್ಚಾಗಿ ಗಮನಿಸಬೇಕಾದ ಒಂದಂಶವು ಆ ಮನೆಗಳಲ್ಲಿ ಉಂಟು ಮನೆಯ ಹಿಂದೆ ವಿಶಾಲವಾದ ಹಿತ್ತಲು, ಅದರಲ್ಲಿ ಅರ್ಧಭಾಗವನ್ನು ಚಪ್ಪರದ ಹಾಗೆ ಛಾವಣಿಯಿಂದ ಮುಚ್ಚಿರುವುದು ಹಾಗೆ ಮುಚ್ಚದಿರುವ ಭಾಗದಲ್ಲಿ ನೀರಿನ ಕಾರಂಜಿಗಳಿರುವ ಸಣ್ಣ

ಉದ್ಯಾನವುಂಟು ಮುಚ್ಚಿರುವ ಭಾಗಕ್ಕೆ ಭಾರಿಯ ಭಾಗಿಲುಗಳುಂಟು ಒಳಗೆ ನೆಲಕ್ಕೆ ಹೆಂಚುಗಳನ್ನು ಹಾಸುವುದುಂಟು ಹಾಗೆಯೇ ಮೇಲುಗಡೆ ಚಿತ್ರಗಳನ್ನು ಬರೆದಿರುವರು. ಛಾವಣಿಯ ಮೇಲೆ ಹತ್ತಿ ಹೋದರೆ ಅಲ್ಲಿ ಬಿಸಿಲು ಮಹಡಿಯು ಇದ್ದು, ಅದು ಹೆಂಗುಸರಿಗೆ ಮೀಸಲಾಗಿರುವುದು. ಮೂರರು ಸಾಮಾನ್ಯವಾಗಿ ಅಂತಹ ಸ್ಥೂಲಕಾಯರು ಅಲ್ಲ.

## ಮದುವೆಯ ಪದ್ಧತಿಗಳು

ವಿವಾಹವು ಗೊತ್ತಾದ ಮೇಲೆ, ವಧೂವರರು ಒಬ್ಬರನ್ನೊಬ್ಬರು ಕಂಡು ಮಾತನಾಡಲು ಅವಕಾಶವುಂಟು. ವಧುವನ್ನು ಮದುವೆಗೆ ಮುಂಚಿತವಾಗಿ ಒಂದು ದಿನ ಬೆಳದಿಂಗಳ ರಾತ್ರಿಯಲ್ಲಿ ಗಂಡಿನ ಮನೆಗೆ ಕರೆದುಕೊಂಡು ಹೋಗುವರು. ಅಲ್ಲಿ ಮದುವೆಗಳು ನಡೆಯುವುದು ರಾತ್ರಿಯ ವೇಳೆಯಲ್ಲಿ ಅಥವಾ ಸಾಯಂಕಾಲದ ವೇಳೆಯಲ್ಲಿ ಧನಿಕರ ವ ನೆಯಲ್ಲಿ ವಿವಾಹವಾದರೆ, ಬೀದಿಯತುಂಬ ಜನರು ಸೇರಿ, ಬೇಕಾದಷ್ಟು ಸಂಭ್ರಮವಾಗುವುದು. ಬಳುವಳಿಯ ವಸ್ತುಗಳನ್ನು ತರುವ ಆಳುಕಾಳುಗಳ ಹೋಗಿಬರುವುದಕ್ಕೂ ಅವಕಾಶವಿಲ್ಲದಷ್ಟು ಜನರು ಸೇರುವರಂತೆ!

ಹೆಣ್ಣನ್ನು ಬೋನಿನಂತಹ ಪೆಟ್ಟಿಯೊಳಗೆ ಕೂಡಿ ಆ ಪೆಟ್ಟಿಗೆಯನ್ನು ಬೀದಿಗಳೊಳಗೆ ಮೆರೆವಣಿಗೆ ಮಾಡಿಕೊಂಡು ಹೋಗುವರು. ಆ ಪೆಟ್ಟಿಗೆಗೆ ಚೆನ್ನಾಗಿ ಸುಣ್ಣಬೊಳೆದಿರುವುದು. ಜೊತೆಯಲ್ಲಿ ಮೇಳತಾಳಗಳು ಬೇಕಾದಷ್ಟು ಇರುವುವು. ದಾರಿಯಲ್ಲಿ ಸಿಕ್ಕುವ ಪ್ರತಿಯೊಂದು ದೇವಾಲದಲ್ಲಿಯೂ ಅರ್ಚಕನಿಂದ ಆಶೀರ್ವಾದಗಳನ್ನು ಪಡೆದು ವಧುವು ಮುಂದೆ ಹೋಗುವಳು



೬ ಅಲ್ಜೀರಿಯಾ ಯುವತಿ, ಹಣೆ, ಮೊಳಕೈ ಕೈಗಳ ಮೇಲೆ ಹಸುರು ಚುಚ್ಚಿಕೊಂಡಿದ್ದಾಳೆ.

ದಾರಿಯುದ್ದಕ್ಕೂ ಜನರು ತಮ್ಮ ತಮ್ಮ ಮನೆಯ ಬಾಗಿಲಲ್ಲಿ ಹರಸುವರು. ವರನ ಮನೆಗೆ ಹೋದಮೇಲೆ ಆ ಪೆಟ್ಟಿಗೆಯನ್ನು ಮದುವೆಯ ಮಂಟಪದ ಬಳಿಗೆ ತೆಗೆದುಕೊಂಡು ಹೋಗಿ ಹೆಣ್ಣನ್ನು ಈಚೆಗೆ ಕರೆದುಕೊಳ್ಳುವರು ಮತ್ತೆ ಆ ಪೆಟ್ಟಿಗೆಯನ್ನು ಸಿಂಗರಿಸಿ ಮದುವೆಯಾಗುವ ಹೆಣ್ಣು ಬಾಗಿಲಿಕ್ಕಿ

ಅದಕ್ಕೆ ಬೀಗವನ್ನು ಹಾಕಿ ಬೀಗದ ಕಯ್ಯನ್ನು ಗಂಡಿನ ತಾಯಿಯ ಕೈಗೆ ಕೊಡುವಳು ಆಕೆಯು ಸೊಸೆಯ ಬಳಿಗೆ ಹೋಗಿ ಮಾತನಾಡಿ ಆ ಬೀಗದ ಕಯ್ಯನ್ನು ಮಗನಿಗೆ ಕೊಡುವಳು. ಇಷ್ಟಾದರೆ ವಿವಾಹವು ಮುಗಿಯಿತು

ಎರಡು ದಿನಗಳಾದ ಮೇಲೆ ವಧುವನ್ನು ಕರೆತಂದ ಬೋನನ್ನು ಮನೆಯ ಮೇಲೆ ಎಲ್ಲರಿಗೂ ಕಾಣುವ ಕಡೆಯಲ್ಲಿ ಇಡುವರು. ಹಾಗೆ ಇಟ್ಟುದು ಮೊದಲು ಸ್ನೇಹಿತರು ಗಂಡು ಹೆಣ್ಣುಗಳನ್ನು ನೋಡಲು ಒರಬಹುದು ಹೆಣ್ಣು ತನ್ನ ಗೆಳತಿಯರನ್ನು ಏಕಾಂತದಲ್ಲಿ ನೋಡುವಳು ಹೀಗೆ ಗೆಳೆಯರು ಬಂದು ಹೋಗುವುದು ಒಂದು ವಾರದವರೆಗೂ ನಡೆಯು ಅನಂತರ ಊಟ ಉಪಚಾರಗಳು ನಡೆಯುವುವು

ಮೂರು. ಸ್ತ್ರೀಯರು ಜನ್ಮಿಸಿದುದು ಮೊದಲು ಮದುವೆಯಾಗುವವರೆಗೂ ತಂದೆಯ ಮನೆಯಲ್ಲಿಯೂ, ಮದುವೆಯಾದುದು ಮೊದಲು ಮರಣವಾಗುವವರೆಗೂ ಗಂಡನ ಮನೆಯಲ್ಲಿಯೂ ಇರುವರು ಆದರೆ ಅವರು ಸ್ವಾತಂತ್ರ್ಯವನ್ನು ಪಡೆದಿಲ್ಲ ಎಂದು ಮಾತ್ರ ಹೇಳಲು ಬರುವುದಿಲ್ಲ ಮದುವೆಯಾದ ಮೇಲೆ ಅವರು ಮನೆಬಿಟ್ಟು ಹೊರಗೆ ಬರುವುದಿಲ್ಲ ಎಂಬುದು ಒಂದು ಬಿಟ್ಟು ಮಿಕ್ಕೆಲ್ಲದರಲ್ಲಿಯೂ ಆಕೆಯು ಗಂಡನೊಡನೆ ಸಮಸ್ತಕಾರ್ಯಗಳಲ್ಲಿಯೂ ಸರಿಸರಿಯಾಗಿ ನಡೆಯುವಳು ಮತ್ತು ಮನೆಯಲ್ಲಿ ಸಂಸಾರವನ್ನು ಚೆನ್ನಾಗಿ ನಡೆಯಿಸಿಕೊಂಡು ಹೋಗುವ ಭಾರವು ಆಕೆಯದು ಅನೇಕ ವೇಳೆಗಳಲ್ಲಿ ಗಂಡನೂ ಆಕೆಯು ಹೇಳಿದಂತೆಯೇ ಕೇಳಬೇಕ ವ ಊರರಲ್ಲಿ ಹೆಂಗುಸೊಂದು ಮಾತು ಹೇಳಿದರೆ ಗಂಡಸು ಅದನ್ನು ಎಳ್ಳಷ್ಟೂ ಮೀರುವುದಿಲ್ಲವಂತೆ !





ಲಾರ್ಡ್ ವಿಲ್ಲಿಂಗ ಡನ್—ತಮ್ಮ ಅಧಿಕಾರವನ್ನು ಮುಗಿಸಿಕೊಂಡು ಸ್ವಸ್ಥಾನಕ್ಕೆ ತೆರಳುವ ಮೊದಲು ಇವರಿಗೆ ಬೊಂಬಾಯಿ ಪೌರಸಭೆಯವರು ಒಂದು ಮಾನಪತ್ರವನ್ನು ಅರ್ಪಿಸುವರು.



ಲೇಡಿ ವಿಲ್ಲಿಂಗ್‌ಡನ್ನರು—ಇವರ ಹೆಸರಿನ ಲೇಡಿ ವಿಲ್ಲಿಂಗ್‌ಡನ್ ಕಾಲೇಜು ಪ್ರಸಿದ್ಧವಾಗಿದೆ.

# ವೈಸ್ರಾಯ್

ಇಂಡಿಯವು ಈಗ ಒಂದು ಚಕ್ರಾಧಿಪತ್ಯ ಕಾಶ್ಮೀರದ ಉತ್ತರದ ಮೂಲೆಯಿಂದ ಹಿಡಿದು ದಕ್ಷಿಣದ ಕೊನೆಯಾದ ಕನ್ಯಾಕುಮಾರಿಯವರೆಗೆ, ಇತ್ತ ಬೆಲೂಚೀಸ್ಥಾನದಿಂದ ಅಸ್ಸಾಂ ಕೊನೆಯವರೆಗೆ, ವಿಸ್ತಾರವಾದ ಈ ಪ್ರದೇಶವೆಲ್ಲ ಈಗ ಒಬ್ಬನೇ ಸಂರಾಜನ ಕೈಕೆಳಗೆ, ಒಂದು ಸರಕಾರದ ಆಡಳಿತದಲ್ಲಿ ಇದೆ. ಸುಮಾರು ಮೂರು ಸಾವಿರ ವರ್ಷಗಳಿಂದ ಇಂಡಿಯವು ಹೀಗೆ ಒಬ್ಬ ಸಂರಾಜನ ಕೈಕೆಳಗೆ ಇರಲಿಲ್ಲ.

ಈಗ ಇಂತಹ ರಾಜ್ಯವನ್ನು ಆಳುತ್ತಿರುವುದು ಕಿಂಗ್‌ಜಾರ್ಜ್ ಚಕ್ರವರ್ತಿ ಅವರು ಲಂಡನ್‌ನಲ್ಲಿ ಇದ್ದಾರೆ ಆದರಿಂದ ಅವರು ತಮ್ಮ ಕಡೆಯವರೊಬ್ಬರನ್ನು ಇಂಡಿಯ ಆಳುವುದಕ್ಕೆ ಕಳುಹಿಸುತ್ತಾರೆ ಅವರಿಗೆ ವೈಸ್‌ರಾಯ್ ಎಂದರೆ ದೊರೆಗೋಸ್ಕರ ಆಳುವವರು ಎಂದು ಹೆಸರು. ಅವರಿಗೆ ವರ್ಷಕ್ಕೆ ೨೦ ಸಾವಿರ ಪೌಂಡು ಸಂಬಳ.

ಈ ವೈಸ್‌ರಾಯ್‌ಪದವಿಯು ಆರಂಭವಾಗಿ ಸುಮಾರು ೮೦ ವರ್ಷವಾಯಿತು ಇಂಡಿಯದಲ್ಲಿ ಆಗ ಭಾರಿಯ ದಂಗೆಯೊಂದು ನಡೆಯಿತು ಬಂಗಾಲ, ಬೀಹಾರ್ ಮಧ್ಯಪ್ರಾಂತಗಳು, ವಾಯವ್ಯ ಪ್ರಾಂತಗಳು, ಮೊದಲಾದ ಕಡೆಗಳಲ್ಲಿ ಬ್ರಿಟಿಷರ ಪ್ರಭುತ್ವವನ್ನೇ ಅಳಿಸಿಬಿಡುವಂತಹ ಘೋರದಂಗೆಯಾಯಿತು ಆಗ ಇಂಡಿಯವು ಈಸ್ಟ್‌ಇಂಡಿಯಾ ಕಂಪೆನಿ ಎಂಬ ವರ್ತಕರ ಗುಂಪಿನ ಕೈಯಲ್ಲಿತ್ತು ದಂಗೆಯನ್ನು ಅಡಗಿಸಿದ ಮೇಲೆ ಇಂಡಿಯವು ಆಗ ಬ್ರಿಟಿಷ್ ದೇಶವನ್ನು ಆಳುತ್ತಿದ್ದ ಮಹಾರಾಣಿ ವಿಕ್ಟೋರಿಯಾ ಅವರ ವಶವಾಯಿತು ಆಗ ರಾಜ್ಯಭಾರವನ್ನು ವಹಿಸಿಕೊಂಡ ಆ ಮಹಾರಾಣಿಯವರು ಇಂಡಿಯಕ್ಕೆ ಮೊದಲನೆಯ ವೈಸ್‌ರಾಯರನ್ನು ಕಳುಹಿಸಿದರು. ಆಗಿನಿಂದ ಇಂಡಿಯವು ವೈಸ್ರಾಯ್‌ಗಳ ಆಳ್ವಿಕೆಯಲ್ಲಿಯೇ ಇದೆ.

ವೈಸ್ರಾಯರು ಐದುವರ್ಷಗಳು ಇಂಡಿಯದಲ್ಲಿ ರಾಜ್ಯಭಾರಮಾಡುವರು. ಅವರಿಗೆ ಸರ್ವಾಧಿಕಾರವುಂಟು ಅವರು ಇಂಡಿಯದಲ್ಲಿ ಏನು ಬೇಕಾದರೂ ಮಾಡಬಹುದು ಅವರನ್ನು ಕೇಳುವವರು ಅವರ ಮಾತಿನ ಮೇಲೆ ಬೇಕು ಬೇಡ ಎನ್ನುವವರು ಇಂಡಿಯದಲ್ಲಿ ಯಾರೂ ಇಲ್ಲ ಇಂಗ್ಲೆಂಡಿನಲ್ಲಿರುವ ಚಕ್ರವರ್ತಿಗಳು, ಪಾರ್ಲಿಮೆಂಟು, ಪಾರ್ಲಿಮೆಂಟಿನ ಕಡೆಯವರಾಗಿ ಇಂಡಿಯದ ಆಡಳಿತಗಳನ್ನು ನೋಡಿಕೊಳ್ಳುವ ಸ್ಟೇಟ್ ಸೆಕ್ರಟರಿ, ಇವರು ಮಾತ್ರ ವೈಸ್ರಾಯರಿಗಿಂತ ಹೆಚ್ಚಿನ ಅಧಿಕಾರವುಳ್ಳವರು

ಇಂಡಿಯುವನ್ನು ಬೇರೆ ಬೇರೆ ಪ್ರಾಂತ್ಯಗಳಿಗಾಗಿ ವಿಂಗಡಿಸಿದ್ದಾರೆ. ಆ ಭಾಗಗಳಲ್ಲಿ ಇಂಡಿಯನ್ ಇಂಡಿಯು, ಬ್ರಿಟಿಷ ಇಂಡಿಯು, ಎಂದು ಎರಡು ಭಾಗೆ. ಅದರಲ್ಲಿ ನಮ್ಮ ಮೈಸೂರಿನ ಹಾಗೆ ಸಂಸ್ಥಾನಗಳಾಗಿರುವವು ಇಂಡಿಯನ್ ಇಂಡಿಯು ಈ ಭಾಗವು ಇಂಡಿಯದ ಒಟ್ಟು ವಿಸ್ತೀರ್ಣದಲ್ಲಿ ಮೂರನೆಯು ಒಂದು ಭಾಗ, ಇದಿಷ್ಟರಲ್ಲಿ ಸುಮಾರು ೭೦೦ ಸಂಸ್ಥಾನಗಳಿವೆ. ಆದರೂ ಮೈಸೂರು, ಹೈದರಾಬಾದು, ಕಾಶ್ಮೀರ, ಬರೋಡಾ, ತಿರುವಾಂಕೋರು, ಇಂದೂರು ಇವು ಮುಖ್ಯವಾದವು ಇವುಗಳು ವೈಸ್ರಾಯರ ಕೈಕೆಳಗಿವೆ. ಅವರ ಕಡೆಯು ಏಜೆಂಟ ಒಬ್ಬರು ಈ ರಾಜ್ಯಗಳಲ್ಲಿದ್ದು ಬ್ರಿಟಿಷರಿಗೆ ವಿರೋಧವಾಗಿ ಏನೂ ನಡೆಸದಂತೆ ನೋಡಿಕೊಳ್ಳುತ್ತಾರೆ ಈ ಸಂಸ್ಥಾನಗಳು ಸ್ವತಂತ್ರ ಸಂಸ್ಥಾನಗಳು ಎನ್ನಬಹುದು. ಇವು ಸರಿಯಾಗಿ ಇರುವವರೆಗೂ ಇವಕ್ಕೆ ಯಾವಬಾಧೆಯೂ ಇರುವುದಿಲ್ಲ

ಬ್ರಿಟಿಷ ಇಂಡಿಯುದಲ್ಲಿ ಹೀಗಿಲ್ಲ. ಅಲ್ಲಿ ಬ್ರಿಟಿಷರ ಸರ್ಕಾರ ಪ್ರತಿಯೊಂದು ಪ್ರಾಂತ್ಯಕ್ಕೂ ಒಬ್ಬೊಬ್ಬ ಗವರ್ನರ್ ಅಥವಾ ಲೆಫ್ಟಿನೆಂಟ್ ಗವರ್ನರ್ ಇರುತ್ತಾರೆ ಅವರೂ ಸಂಸ್ಥಾನಾಧೀಶರಂತೆ ಸ್ವತಂತ್ರರು ಆದರೂ ಇವರೆಲ್ಲರೂ ವೈಸ್ರಾಯರನ್ನು ಕೇಳಿ ಕೆಲಸಮಾಡುವವರು ಬೊಂಬಾಯಿ, ಮದರಾಸು, ಬಂಗಾಳ, ಹೀಗೆ ಗವರ್ನರ್ ಪ್ರಾಂತ್ಯಗಳು, ಇವರೆಲ್ಲರಿಗೂ ವೈಸ್ರಾಯರು ದೊಡ್ಡವರು ಅದರಿಂದ ಅವರಿಗೆ ಗವರ್ನರ್ ಜನರಲ್ ಎಂದೂ ಹೆಸರುಂಟು

ಈ ಪದವಿಯು ಬ್ರಿಟಿಷ್ ಸಾಮ್ರಾಜ್ಯದಲ್ಲಿ ಅತ್ಯಂತ ಶ್ರೇಷ್ಠವಾದುದು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ, ಕೆನಡಾ, ಸೌತ್ ಆಫ್ರಿಕ, ಆಸ್ಟ್ರೇಲಿಯು, ಇಂತಹ ಭರಿ ಭಾರಿ ದೇಶಗಳಿದ್ದರೂ ಇಂಡಿಯುದಂತಹ ರಾಜ್ಯವು ಇನ್ನೊಂದಿಲ್ಲ ಇಲ್ಲಿನ ವೈಸ್ರಾಯ್ ಪದವಿಯುಂತಹ ಪದವಿಯಿನ್ನೊಂದಿಲ್ಲ

ಈ ಪದವಿಯನ್ನು ಈಗ ಐದುವರ್ಷಗಳಿಂದ ಅನುಭವಿಸಿದವರು ಲಾರ್ಡ್‌ವೆಲ್ಲಿಂಗ್‌ಡನ್‌ರು. ಇವರ ಕಾಲದಲ್ಲಿ ಎಂದರೆ, ಇವರು ಇಂಡಿಯುಕ್ಕೆ ಬಂದಾಗ ಇಂಡಿಯುದಲ್ಲಿ ಎಲ್ಲೆಲ್ಲಿಯೂ ಸ್ವರಾಜ್ಯಚಳುವಳಿಗಳು ಹೆಚ್ಚಾಗಿದ್ದುವು ಬ್ರಿಟಿಷ್ ಸರ್ಕಾರವನ್ನು ನಿಂದಿಸುವುದು ಬಹಳವಾಗಿತ್ತು. ಇವರು ಎಲ್ಲವನ್ನೂ ಅಡಗಿಸಿದರು ಇಂಡಿಯುವು ಮತ್ತೆ ತೆಪ್ಪಗಾಗಿದೆ. ಇವರ ಕಾಲದಲ್ಲಿ ಇಂಡಿಯದಲ್ಲಿ ಹಣದ ಕ್ಷಾಮವು ಬಹಳವಾಗಿತ್ತು ಮತ್ತು ಇಂಡಿಯದಿಂದ ಕೋಟ್ಯಂತರ ರೂಪಾಯಿಗಳ ಭಂಗಾರವು ಸಾಗಿ ಹೋಯಿತು ಇಂಡಿಯುದ ಸರಕಾರವು ಇದುವರೆಗೆ ಇದ್ದಂತೆ ಇರದ ಹೊಸರೂಪವನ್ನು ಪಡೆಯುವುದು ಹೀಗೆ ಆಗಬೇಕಾದರೆ ಪಾರ್ಲಿಮೆಂಟಿನ ಅಪ್ಪಣೆಯಾಗಿ ಅದಕ್ಕೆ ಚಕ್ರವರ್ತಿಗಳೂ ಒಪ್ಪಬೇಕು ಆಗ ಅದು “ ಆಕ್ಟ್ ” ಆಗುವುದು ಅಂತಹ ಇಂಡಿಯು ಆಕ್ಟ್ ಇವರ ಕಾಲದಲ್ಲಿ ಪ್ಯಾಸಾಯಿತು

ಇವರು ವೈಸ್ರಾಯರು ಆಗುವುದಕ್ಕೆ ಮುಂಚೆ ಬೊಂಬಾಯಿ, ಮದರಾಸುಗಳ ಗವರ್ನರ್ ಆಗಿದ್ದರು. ಇವರು ಈ ಏಪ್ರೆಲ್‌ಗೆ ಹೊರಟು ಹೋಗುತ್ತಾರೆ.



**ಲಾರ್ಡ್ ಲಿನ್‌ಲಿತ್‌ಗೌರವರು**

**ಇವರು ಭಾರತದ ಮುಂದಿನ ವೈಸ್‌ರಾಯರಾಗಿ**
**ಏಪ್ರಿಲ್ ತಿಂಗಳಿನಲ್ಲಿ ಬರುವರು**

ಮುಂದಿನ ವೈಸ್ರಾಯರು ಲಾರ್ಡ್ ಲಿನ್‌ಲಿತ್‌ಗೌ ಅವರು. ಇಂಡಿಯ ಆಕ್ಟೋಬರೆ ದುದು ಒಂದು ಸಣ್ಣ ಸಭೆ ಆ ಸಭೆಗೆ ಇವರೇ ಅಧ್ಯಕ್ಷರಾಗಿದ್ದರು.

ಇವರು ಇಂಡಿಯಕ್ಕೆ ಒರುವುದೂ ಇಂಡಿಯದಲ್ಲಿ ಹೊಸ ಸರಕಾರವು ಒರುವುದೂ ಎರಡೂ ಸಂಧಿಸಿವೆ. ಇವರಿಂದ ಇಂಡಿಯಕ್ಕೆ ಬೇಕಾದಷ್ಟು ಉಪಕಾರವಾಗುವುದು ಎಂದು ಎಲ್ಲರೂ ನಂಬಿದ್ದಾರೆ.

———

# ಪ್ರೊಫೆಸರ್ ಐನ್‌ಸ್ಟೀನ್ ಅವರು



ಇವರು ಸೈನ್ಸ್ ವಿದ್ಯೆಯಲ್ಲಿ ಬಹಳ ದೊಡ್ಡವರು. ಇವರು ಹುಟ್ಟಿ ಬೆಳೆದುದೆಲ್ಲ ಜರ್ಮನಿಯಲ್ಲಿ. ಇವರು ಜಾತಿಯಲ್ಲಿ ಯೆಹೂದಿಗಳು ಈಚೆಗೆ ಜರ್ಮನಿಯಲ್ಲಿ ನಾಜಿಗಳು ಎಂಬ ಗುಂಪಿನವರು ಪ್ರಬಲರಾಗಿದ್ದಾರೆ ಅವರು ಅಲ್ಲಿ ಯೆಹೂದಿಗಳನ್ನು ಬಹಳವಾಗಿ ಗೋಳುಹುಯ್ದುಕೊಳ್ಳುತ್ತಿದ್ದಾರೆ ಇದರ ಫಲವಾಗಿ ಆ ಜಾತಿಯವರು ಆ ದೇಶವನ್ನೇ ಬಿಟ್ಟು ಹೊರಟು ಹೋಗುತ್ತಿದ್ದಾರೆ ಹಾಗೆ ಹೊರಟು ಬಂದವರಲ್ಲಿ ಇವರೂ ಒಬ್ಬರು. ಈಗ ಇವರು ಅಮೇರಿಕದಲ್ಲಿ ಇದ್ದಾರೆ.



ಇವರು ಕಂಡುಹಿಡಿದಿರುವ ತತ್ವಕ್ಕೆ "ಥಿಯರಿ ಆಫ್ ರಿಲೆಟಿವಿಟಿ" ಎಂದು ಹೆಸರು. ಸೈನ್ಸ್‌ನಲ್ಲಿ ಒಬ್ಬರು ಹೇಳಿದರು ಎಂದ ಮಾತ್ರಕ್ಕೇ ಯಾರೂ ಒಪ್ಪುವುದಿಲ್ಲ. ಯಾರಾದರೂ ಒಂದು ಹೊಸ ತತ್ವವನ್ನು ಹೇಳಿದರೆ, ಚಿನಿವಾರ ಕಟ್ಟೆಯಲ್ಲಿ ಚಿನ್ನವನ್ನು ಪರೀಕ್ಷಿಸುವಂತೆ ಪರೀಕ್ಷಿಸುತ್ತಾರೆ. ಆ ಪರೀಕ್ಷೆಯಲ್ಲಿ ಆ ತತ್ವವು ನಿಂತರೆ ಆ ಮೇಲೆ ಅದನ್ನು ಒಪ್ಪಿಕೊಳ್ಳುವುದು ಇವರ ತತ್ವವೂ ಹಾಗೆಯೇ ಪರೀಕ್ಷೆಗೆ ಗುರಿಯಾಯಿತು. ಅನಂತರ ಎಲ್ಲ ವಿದ್ವಾಂಸರೂ ಅದನ್ನು ಅಂಗೀಕರಿಸಿದರು.

"ನಾವು ತೆಂಗಿನ ಮರವನ್ನು ನೋಡುತ್ತೇವೆ. ಕೂಡಲೇ ತೆಂಗಿನಮರವನ್ನು ಕಂಡೆವು ಎಂದುಕೊಳ್ಳುತ್ತೇವೆ ಆಗ ನಾವು ಎಲ್ಲಿನಿಂತಿದ್ದೆವು, ಎಷ್ಟು ಹೊತ್ತು, ಎಂಬುದನ್ನು ಗಮನಿಸುವುದಿಲ್ಲ. ಹಾಗೆ ಆಗಬಾರದು. ನಾವು ಎಲ್ಲಿ ಎಷ್ಟುದೂರದಲ್ಲಿ ನಿಂತಿದ್ದೆವು, ಆಗ ಎಷ್ಟುಹೊತ್ತಾಗಿತ್ತು ಎಂಬುದನ್ನೂ ಗಮನಿಸಬೇಕು ಪ್ರಪಂಚದಲ್ಲಿ ಯಾವುದೊಂದು ಪದಾರ್ಥವೂ ಸ್ವತಂತ್ರವಾಗಿಲ್ಲ ಎಲ್ಲವೂ ಒಂದಕ್ಕೊಂದು ಹೊಂದಿಕೊಂಡಿದೆ" ಎಂಬುದು ಅವರ ಸಿದ್ಧಾಂತ.

## ಒ ಗ ಟಿ ಗ ಳು

೧ ಅರೆಮೇಲೆ ಮರಮೂಡಿ ಅದರ ಮೇಲೆ ಕಯ್ಯಾಡಿ ಹಣೆಗೆ ಸಿಂಗರವಾಗುವುದು.

೨ ಹೊಲದಲ್ಲಿದ್ದು ಬೆಂಕಿಗೆ ಬಿದ್ದು ಬಡುವಿನ ಮೇಲೆ ಕೂತೆ ಬಾಯಿಬಿಟ್ಟರೆ ಬೀದಿಗೆಸೆದರು.

೩ ಮರವಾಗಿ ಮೊಸರಲ್ಲಿ ಮೀಯುವ ಮಹಾನುಭಾವ ಯಾರು ?

೪ ಅಕರಿ ಮೋದಲ್ಲಿ ಆಶಕಾಕ್ಕೆ ಏಕ ಬೇಹಾಣಿಕೆಂದು ರಂವರುಇತೆ.

## ಬುದ್ಧಿಯ ಪರೀಕ್ಷೆ

೧ ಅವರು ಹೇಳಿದರು ಇಷ್ಟು ದಿನವೂ ನೆರಳು ಉತ್ತರಕ್ಕೆ ಬೀಳುತ್ತಿತು. ಇನ್ನು ಮುಂದೆ ಅದು ದಕ್ಷಿಣಕ್ಕೆ ಹೋಗುತ್ತದೆ ಎಂತ ! ನಿಜವೆ ? ಯಾಕೆ ?

೨ ನೆಲದೊಳಗೆ ಬಗೆದು ಒಲೆಮಾಡಿ ಬೆರಣಿ ಬೆಂಕಿಯಲ್ಲಿ ಕಾಸಿದ ಹಾಲಿನಲ್ಲಿ ಬೆಣ್ಣೆ ಹೆಚ್ಚಾಗಿ ಬರುವುದಂತೆ ! ನಿಜವೆ? ಯಾಕೆ ?

---

### ಸ್ಪರ್ಧೆಯಲ್ಲಿ ಬಹುಮಾನಗಳನ್ನು ಪಡೆದವರು ಪುಸ್ತಕ ಬಹುಮಾನ

೧. ಬಿ ರಾಮಭಟ್ಟ, ಬೆಟ್ಟಗೆರೆ
೨. ಆರ್. ಎಸ್. ಚಂದ್ರಶೇಖರ, ಸಾಗರ.
೩. ಎಸ್. ಸರಸ್ವತೀಬಾಯಿ ಬಳ್ಳಾರಿ.
೪ ಲಕ್ಷ್ಮೀನರಸಪ್ಪ, ಹೊಸಕೋಟೆ
೫. ಬಿ ಶ್ರೀನಿವಾಸಮೂರ್ತಿ ಸಾಗರ.
೬. ಬಿ ವಿ ವೆಂಕಟರಾಯ,
೭ ಎಂ ಎಸ್. ನಾರಾಯಣಮೂರ್ತಿ, ಹೊಸದುರ್ಗ
೮. ಎಸ್. ದುಂಡಪ್ಪ ದಿನಕರ , ಶಿವಮೊಗ್ಗ

ಈಸಲವೂ ಹೆಚ್ಚು ಜನರು ಉತ್ತರಗಳನ್ನು ಬರೆದಿಲ್ಲ. ಅದರಿಂದ, ಎಲ್ಲರಿಗೂ ಪುಸ್ತಕ ಬಹುಮಾನಗಳನ್ನು ಮಾತ್ರ ಕೊಟ್ಟಿದೆ. —ಅಣ್ಣ—

' ಇದುಯೇನು''ಗೆ ಉತ್ತರ ಬರೆದವರ ಹೆಸರು—ಎಸ್. ಸರಸ್ವತೀಬಾಯಿ'



೮ನೇ ಎಡ್ವರ್ಡ್ ಸಾರ್ವಭೌಮರು



ದಿವಂಗತ ಕಿಂಗ್ ಜಾರ್ಜ್ ಸಾರ್ವಭೌಮರು



ಮಹಾತಾಯಿ ಮೇರಿಯವರು

# ಜಾರ್ಜ್ ಚಕ್ರವರ್ತಿಗಳು

ಕಿಂಗ್ ಜಾರ್ಜ್ ಅವರು ಕಳೆದ ತಿಂಗಳಿನಲ್ಲಿ ಈ ಲೋಕವನ್ನು ಬಿಟ್ಟು ತೆರಳಿದರು. ಇವರು ಸಿಂಹಾಸನಕ್ಕೆ ಬಂದು ೨೬ ವರ್ಷಗಳಾಯಿತು.

ಜಾರ್ಜ್ ಅವರು ಚಕ್ರವರ್ತಿಗಳಾಗಿದ್ದಾಗ ಬ್ರಿಟಿಷ್ ಸಾಮ್ರಾಜ್ಯಕ್ಕೆ ಭಾರಿಯ ಅಪಾಯ ವೊದಗಿತ್ತು. ಇಪ್ಪತ್ತುವರ್ಷಗಳ ಕೆಳಗೆ ನಡೆದ ಯೂರೋಪಿನ ಮಹಾ ಯುದ್ಧದ ಪ್ರಭಾವವು ಪ್ರಪಂಚದ ಮೂಲೆ ಮೂಲೆಗಳಿಗೂ ವ್ಯಾಪಿಸಿ ಎಲ್ಲ ಕಡೆಯೂ ಹೆಚ್ಚು ಕಡಿಮೆಗಳಾದುವು ಆ ಯುದ್ಧವು ಮುಗಿಯುವ ವೇಳೆಗೆ ಬ್ರಿಟಿಷರಿಗೆ ಲಕ್ಷಾಂತರ ಕೋಟಿ ಪೌಂಡು ಸಾಲವಾಯಿತು ಬ್ರಿಟಿಷ್ ಚಕ್ರಾಧಿಪತ್ಯವು ಯುದ್ಧವಾದ ಮೇಲೆ ಇನ್ನೂ ಬೆಳೆಯಿತು

ಈ ಚಕ್ರವರ್ತಿಗಳ ಕಾಲದಲ್ಲಿ ಚ ಕ್ರಾ ಧಿ ಪ ತ್ಯ ಗ ಳ ಅಂಗಗಳಾಗಿದ್ದ ರಾಜ್ಯಗಳೆಲ್ಲವೂ ಸ್ವತಂತ್ರವಾಗಬೇಕು ಎಂದು ಪ್ರಯತ್ನಿಸಿದುವು ಬ್ರಿಟಿಷ್ ಪಾರ್ಲಿಮೆಂಟ್ ಸರಕಾರವೂ ಕೂಡ, ಅವು ಬೆಳೆದ ಮಕ್ಕಳ ಹಾಗೆ, ಅವರಿಗೆ ಸ್ವಾತಂತ್ರ್ಯವನ್ನು ಕೊಡತಕ್ಕದೇ ಸರಿ ಎಂದು ಒಪ್ಪಿ ಆದಷ್ಟು ಧಾರಾಳವಾಗಿ ಸ್ವಾತಂತ್ರ್ಯವನ್ನು ಕೊಟ್ಟಿತು.

ಬ್ರಿಟಿಷ್ ಚಕ್ರವರ್ತಿಗಳು ಸ್ವರ್ಗವಾಸಿಗಳಾದುದು ಬ್ರಿಟಿಷ್ ಪ್ರಜೆಗಳಿಗೆ ಅಪಾರವಾದ ಶೋಕ, ಚಕ್ರಾಧಿಪತ್ಯದಲ್ಲೆಲ್ಲ ಎಲ್ಲರೂ ಈ ಶೋಕವನ್ನು ಹಂಚಿಕೊಳ್ಳುವರು.

ಮುಂದಿನ ಚಕ್ರವರ್ತಿಗಳು ಎಂಟನೆಯ ಕಿಂಗ್ ಎಡ್ವರ್ಡ್ ಅವರು. ಇವರ ಪೂರ್ತಿ ಹೆಸರು, ಎಡ್ವರ್ಡ್ ಆಲ್ಬರ್ಟ್ ಕ್ರಿಶ್ಚಿಯನ್ ಜಾರ್ಜ್ ಆಂಡ್ರೂ ಪ್ಯಾಟ್ರಿಕ್ ಡೇವಿಡ್ಡರು.

ಇವರು ೧೮೯೪ನೇ ಜೂನ್ ೨೩ನೆಯ ತಾರೀಖು ಜನಿಸಿದರು ಇವರು ಇವರ ತಂದೆ ತಾಯಿಗಳ ಮೊದಲನೆಯ ಮಕ್ಕಳು

೧೯೧೧ ರಲ್ಲಿ ಇವರು ಪ್ರಿನ್ಸ್ ಆಫ್ ವೇಲ್ಸ್‌ರಾದರು ಮುಂದೆ ೧೯೧೪ ರಲ್ಲಿ ಮಹಾ ಯುದ್ಧವು ಆರಂಭವಾಗುವವರೆಗೂ ಆಕ್ಸ್‌ಫರ್ಡ್ ಯೂನಿವರ್ಸಿಟಿಯಲ್ಲಿ ಓದುತ್ತಿದ್ದರು ಇವರು ಯುದ್ಧಕ್ಕೆ ಹೋಗಿ ಅಲ್ಲಿನ ಬಡಸೈನಿಕರ ಜೊತೆಯಲ್ಲಿ ತಾವು ಬಡವರಂತೆಯೇ ಇದ್ದರು

ಇವರು ಪ್ರಿನ್ಸ್ ಆಫ್ ವೇಲ್ಸ್‌ರಾಗಿದ್ದಾಗಲೇ ಪ್ರಪಂಚವನ್ನೆಲ್ಲ ಸುತ್ತಿಬಂದರು. ಕಳೆದ ೧೯೨೧-೨೨ರಲ್ಲಿ ಇವರು ಇಂಡಿಯಕ್ಕೆ ಬಂದಿದ್ದರು ಇವರಿಗೆ ಈಗ ೪೨ ವರ್ಷ

## —ಮಕ್ಕಳ ಪುಟ—

# ತುಟಿಯ

(ಶ್ರೀನಿವಾಸಶೆಟ್ಟಿ, ಚಿತ್ರದುರ್ಗ)

ಒಂದು ಹಳ್ಳಿಯಲ್ಲಿ ಗಂಡಹೆಂಡಿತಿಯರಿದ್ದರು. ಹೆಂಡತಿಯು ಯಾವಾಗಲೂ ಗಂಡನನ್ನು ತುಟಿಯ ತುಟಿಯ ಎಂದು ಕೂಗುತ್ತಿದ್ದಳು ಗಂಡನಿಗೆ ಇದು ಇಷ್ಟವಿರಲಿಲ್ಲ ಎಷ್ಟೋಸರ್ತಿ ಹಾಗೆ ಕೂಗಕೂಡದೆಂದು ಅವಳಿಗೆ ಒತ್ತಿ ಒತ್ತಿ ಹೇಳಿದ್ದನು ಆದರೂ ಅವಳು ತನ್ನ ಹಟವನ್ನು ಬಿಡುತ್ತಿರಲಿಲ್ಲ ಒಂದು ದಿನ ಅವಳ ಗಂಡನಿಗೆ ಬಹಳ ಸಿಟ್ಟು ಬಂದಿತು ನೀನಿದ್ದರಲ್ಲವೆ ನನ್ನನ್ನು ಈ ರೀತಿ ಕೂಗುವುದು ಎಂದು ಅವಳನ್ನು ಒಂದು ಹುಣಸೇಬೀಜವನ್ನಾಗಿ ಮಾಡಿ ರಸ್ತೆಯಲ್ಲಿ ಎಸೆದನು. ಹಾಗೇ ನಿಂತಿರುವಲ್ಲಿ ಒಂದು ಕೋಳಿಯು ಕಾಳನ್ನು ಆರಿಸುತ್ತಾ ಬಂದು ಆ ಹುಣಸೇಹಣ್ಣಿನ ಬೀಜವನ್ನು ಬಾಯಿಯಲ್ಲಿ ಕಚ್ಚಿಕೊಂಡು ತಿನ್ನುತ್ತ ಕೊಕ್ಕೋ ತುಟಿಯ ಕೊಕ್ಕೋ ತುಟಿಯ ಎಂದು ಕೂಗಿತು. ಅವನಿಗೆ ಮೊದಲೇ ರೇಗಿತ್ತು. ಇನ್ನು ಕೇಳಬೇಕೋ? ಹಾಳಾದ್ದೇ! ನೀನೂ ಕೂಡ ನನ್ನನ್ನು ಹಾಗೆ ಕೂಗುತ್ತೀಯಾ? ಎಂದು ಆ ಕೋಳಿಯನ್ನು ಹಿಡಿದು ಕತ್ತರಿಸಿ ತೆಗೆದುಕೊಂಡು ಹೋಗಿ ಸಾರಿನ ಜೊತೆಗೆ ಹಾಕಿದನು. ಸಾರು ಕುತ, ಕುತ, ಎಂದು ಕುದಿಯುತ್ತಿರುವಾಗ ಕುತ ಕುತ ತುಟಿಯ ಕುತ ಕುತ ತುಟಿಯ ಎಂದು ಕೂಗಿತು. ಆಗ ಅವನು ಅದರ ಮೇಲೂ ಸಿಟ್ಟುಮಾಡಿಕೊಂಡು ಆ ಸಾರನ್ನೆಲ್ಲಾ ತೆಗೆದುಕೊಂಡು ಹೋಗಿ ಆಚೆಗೆ ಚೆಲ್ಲಿದನು. ಒಂದು ನಾಯಿಯು ಬಂದು ಅದನ್ನು ಕುಡಿಯುತ್ತಾ ಬೌ ಬೌ ತುಟಿಯ ಎಂದು ಬೊಗಳಿತು. ಆಗ ಅವನು ಸಿಟ್ಟುಕೊಂಡು ಆ ನಾಯಿಯ ಚರ್ಮವನ್ನು ಸುಲಿದು ಒಂದು ತಂಬಟೆಯನ್ನು ಮಾಡಿದನು ಅದನ್ನು ಬಾರಿಸುತ್ತಿರುವಾಗ ಅದು ಢಂ ಢಂ ತುಟಿಯ ಢಂ ಢಂ ತುಟಿಯ ಎಂದು ಶಬ್ದಮಾಡಿತು. ಅವನು ಅದಕ್ಕೂ ಸಿಟ್ಟುಗೊಂಡು ಒಂದು ಹೊಳೆಯೊಳಗೆ ಆ ತಂಬಟೆಯನ್ನು ಬಿಸಾಡಿದನು. ಆ ನೀರು ಹರಿಯುತ್ತಿರುವಾಗ ಲೊಳ ಲೊಳ ತುಟಿಯ ಎಂದು ಶಬ್ದಮಾಡಿತು. ತುಟಿಯನಿಗೆ ಆಗಲೂ ಬಹಳ ಸಿಟ್ಟು ಬಂದಿತು. ಈ ನದಿಯನ್ನು ಏನುಮಾಡಿಬಿಡಲಿ ಎಂದು ಯೋಚಿಸಿದನು ಆದರೆ ಹರಿಯುವ ನೀರಿನ ಮೇಲೆ ಇವನ ಪ್ರಯತ್ನವೇನೂ ಸಾಗಲಿಲ್ಲ ಕಡೆಗೆ ಹೆಂಡತಿಯೂ ಹೋದಳು. ಇವುಗಳ ಕೈಲೂ ಅನ್ನಿಸಿಕೊಳ್ಳಬೇಕಾಯಿತು ಎಂದು ವ್ಯಸನಪಡುತ್ತಾ ಪೆಚ್ಚು ಮೋರೆ ಹಾಕಿಕೊಂಡು ಮನೆಗೆ ಹೋದನು!




ವಿದ್ಯಾಪರಾ ದೇವತಾ

ಕಟ್ಟು ೯ | ಯುವ ಸಂ॥—ಫಾಲ್ಗುಣ—ಮಾರ್ಚಿ ೧೯೩೬ | ಪುಸ್ತಕ ೧೦

# ತಿರುಪತಿ ಯಾತ್ರೆ

(ಸಂಗ್ರಹ—ಗಿರೀಗೌಡ)

ಕಂಬಸಾಲೆಯಲ್ಲಿ ಚಂಬುಪೂಜೆಯಮಾಡಿ |
ತುಂಬ ದೀವಿಗೆಯ ಶೇವೆಮಾಡಿ |
ತುಂಬ ದೀವಿಗೆಯ ಶೇವೆಮಾಡಿ ನಮ್ಮನೆಯ ||
ಕಂದಣ್ಣ ಹೊರಟಾನೇ ತಿರುಪತಿಗೇ ||

ತೊಟ್ಟಿಮಾಳಿಗೆಯಲ್ಲಿ ಕಳಸಪೂಜೆಮಾಡಿ |
ಮುತ್ತಿನ ದೀವಿಗೆಯ ಶೇವೆಮಾಡಿ |
ಮುತ್ತಿನ ದೀವಿಗೆಯ ಶೇವೆಮಾಡಿ ನಮ್ಮನೆಯ ||
ಪುತ್ರಣ್ಣ ಹೊರಟಾನೆ ತಿರುಪತಿಗೇ ||

ಕೋಣೆಗ್ಹೋದಾನು, ತಾಯ್ಗೆ ಶರಣೆಂದಾನು |
ಮುತ್ತಿನ ಕಣ್ಣಲ್ಲಿ ಪನ್ನೀರ ಸುರಿಸುತ್ತ |
ತಾಯಿ ಅಳದೀರೆ, ತಾಯಮ್ಮ ಅಳದೀರೆ |
ಬಾಲಾನ ತಾಯೀ ಅಳದೀರೆ |
ಬಾಲಾನ ತಾಯೀ ಅಳದೀರೆ ತಿಂಗಳಿಗೆ |
ಗಂಧನಿಟ್ಟಂಗೆ ಬರುತೀನಿ ||

# ಆರೋಗ್ಯ-ಆಹಾರ

ಬೆಳ್ಳಗಿರುವ ಅಕ್ಕಿಯ ಅನ್ನವು ಕಣ್ಣಿಗೆ ಚಂದವಾಗಿ ಕಾಣುತ್ತದೆ. ಅದರಿಂದ ಅನೇಕರು ಆ ಬೆಳಿಯ ಅಕ್ಕಿಯ ಅನ್ನವನ್ನೇ ಬಯಸುತ್ತಾರೆ ಆದರೆ ಅದರಲ್ಲಿ ಏನೇನೂ ಸತ್ವವಿಲ್ಲವೆಂದು ಅನೇಕರು ಅರಿಯರು

ಅಕ್ಕಿಯ ಮೇಲಿರುವ ತೌಡು ಬಹಳ ಒಳ್ಳೆಯದು ಅದರಲ್ಲಿ ಪ್ರೋಟೀನ್, ವೈಟಮಿನ್ ಬಿ ಎಂಬ ಪದಾರ್ಥಗಳು ವಿಶೇಷವಾಗಿರುತ್ತವೆ. ವೈಟಮಿನ್ ಬಿ ಯು ಕರುಳಿನಲ್ಲಿರುವ ಸಾಮರ್ಥ್ಯವನ್ನೂ ರೋಗವನ್ನು ತಡೆಯುವ ಶಕ್ತಿಯನ್ನೂ ಹೆಚ್ಚಿಸುತ್ತದೆ. ಮಿಲ್ಲುಗಳಿಂದ ಬರುವ ಅಕ್ಕಿಯಲ್ಲಿ ಈ ತೌಡಿನ ಅಂಶವು ಹೋಗಿಬಿಟ್ಟಿರುತ್ತದೆ. ಬಿಸಿ ಮತ್ತು ತೇವವು ಹೆಚ್ಚಾಗಿರುವ ಕಡೆಯಲ್ಲಿ ಅಕ್ಕಿಯನ್ನು ತುಂಬಿಟ್ಟರೂ ಹೀಗೇ ಅದರ ತೌಡಿನಲ್ಲಿರುವ ಗುಣವು ಇಳಿದು ಹೋಗುತ್ತದೆ

ಬಸುರಿಯರು ಮಿಲ ಅಕ್ಕಿಯನ್ನು ತಿನ್ನುವುದರಿಂದ ಅವರಿಗೆ ಶಕ್ತಿಯು ಕಡಿಮೆಯಾಗುವುದು ಮಾತ್ರವಲ್ಲ; ಬಸರಿನಲ್ಲಿರುವ ಹಸುಳೆಗಳಿಗೂ ಶಕ್ತಿಯು ಕಡಿಮೆಯಾಗುತ್ತದೆ.

ಹಾಗೆಯೇ ಗೋಧಿಗಿಂತಲೂ ಅಕ್ಕಿಯು ಉತ್ತಮವಾದುದು. ದೇಹಕ್ಕೆ ಬೇಕಾದ ಪ್ರೋಟೀನ್ ಎಂಬ ವಸ್ತುವು ಗೋಧಿಯ ಹಿಟ್ಟಿನಲ್ಲಿ ಶೇ|| ಹನ್ನೊಂದಷ್ಟು ಅಕ್ಕಿಯಲ್ಲಿ ಶೇ|| ಎಂಟು ಅಥವಾ ಎಂಟೂವರೆಯಷ್ಟು ಇರುತ್ತದೆ ಆದರೆ ಗೋಧಿಯ ಪ್ರೋಟೀನ್ ದೇಹದಲ್ಲಿ ಜೀರ್ಣವಾಗುವುದು ಶೇ|| ೮೦ ರಷ್ಟು ಮಾತ್ರ ಅಕ್ಕಿಯ ಪ್ರೋಟೀನ್ ಶೇ|| ಎಂಭತ್ತೆಂಟರಿಂದ ತೊಂಭತ್ತುನಾಲ್ಕರ ವರೆಗೆ ಜೀರ್ಣವಾಗುವುದರಿಂದ ಗೋಧಿಗಿಂತ ಅಕ್ಕಿ (ಕುಟ್ಟಿದ)ಯೇ ಉತ್ತಮವಾದ ಆಹಾರ.

ಅಲ್ಲದೆ ಗೋಧಿಯ ಹಿಟ್ಟಿನಲ್ಲಿ ಫಾಸ ಫರ್‌ಸ್ ಇರುವುದಿಲ್ಲ ಅಕ್ಕಿಯಲ್ಲಿ ಅದು ಇದೆ ಅದರಿಂದಲೂ ಉತ್ತಮ

ಅದರಲ್ಲಿಯೂ ಕಷ್ಟಪಟ್ಟು ಕೆಲಸಮಾಡುವವರಿಗಂತೂ ಅಕ್ಕಿಯು ಬಹಳ ಉತ್ತಮವಾದುದು ಅಕ್ಕಿಯ ಜೊತೆಯಲ್ಲಿ ತಕ್ಕಷ್ಟು ಬೇಳೆಯನ್ನೂ ತೆಗೆದುಕೊಂಡುದೇ ಆದರೆ ದೇಹಕ್ಕೆ ಬೇಕಾಗುವ ಪದಾರ್ಥಗಳೆಲ್ಲವೂ ಸಿಕ್ಕಿ ದೇಹದ ಪುಷ್ಟಿಯು ಕೆಡದಂತೆ ಕಾಪಾಡಿಕೊಳ್ಳಲು ಸಾಧ್ಯವಾಗುವುದು.

# ಚಿತ್ರಪರಿಚಯ

ಈ ಸಲ ನಾವು ಕೊಟ್ಟಿರುವುದು ಸರ್ ಮಿರ್ಜಾ ಇಸ್ಮೇಯಿಲ್ ಅವರ ಚಿತ್ರ ಇವರು ನಮ್ಮ ಸಂಸ್ಥಾನದ ಸುಪ್ರಸಿದ್ಧ ದಿವಾನರು ಶ್ರೀಮನ್ಮಹಾರಾಜರವರಿಗೆ ಎಷ್ಟು ಮಟ್ಟಿಗೆ ಬೇಕಾದವರೋ ಅವರ ಪ್ರಜೆಗಳಾದ ನಮಗೂ ಅಷ್ಟೇ ಮಟ್ಟಿಗೆ ಬೇಕಾದವರು

ಇವರಿಗೆ ಮೈಸೂರಿನ ಮೇಲೆ ಅಭಿಮಾನ ಬಹಳ ಮೈಸೂರಿಗೆ ಕೀರ್ತಿಯನ್ನು ತರುವ ಅನೇಕಾನೇಕ ಮಹತ್ಕಾರ್ಯಗಳಾದುದು ಇವರ ಕಾಲದಲ್ಲಿ. ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾದ ಕೃಷ್ಣರಾಜ ಸಾಗರದ ಕೆಲಸವು ಮುಗಿದು ಅದರ ಮಗ್ಗುಲಲ್ಲಿ ಬೃಂದಾವನ ವೆಂಬ ಉದ್ಯಾನವು ಏರ್ಪಟ್ಟಿರುವುದು ಇವರ ಕಾಲದಲ್ಲಿ. ಮೈಸೂರು ಬ್ರಿಟಿಷ್ ಸರ ಕಾರಕ್ಕೆ ಕೊಡುತ್ತಿದ್ದ ಪೊಗದಿಯಲ್ಲಿ ಹತ್ತೂವರೆ ಲಕ್ಷವು ಕಡಿಮೆಯಾದುದು ಇವರ ಕಾಲದಲ್ಲಿಯೆ! ಕಾಯದೆ ಕಟ್ಟುಗಳನ್ನುಮಾಡಿಕೊಳ್ಳುವುದರಲ್ಲಿ ಸ್ವಾತಂತ್ರ್ಯವು ಬಂದುದು ಇವರ ಕಾಲದಲ್ಲಿ ಮೈಸೂರು ಇದುವರೆಗೆ ಪಡೆದ ಎಲ್ಲ ದಿವಾನರಿಗಿಂತಲೂ ಕೀರ್ತಿ ಶಾಲಿಗಳಾಗುವ ಅದೃಷ್ಟವು ಇವರದು

ಇವರಿಗೆ ನಮ್ಮ ಮಹಾರಾಜರಿಂದ ಅಮೀರ್ ಉಲ್-ಮುಲ್ಕ್ ಎಂದರೆ ಜಗತ್ತಿನ ಮಿತ್ರ ಎಂಬ ಬಿರುದು ಬಂದಿದೆ. ಹಾಗೆಯೇ ಬ್ರಿಟಿಷ್ ಸಾರ್ವಭೌಮ ಸರ್ಕಾರದಿಂದ ಓ. ಬಿ ಇ, ಕೆ. ಟಿ ಎಂಬ ಬಿರುದುಗಳು ಬಂದಿದ್ದುವು. ಈಗ ಕೆ ಸಿ.ಐ.ಇ., ಎಂಬ ಬಿರುದು ಬಂದಿದೆ. ಇದಕ್ಕಾಗಿ ಇವರನ್ನು ಮೈಸೂರು ಸಂಸ್ಥಾನಕ್ಕೆ ಸಂಸ್ಥಾನವೇ ಅಭಿ ನಂದಿಸುತ್ತಿದೆ ಅಭಿನಂದಿಸುವುದು ಎಂದರೆ ಇತರರಿಗೆ ಉಂಟಾಗಿರುವ ಸಂತೋಷದಲ್ಲಿ ತಾವೂ ಭಾಗಿಗಳಾಗುವುದು.




ಕಳೆದ ತಿಂಗಳು ಬೆಂಗಳೂರಿನಲ್ಲಿ ಒಂದು ಭಾರಿಯ ಸಂಗತಿ ನಡೆಯಿತು. ಆಸ್ಟ್ರೇಲಿಯದಿಂದ ಕ್ರಿಕೆಟ್ ಆಟಗಾರರು ಬಂದಿದ್ದರು. ನಮ್ಮ ಮೈಸೂರಿನ ಪ್ರಸಿದ್ಧರಾದ ಕ್ರಿಕೆಟ ಆಟಗಾರರು ಅವರೊಡನೆ ಆಟವಾಡಿದರು ಆಸ್ಟ್ರೇಲಿಯದವರು ಒಳ್ಳೆಯ ಆಟಗಾರರು. ಆದರೂ ನಮ್ಮ ಕಡೆಯವರು ಅವರೊಡನೆ ಚೆನ್ನಾಗಿ ಆಡಿ ಸಮ ಸಮ ಮಾಡಿಕೊಂಡರು.

ಕ್ರಿಕೆಟ್ ಆಟವನ್ನು ಇಂಡಿಯಕ್ಕೆ ತಂದವರು ಯೂರೋಪಿಯನ್ನರು. ಈಗಲೂ ಆ ದೇಶದವರು ಆಡುವಷ್ಟು ಕ್ರಿಕೆಟ್ ನಮ್ಮವರು ಯಾರೂ ಆಡುವುದಿಲ್ಲ. ಈಚೆಗೆ ನಮ್ಮವರಲ್ಲಿ ಅನೇಕರು ಈ ಆಟದಲ್ಲಿ ಪ್ರಸಿದ್ಧರಾಗಿದ್ದಾರೆ. ಅಷ್ಟೇ ಅಲ್ಲ. ಇಂಗ್ಲೆಂಡ್ ಮೊದಲಾದ ಕಡೆಗಳಿಗೆ ಹೋಗಿಬರುವಷ್ಟು ಗಟ್ಟಿಗರಾಗಿದ್ದಾರೆ ಈ ವರ್ಷ ನಮ್ಮ ಇಂಡಿಯದವರು ಒಂದು ಕ್ರಿಕೆಟ್ ಟೀಂ ತೆಗೆದುಕೊಂಡು ಇಂಗ್ಲೆಂಡ್ ಮೊದಲಾದ ಕಡೆಗಳಿಗೆ ಸಂಚಾರ ಹೊರಡುವವರಾಗಿದ್ದಾರೆ

ಇದೇ ಸಂದರ್ಭದಲ್ಲಿ ಇನ್ನೊಂದು ಮಾತು ನೆನಪಾಯಿತು ನಮ್ಮ ಇಂಡಿಯದಿಂದ "ಹಾಕಿ ಟೀಂ"ವೊಂದು ಪ್ರಪಂಚಯಾತ್ರೆಗೆ ಹೊರಟಿತು. ಅವರು ಪ್ರಪಂಚದ ಪ್ರಸಿದ್ಧ ದೇಶಗಳನ್ನೆಲ್ಲ ಸುತ್ತಿಬಂದರು ದೇಶ ದೇಶಗಳಲ್ಲಿ ಅವರು ಗೆದ್ದು ಕೀರ್ತಿ ಸಂಪನ್ನರಾದರು. ಅವರ ಆಟದ ಸೊಗಸನ್ನು ಕಂಡು ಇತರ ದೇಶಗಳವರು ಬೆರಗಾಗಿ ಹೋದರಂತೆ.

ನಮ್ಮ ಕ್ರಿಕೆಟ್ ಟೀಂ ಕೂಡ ಹಾಕಿ ಟೀಂ ನಂತೆಯೇ ಕೀರ್ತಿಶಾಲಿಗಳಾಗಿ ಬರಲಿ, ಎಂದು ನಾವು ಹಾರೈಸೋಣ.

ಇತಿ, ಅಣ್ಣ

# ಇದು ಯೇನು?

ಹೈ 

ಒಬ್ಬ ರಾಕ್ಷಸವೀರ





ನಮ್ಮ ದೇಶದ ರಾಜಧಾನಿ




ನಮ್ಮ ದೇಶದ ಪ್ರಸಿದ್ಧದುರ್ಗ





ನಮ್ಮ ದೇಶದ ಪ್ರಸಿದ್ಧ ಸರೋವರ

# ಈ ಸ್ಪರ್ಧೆಯ ನಿಯಮಗಳು.

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದ್ದು ೨. ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದ್ದು ೩ ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನ ವನ್ನು ಕೊಡಲಾಗುವುದು ೪ ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಒಂದು ರೂಪಾಯಿ. ಮೂರನೆಯ ಬಹುಮಾನ ಎಂಟಾಣೆ ನಾಲ್ಕನೆಯು ಬಹುಮಾನ:-ಪುಸ್ತಕದ ಬಹುಮಾನ ೨೦. ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದ್ದು. ೬. ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು. ೭. ದಯವಿಟ್ಟು ನಿಮ್ಮ ರಿಜಿಸ್ಟರ್' ನಂಬರನ್ನು ಹಾಕಿರಿ. (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ.) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿ ಗಾಗಿ, ಅದರಿಂದಲೇ ಇಷ್ಟು ಸುಲಭವಾಗಿರುವುದು. ದೊಡ್ಡವರು ಈ ಸ್ಪರ್ಧೆಗೆ ನಿಲ್ಲ ಬಾರದಾಗಿ ಪ್ರಾರ್ಥನೆ.

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | | ೨ | | ೩ |
| | ೪ | | ೫ | |
| ೬ | | ೭ | | ೮ |
| | ೯ | | ೧೦ | |
| ೧೧ | | ೧೨ | | ೧೩ |

ರಿಜಿಸ್ಟರು ನಂಬರು......

............ ...

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ :—

೧-೨-೫ ವಿಸ್ತರಿಸು, ೧-೪-೭ ನೀರಿನ ಮೇಲೆ ಸಂಚಾರಕ್ಕೆ ಬೇಕಾಗುವುದು. ೬-೪ ಬೆಂಕಿ, ೬-೧೧ ನವರತ್ನಗಳಲ್ಲಿ ಒಂದು, ೧-೧೨ ಅಕ್ಕಿ ಹುರಿದ ರೂಪ, ೧೩-೧೨ ಹಕ್ಕಿಯು ಉದುರಿಸುವ ತನ್ನಂಗ, ೮-೧೦-೧೨ ಮೈಸೂರಿನ ದೊಡ್ಡನದಿ, ೮ ೫ ಅರಣ್ಯ, ೬-೯-೧೨ ಬೆಂಗಳೂರಿನ ಆಚೆ ರೈಲ್ವೆಸ್ಟೇಷ

# ಉತ್ತರಗಳು

“ ಇದು ಯೇನು ” ಗೆಉತ್ತರ—ಶಿವಗಂಗೆ, ರಾಜಕೋಟೆ, ಗೋಪಾಲಸ್ವಾಮಿ ಬೆಟ್ಟ, ಬಾಳೆಹೊನ್ನೂರು,

| | | | | |
|---|---|---|---|---|
| ಸಿ ೧ | ✿ | ಯ ೨ | ✿ | ಕೈ ೩ |
| ✿ | ಥ ೪ | ✿ | ರಿ ೫ | ✿ |
| ಹಂ ೬ | ✿ | ದ ೭ | ✿ | ಕೊ ೮ |
| ✿ | ಬ ೯ | ✿ | ನೆ ೧೦ | □ |
| ಪೆ ೧೧ | □ | ಲ ೧೨ | □ | ಮ ೧೩ |

ಒಗಟೆಗಳು—೧ ತೇದ ಶ್ರೀಗಂಧ, ೨ ಮಡಕೆ, ೩ ಕಡೆಗೋಲು, ೪ ಅಮೇರಿಕದಲ್ಲಿ ಆಕಾಶಕ್ಕೆ ಏಣಿ ಹಾಕಬೇಕೆಂದು ಇರುವರಂತೆ.

ಬುದ್ಧಿಯ ಪರೀಕ್ಷೆ—ಈಗ ಉತ್ತರಾಯಣವು ಆರಂಭಿಸಿದೆ. ಅದರಿಂದ ಸೂರ್ಯನು ಉತ್ತರಕ್ಕೆ ಹೋಗುತ್ತಾನೆ ಅದರಿಂದ ನೆರಳು ದಕ್ಷಿಣಕ್ಕೆ ಬೀಳುತ್ತದೆ.

ಬೆರಣಿ ಬೆಂಕಿಯು ಬಹಳ ಬಲವಾಗಿರದೆ ಮಂದವಾಗಿರುತ್ತದೆ. ಅದರಿಂದ ಹಾಲು ಚೆನ್ನಾಗಿ ಕಾದು ಬೆಣ್ಣೆಯು ಚೆನ್ನಾಗಿ ಬರುತ್ತದೆ.



## ಸರ್ ರಾಧಾಕೃಷ್ಣನ್ ಅವರು.

ನಮ್ಮ ಮೈಸೂರಿಗೆ ಪೂರ್ವ, ಉತ್ತರ, ಈಶಾನ್ಯವಾಗಿ ತೆಲುಗರ ಸೀಮೆಯು ಹಬ್ಬಿದೆ. ಅದನ್ನು ಸಂಸ್ಕೃತದಲ್ಲಿ ಆಂಧ್ರದೇಶವೆಂದು ಕರೆಯುತ್ತಾರೆ. ನಮ್ಮ ದೇಶದಲ್ಲಿ ಇರುವಂತೆ ಅಲ್ಲಿಯೂ ಒಂದು ವಿಶ್ವವಿದ್ಯಾನಿಲಯವಿದೆ. ಅದಕ್ಕೆ ಇವರು ವೈಸ್ ಛಾನ್ಸೆಲ್ಲರು

ಇವರು ವೇದಾಂತಶಾಸ್ತ್ರವನ್ನು ಓದಿರುವ ವಿದ್ವಾಂಸರು ನಮ್ಮ ಮೈಸೂರಿನ ಕಾಲೇಜಿನಲ್ಲಿ ಮೂರುವರ್ಷಗಳು ಪ್ರೊಫೆಸರ್ ಆಗಿದ್ದರು ಆ ಮೇಲೆ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಕಿಂಗ್ ಜಾರ್ಜ್ ಪ್ರೊಫೆಸರ್ ಆಗಿದ್ದರು ಈಗ ಇಂಗ್ಲೆಂಡಿನಲ್ಲಿರುವ ಆಕ್ಸ್‌ಫರ್ಡ್‌ಗೆ ಹಿಂದೂವೇದಾಂತದ ಪ್ರೊಫೆಸರ್ ಆಗಿ ಹೋಗುವರು. ಈ ಪದವಿಯನ್ನು ಇದುವರೆಗೆ ಯಾವ ಭಾರತೀಯನೂ ಪಡೆದಿರಲಿಲ್ಲ.

ಇದುವರೆಗೆ ಇವರು ಎರಡು ಸಲ ಜಗತ್ತನ್ನೆಲ್ಲ ಬಳಸಿ ಬಂದಿದ್ದಾರೆ. ಇವರ ಪ್ರತಿಭೆ, ಪಾಂಡಿತ್ಯಗಳನ್ನು ನೋಡಿ ಬೆರಗಾಗದವರೇ ಇಲ್ಲ

# ಗಂಡನನ್ನು ಬದುಕಿಸಿಕೊಂಡ ಹೆಂಡತಿ

ಅಶ್ವಪತಿಯೆಂಬ ಅರಸನು ಮಕ್ಕಳಿಲ್ಲವೆಂದು ಬಹುಕಾಲ ಚಿಂತಿಸುತ್ತಿದ್ದನು. ಕೊನೆಗೆ ಸಾವಿತ್ರೀದೇವಿಯ ಅನುಗ್ರಹದಿಂದ ಆತನಿಗೆ ಒಂದು ಹೆಣ್ಣುಮಗುವಾಯಿತು ಆ ಮಗುವಿಗೆ ಸಾವಿತ್ರೀಯೆಂದೇ ಹೆಸರಿಟ್ಟನು. ಶುಕ್ಲಪಕ್ಷದ ಚಂದ್ರನಂತೆ ಆ ಮಗುವು ದಿನ ದಿನಕ್ಕೆ ವೃದ್ಧಿಯಾಗುತ್ತ ಬಂತು. ಮಗಳು ಹಾಗೆ ಬೆಳೆಯುತ್ತಿರುವುದನ್ನು ಕಂಡು ತಂದೆತಾಯಿಗಳು ಬಹಳ ಸಂತೋಷಪಟ್ಟರು

ಮಗಳಿಗೆ ಮದುವೆಮಾಡುವ ಕಾಲವು ಬರಲು ಅಶ್ವಪತಿ ಮಹಾರಾಜನು ವರನನ್ನು ಹುಡುಕಿಸಿದನು. ಯಾರು ಯಾರು ಹೋಗಿ ಹುಡುಕಿಕೊಂಡು ಬಂದರೂ ಸಾವಿತ್ರಿಗೆ ಸರಿಯಾದ ವರನು ಸಿಕ್ಕಲಿಲ್ಲ ಆದರಿಂದ, ಕೊನೆಗೆ ಸಾವಿತ್ರಿಯು ತಾನೇ ವರನನ್ನು ಹುಡುಕಿಕೊಂಡು ಬರಲು ಹೊರಟಳು.

ಕೊನೆಗೆ ವರನು ಸಿಕ್ಕಿದನು ಆಕೆಯು ಒಪ್ಪಿದ ವರನು ಕಾಡಿನಲ್ಲಿ ತಪಸ್ವಿಗಳಂತೆ ಇದ್ದನು. ಆತನ ತಂದೆಯು ಒಂದು ರಾಜ್ಯದ ಅರಸನಾಗಿದ್ದನು. ಆದರೆ ದಾಯಾದಿಗಳು ಆತನ ರಾಜ್ಯವನ್ನು ಅಪಹರಿಸಿದರು ಆದರಿಂದ ಆತನ ತಂದೆಯು ಕಾಡುಪಾಲಾದನು ಹಾಗೆ ಕಾಡುಪಾಲಾದ ತಂದೆಯನ್ನು ಓಲೈಸಿಕೊಂಡು ಆತನ ಹೆಂಡತಿಯೂ ಮಗನೂ ಇದ್ದುಬಿಟ್ಟರು.

ಆ ವರನ ಹೆಸರು ಸತ್ಯವಾನನೆಂದು ಆತನು ಕಾಡಿನಲ್ಲಿದ್ದರೂ ಸೌಂದರ್ಯ, ವಿದ್ಯೆ ಮೊದಲಾದವುಗಳಲ್ಲಿ ಸಾವಿತ್ರಿಗೆ ತಕ್ಕ ವರನಾಗಿದ್ದನು ಆದರೂ ಅವನಿಗೆ ಒಂದು ಶಾಪವಿದ್ದಿತು. ಆತನಿಗೆ ಮದುವೆಯಾದ ಮೊದಲು ಒಂದು ವರ್ಷಕ್ಕೆ ಸರಿಯಾಗಿ ಮರಣವು ಒದಗಲೆಂದು ಶಾಪ ಆತನನ್ನು ವರಿಸುವಾಗ ಸಾವಿತ್ರಿಗೆ ಆ ವಿಷಯವು ತಿಳಿಯದು ಆತನನ್ನು ಒಪ್ಪಿ ಬಂದು ತಂದೆತಾಯಿಗಳಿಗೆ ಈ ವಿಷಯವನ್ನು ತಿಳುಹಿಸಿದಳು. ಅವರೂ ಒಪ್ಪಿದರು ಮದುವೆಯು ಎಂದು ನಡೆಯುವುದು ಎಂಬುದೂ ನಿಶ್ಚಯವಾಗಿದೆ ಆಗ ನಾರದರು ಬಂದು ಈ ವಿಷಯವನ್ನು ತಿಳಿಸಿದರು

ಸಾವಿತ್ರಿಗೆ ಏನು ಮಾಡಬೇಕೋ ತಿಳಿಯಲಿಲ್ಲ. ಒಂದು ಗಳಿಗೆ ಹಾಗೆಯೇ ಯೋಚಿಸಿ ನಾರದರನ್ನೇ ಕೇಳಿದಳು ಆ ಹುಡುಗಿಯು ಅಷ್ಟು ವಿಶ್ವಾಸದಿಂದ ಆತನನ್ನು ವರಿಸಿರುವುದನ್ನು ತಿಳಿದು ನಾರದರೂ ಕನಿಕರಪಟ್ಟರು. ಕೊನೆಗೆ "ಮಗಳೇ! ತಪಸ್ವಿಗೆ

ಸಾಧ್ಯವಾಗದಿದ್ದುದು ಯಾವುದೂ ಇಲ್ಲ. ಅದರಿಂದ ತಪಸ್ಸುಮಾಡು ದೈವವು ನಿನಗೆ ಒಲಿಯುವುದು" ಎಂದು ಹೇಳಿಕೊಟ್ಟರು. ಸಾವಿತ್ರಿಯು ಧೈರ್ಯದಿಂದ ಸತ್ಯವಾನನನ್ನೇ ಮದುವೆಯಾದಳು

ಮದುವೆಯಾಗುತ್ತಲೂ ಆಕೆಯು ಗಂಡನ ಆಶ್ರಮಕ್ಕೆ ಬಂದುಬಿಟ್ಟಳು. ಅಲ್ಲಿ ನಿತ್ಯವೂ ಆಕೆಯು ಅಶ್ವತ್ಥಪೂಜೆಯನ್ನು ಮಾಡುವಳು ಆ ಅಶ್ವತ್ಥಪೂಜೆಯ ಪುಣ್ಯದಿಂದ ಆಕೆಯಲ್ಲಿ ಮಹತ್ತರವಾದ ಪ್ರಭಾವವುಂಟಾಯಿತು. ಋಷಿಗಳೂ ಆಕೆಯನ್ನು ಗೌರವಿಸುವಂತಾಯಿತು ಆಕೆಯು ಪತಿಯನ್ನೂ ಪತಿಯ ಮಾತಾಪಿತೃಗಳನ್ನೂ ಬಹು ಭಕ್ತಿಯಿಂದ ಸೇವಿಸುತ್ತಿದ್ದಳು. ಆಕೆಯ ಭಕ್ತಿಯಿಂದ ದೇವಾದಿದೇವತೆಗಳೂ ತೃಪ್ತರಾದರು.

ಕೊನೆಗೆ ಸತ್ಯವಾನನ ಮರಣ ದಿವಸವು ಸಮೀಪಿಸಿತು. ಸಾವಿತ್ರಿಯು ಸೂರ್ಯೋದಯದ ವೇಳೆಗೇ ಅಶ್ವತ್ಥಪೂಜೆಯನ್ನು ಮುಗಿಸಿಕೊಂಡಳು. ಒಂದು ಗಳಿಗೆಯೊಳಗಾಗಿ ಮನೆಕೆಲಸವನ್ನೆಲ್ಲ ಮುಗಿಸಿಕೊಂಡಳು. ದಿನ ದಿನವೂ ಆಕೆಯ ಗಂಡನು ಸೌದೆ, ದರ್ಭೆ ಮೊದಲಾದವುಗಳಿಗಾಗಿ ಅರಣ್ಯಕ್ಕೆ ಹೋಗಿ ಬರುತ್ತಿದ್ದಂತೆ ಆ ದಿನವೂ ಹೊರಟನು. ಆ ದಿನವು ಎಂತಹ ದುರ್ದಿನವೆಂಬುದು ಆಕೆಗೆ ಗೊತ್ತು. ಅದರಿಂದ ಆದುದಾಗಲಿ ಆ ದಿನವೆಲ್ಲ ಆತನ ಜೊತೆಯಲ್ಲಿಯೇ ಇದ್ದು ಬಿಡಬೇಕೆಂದು ಆಕೆಯು ಮನಸ್ಸುಮಾಡಿ ಆತನೊಡನೆ ಹೊರಟಳು

ಮೊದಮೊದಲು ಸತ್ಯವಾನನು ಆಕೆಯನ್ನು ಕಾಡಿಗೆ ಕರೆದುಕೊಂಡು ಹೋಗಲು ಸಮ್ಮತಿಸಲಿಲ್ಲ ಆಕೆಯು ಏನು ಹೇಳಿದರೂ ಕೇಳದೆ ಹಟ ಹಿಡಿದಿರುವುದನ್ನು ಕಂಡು ಆಗಲಿ ಬಾ ಎಂದು ಕರೆದುಕೊಂಡು ಹೋದನು

ಗಂಡಹೆಂಡಿರಿಬ್ಬರೂ ಇನ್ನೂ ಎಳೆಯ ಪ್ರಾಯದವರು. ಗಂಡನು ಅಲ್ಲಲ್ಲಿ ಬೆಳೆದಿರುವ ಹೂಗಳನ್ನಾಯ್ದುತಂದು ಹೆಂಡತಿಗೆ ಮುಡಿಸುವನು. ಕಾಡುಹಣ್ಣುಗಳನ್ನು ಕಿತ್ತು ತಂದು ತಿನ್ನೆಂದು ಬಲವಂತಮಾಡುವನು. ಆಕೆಗೋ ಆ ಹೂವು ಹಣ್ಣುಗಳು ಬೇಡ. ಮೃತ್ಯು ಎಲ್ಲಿ ಮರೆಸಿ ಬಂದು ಬಿಡುವುದೋ ? ತನ್ನ ಗಂಡನು ಏನಾಗುವನೋ ? ಎಂದು ಅಂಜಿ ಅತ್ತಿಯ ಕಾಯಾಗಿದ್ದಳು ಆಕೆ ಈ ಹೂವು ಹಣ್ಣುಗಳನ್ನು ಏನು ಕಟ್ಟಿಕೊಂಡಾಳು? ಆದರೂ ಗಂಡನಿಗೆ ಅಸಮಾಧಾನವಾದೀತು ಎಂದು, ನಗೆಯು ಬರದಿದ್ದರೂ ನಗುತ್ತ ಆತನೊಡನೆ ಹೋದಳು.

ಅವರು ಒಂದು ಮರದ ಬಳಿಗೆ ಬಂದರು. ಅಲ್ಲಿ ಒಂದು ಕೊಂಬೆಯು ಒಣಗಿ ನಿಂತಿತ್ತು ಅದನ್ನು ಕಡಿದು ತೆಗೆದುಕೊಂಡು ಹೋದರೆ ಎರಡು ಮೂರು ದಿನದ ಸೌದೆ

ಯಾಗುವುದೆಂದು ಸತ್ಯವಾನನು ಮರವನ್ನು ಹತ್ತಿದನು ಕೊಂಬೆಯನ್ನು ಕಡಿಯುತ್ತಿದ್ದಾಗ ಆತನಿಗೆ ಏಕೋ ಏನೋ ಬಳಲಿಕೆಯುಂಟಾಗಿ ಕೈಸೋತು ಹೋಯಿತು. ಹಿಡಿದಿದ್ದ ಕೊಡಲಿಯು ಜಾರಿಬಿದ್ದು ಹೋಯಿತು. ನಿಂತಿದ್ದ ನಿಲುವು ತಪ್ಪಿ ಆತನೂ ಕೆಳಕ್ಕೆ ಬಿದ್ದುಹೋದನು. ಸಾವಿತ್ರಿಯು ಮೈಯೆಲ್ಲಾ ಕಣ್ಣಾಗಿ ಕಾಯುತ್ತಿದ್ದವಳು ಬಂದು ತಟ್ಟನೆ ಹಿಡಿದುಕೊಂಡಳು ಆದರೂ ಸತ್ಯವಾನನಿಗೆ ಆಯಾಸವು ಹೆಚ್ಚುತ್ತ ಬಂದಿತು. ಸುಮಾರು ಸಂಜೆಯ ವೇಳೆಗೆ ಸತ್ಯವಾನನು ಕಣ್ಣುಮುಚ್ಚಿಬಿಟ್ಟನು. ದೇಹವು ತಣ್ಣಗಾಗುತ್ತ ಬಂದಿತು ಸಾವಿತ್ರಿಗೆ ಅರ್ಥವಾಯಿತು. ಗಂಡನು ಏನಾದನು ಎಂಬುದನ್ನು ತಿಳಿದಳು ಕಲ್ಲುಮರಗಳೂ ಕರಗುವಂತೆ ಕಾಡಿಗೆ ಕಾಡೇ ಅಯ್ಯೋ ಎಂದು ಗೋಳಿಡುವಂತೆ ಆಕೆಯು ಅತ್ತು ಅತ್ತು ಅತ್ತಳು ದುಃಖದಿಂದ ಆಕೆಗೆ ಮೂರ್ಛೆಬಂದುಬಿಟ್ಟಿತು

ಮೂರ್ಛೆ ತಿಳಿದು ಎದ್ದು ಕಣ್ಣುಬಿಡುವ ವೇಳೆಗೆ ಎದುರಿಗೆ ಭಯಂಕರವಾದ ಆಕೃತಿಯೊಂದು ನಿಂತಿದ್ದಿತು. ಮೇಘದಂತೆ ನೀಲವಾದ ಮೈಬಣ್ಣ. ನಿಗಿ ನಿಗಿಸುವ ನೀಲದ ರತ್ನಾಭರಣಗಳು. ಕಣ್ಣೆತ್ತಿ ಮುಖವನ್ನು ನೋಡಲಾಗದಂತಹ ತೇಜಸ್ಸು, ಪಕ್ಕದಲ್ಲಿ ಕೋಣವು ನಿಂತಿದೆ. ಒಂದು ಕೈಯಲ್ಲಿ ಪಾಶವನ್ನು ಹಿಡಿದಿದ್ದಾನೆ ಇನ್ನೊಂದು ಕೈಯಲ್ಲಿ ಗದೆಯನ್ನು ಹಿಡಿದಿದ್ದಾನೆ.

ಆತನು ಯಾರೆಂಬುದನ್ನು ತಿಳಿಯುವುದು ಸಾವಿತ್ರಿಗೆ ಕಷ್ಟವಾಗಲಿಲ್ಲ. ಆತನೇ ಸಾವಿತ್ರಿಯನ್ನು ಮಾತನಾಡಿಸಿದನು : “ ಮಗಳೇ ! ನಾನು ಯಮಧರ್ಮರಾಜನು ನಿನ್ನ ಗಂಡನ ಪ್ರಾಣವನ್ನು ತೆಗೆದುಕೊಂಡು ಹೋಗಲು ಬಂದಿರುವೆನು ನನ್ನ ದೂತರನ್ನು ಕಳುಹಿಸಿದ್ದೆನು ಅವರು ನಿನ್ನ ಪಾತಿವ್ರತ್ಯದ ಪ್ರಭಾವದಿಂದ ನಿಮ್ಮ ಆಶ್ರಮದೊಳಕ್ಕೂ ಬರಲಾರದೆ ಓಡಿಬಂದರು. ನಾನೇ ಬಂದಿರುವೆನು ನಿನ್ನ ಗಂಡನನ್ನು ಒಪ್ಪಿಸು ” ಎಂದನು.

ಸಾವಿತ್ರಿಯು ಇನ್ನು ಅತ್ತು ಫಲವಿಲ್ಲವೆಂದು ತಿಳಿದು ಅಳುವನ್ನು ಬಿಟ್ಟು ಎದ್ದು ಆತನಿಗೆ ವಂದಿಸಿದಳು. ಯಮಧರ್ಮನು ಸತ್ಯವಾನನ ಪ್ರಾಣವನ್ನು ಸೆಳೆದುಕೊಂಡು ಹೊರಟನು. ಸಾವಿತ್ರಿಯು ಯಮನನ್ನು ಸ್ತುತಿಮಾಡುತ್ತ ಆತನ ಹಿಂದೆ ಹೊರಟಳು. ಯಮಧರ್ಮನು ನಿಂತು “ ತಾಯಿ ! ನಿನ್ನ ಸ್ತುತಿಗೆ ಮೆಚ್ಚಿರುವೆನು ನಿನಗೆ ಒಂದು ವರವನ್ನು ಕೊಡುವೆನು. ನಿನ್ನ ಪತಿಯ ಪ್ರಾಣವನ್ನು ಬಿಟ್ಟು ಇನ್ನು ಏನಾದರೂ ಕೇಳು ಕೊಡುವೆನು. ಬದುಕಿರುವವರು ಯಾರೂ ನನ್ನ ಲೋಕಕ್ಕೆ ಬರಲು ಆಗುವುದಿಲ್ಲ. ” ಎಂದನು. ಸಾವಿತ್ರಿಯು ಆತನಿಗೆ ವಂದಿಸಿ “ ಪೂಜ್ಯನಾದ ಧರ್ಮರಾಜನೆ ! ನಮ್ಮ ಅತ್ತೆಮಾವಂದಿರು ಮುದುಕರು. ಅವರಿಗೆ ಇದ್ದುದು ಒಬ್ಬನೇ ಮಗ ಆದರಿಂದ ಈಗ ಅವರು ಬಹುದುಃಖಪಡುವರು ಅವರಿಗೆ ಆ ದುಃಖವಿಲ್ಲದಂತೆ ಮಾಡು ” ಎಂದು ಕೇಳಿಕೊಂಡಳು

ಯಮನು ಆಕೆಯು ಬೇರೆ ರೀತಿಯಾಗಿ ಗಂಡನನ್ನೇ ಕೇಳುತ್ತಿರುವುದನ್ನು ಅರಿತು ಕೊಂಡನು ಆದರೂ ತನಗಾಗಲಿ ತನ್ನವರಿಗಾಗಲೀ ವರವನ್ನು ಕೊಡು ಎಂದು ಕೇಳದೆ ಅತ್ತೆಮಾವಂದಿರ ಯೋಗಕ್ಷೇಮವನ್ನು ಕುರಿತು ಚಿಂತಿಸಿದಳೆಂದು ಆತನಿಗೆ ಸಂತೋಷ ವಾಗಿ "ಮಗಳೇ! ನಿಮ್ಮ ಅತ್ತೆಮಾವಂದಿರಿಗೆ ಮತ್ತೆ ರಾಜ್ಯ, ಐಶ್ವರ್ಯಾದಿಗಳು ಲಭಿಸಿ ಮುಂಚಿನಂತೆಯೇ ಸಂತೋಷವಾಗಿರುವರು" ಎಂದು ವರವನ್ನು ಕೊಟ್ಟು ಮುಂದೆ ಹೊರಟನು.

ಸಾವಿತ್ರಿಯೂ ಆತನ ಹಿಂದೆಯೇ ಹೊರಟಳು. ಆಕೆಯು ಆ ವರ್ಷವೆಲ್ಲಾ ಮಾಡಿದ್ದ ತಪಸ್ಸಿನ ಫಲವಾಗಿ ಆಕೆಗೆ ಯಮನ ಹಿಂದೆ ಹೋಗುವ ಶಕ್ತಿಯು ಬಂದಿತ್ತು. ಹಾಗೆ ಮತ್ತೆಯೂ ಹಿಂದೆ ಹಿಂದೆ ಬರುತ್ತಿರುವ ಸಾವಿತ್ರಿಯನ್ನು ನಿಲ್ಲು ಎಂದು ಯಮನು ಆಜ್ಞಾಪಿಸಿದನು. ಆಕೆಯು "ಪ್ರಭುವೆ! ಧರ್ಮವನ್ನು ನಿನಗಿಂತಲೂ ಚೆನ್ನಾಗಿ ಅರಿತವ ರಿಲ್ಲ ನೀನೇ ಹೇಳು ನಾನು ಸತಿಯಾಗಿ ಪತಿಯನ್ನು ಅನುಸರಿಸಿ ಬರಬೇಡವೇ? ನನ್ನ ಪತಿಯು ನಿನ್ನೊಡನೆ ಇರಲು ನಾನು ಹೇಗೆ ಹಿಂದಕ್ಕೆ ಹೋಗಲಿ?" ಎಂದಳು.

ಆ ಮಾತನ್ನು ಕೇಳಿ ಯಮಧರ್ಮನಿಗೆ ಬಹುಸಂತೋಷವಾಯಿತು. ಆಕೆಯ ಧರ್ಮಬುದ್ಧಿಯನ್ನು ಮೆಚ್ಚಿ "ಮಗಳೆ! ಚೆನ್ನಾಗಿ ಹೇಳಿದೆ ಇನ್ನೂ ಒಂದು ವರವನ್ನು ಕೇಳು ಪತಿಯನ್ನು ಮಾತ್ರ ಕೇಳಬೇಡ" ಎಂದನು. ಆಕೆಯು "ಧರ್ಮರಾಜನೆ! ನನ್ನ ತಂದೆಗೆ ಪುತ್ರರಿಲ್ಲ ಆದರಿಂದ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಂದಲೇ ಅವ ರಿಗೆ ಸದ್ಗತಿಯಾಗಬೇಕು ಅವರಿಗೆ ಸದ್ಗತಿಯಾಗುವಂತೆ ಅನುಗ್ರಹಿಸು" ಎಂದಳು.

ಯಮನು ಈ ಸಲವೂ ಆಕೆಯ ಅಭಿಪ್ರಾಯವೇನು ಎಂಬುದನ್ನು ಗೊತ್ತುಮಾಡಿ ಕೊಂಡನು. ನಗುನಗುತ್ತ "ಸಾಧ್ವೀಮಣಿಯೆ! ಹಾಗೆಯೇ ಆಗಲಿ ನಿನ್ನ ತಂದೆಗೆ ಹತ್ತು ಜನರು ಸುಪುತ್ರರಾಗಲಿ" ಎಂದು ವರವನ್ನು ಕೊಟ್ಟು ಮುಂದೆ ತೆರಳಿದನು

ಸಾವಿತ್ರಿಯು ಮತ್ತೆಯೂ ಆತನನ್ನು ಹೊಗಳುತ್ತ ಹಿಂದೆ ಹೊರಟಳು. ಯಮನು ಮೂರನೆಯ ಸಲವೂ ನಿಲ್ಲು ಎಂದನು. ಅದಕ್ಕೆ ಆಕೆಯು "ಸ್ವಾಮಿಯೆ! ಅತ್ತೆ ಮಾವಂದಿರು ಸುರಕ್ಷಿತರಾಗಿರುವರು. ತಂದೆತಾಯಿಗಳಿಗೆ ಸದ್ಗತಿಯು ಲಭಿಸಿತು ಇನ್ನು ನಾನು ಭೂಲೋಕಕ್ಕೆ ಏಕೆ ಹೋಗಬೇಕು? ಪತಿಯೊಡನೆಯೇ ಇರಲು ಅಪ್ಪಣೆಯಾಗ ಬೇಕು" ಎಂದು ಸಾಷ್ಟಾಂಗ ನಮಸ್ಕಾರಮಾಡಿದಳು

ಯಮಧರ್ಮರಾಜನಿಗೆ ಅಪಾರವಾದ ಆನಂದವಾಯಿತು ಆ ಆನಂದದಲ್ಲಿ "ಮಗಳೇ! ನೀನು ಪುಣ್ಯವಂತೆ! ನಿನಗೆ ಬೇಕಾದ ವರವನ್ನು ಕೇಳು ಕೊಡುವೆನು" ಎಂದನು. ಸಾವಿತ್ರಿಯು ಹೆದಹೆದರಿ ಹೆದರುತ್ತ "ಸ್ವಾಮಿಯೆ! ನೀನು ವರವನ್ನು

ಕೊಡುವುದಾದರೆ ನನಗೆ ನೂರು ಮಕ್ಕಳಾಗುವಂತೆ ಅನುಗ್ರಹಿಸು. ನಾನು ಪತಿವ್ರತೆಯಾಗಿರುವೆಂತೆ ಆಶೀರ್ವದಿಸು" ಎಂದು ಬೇಡಿಕೊಂಡಳು.

ಯಮಧರ್ಮರಾಜನು ಆಗಲೆಂದನು. ತಾನು ಕೊಟ್ಟವರವನ್ನು ಕಾಪಾಡಿಕೊಳ್ಳಲು, ಸತ್ಯವಾನನ ಜೀವವನ್ನು ಆಕೆಗೆ ಹಿಂದಿರುಗಿಕೊಟ್ಟನು. ಆಕೆಯನ್ನು ಅವಳ ಗಂಡನಿದ್ದ ಎಡೆಗೆ ತಾನೇ ಕರೆತಂದು ಬಿಟ್ಟು ತಾನು ತನ್ನ ಲೋಕಕ್ಕೆ ಹೋದನು.

ಸತ್ಯವಾನನು ಎದ್ದು ಕುಳಿತು ತಾನೊಂದು ಕನಸು ಕಂಡೆನೆಂದು ನಡೆದುದೆಲ್ಲವನ್ನೂ ಹೆಂಡಿತಿಗೆ ಹೇಳಿದನು. "ಅದೆಲ್ಲವೂ ಕನಸೇ ಆಯಿತು. ಇನ್ನು ಸಂತೋಷದಿಂದ ಆಶ್ರಮಕ್ಕೆ ಹೋಗೋಣ" ಎಂದು ಹೆಂಡತಿಯು ಗಂಡನೊಡನೆ ಆಶ್ರಮಕ್ಕೆ ಬಂದಳು.

ಯಮಧರ್ಮರಾಜನ ವರದಂತೆ ಸತ್ಯವಾನನ ತಂದೆಗೆ ರಾಜ್ಯವು ಬಂದಿತು! ಸಾವಿತ್ರಿಯ ತಂದೆಗೆ ಸುಪುತ್ರರಾದರು.

ಸಾವಿತ್ರಿಯೂ ಗಂಡನೊಡನೆ ನೂರಾರುವರ್ಷಸುಖಸಂತೋಷಗಳಿಂದ ಬಾಳಿದಳು





## ಶ್ರೀ ಎ. ಎನ್. ರಾಘವಾಚಾರ್ಯರು

ಇವರು ಮೈಸೂರು ಸರ್ಕಾರದಲ್ಲಿ ಕಂಟ್ರೋಲರ್ ಆಗಿದ್ದಾರೆ. ಕಂಟ್ರೋಲರ್ ಎಂದರೆ ಹಣಕಾಸುಗಳ ಖರ್ಚು ನಡೆದುದು ಸರಿಯಾಗಿದೆಯೋ ಇಲ್ಲವೇ ಎಂದು ನೋಡುವವರು. ಇವರು ಬಹಳ ಪ್ರಸಿದ್ಧವಾದ ಆಂಡಾಪುರಂ ರಂಗಾಚಾರ್ಯರೆಂಬ ಶ್ರೀಮಂತ ವಂಶದವರು. ಹಿಂದಿನ ದೊಡ್ಡ ದೊರೆಗಳ ಕಾಲದಲ್ಲಿಯೇ ಇವರ ಹಿರಿಯರು ಪ್ರಸಿದ್ಧರಾಗಿದ್ದರು. ಶ್ರೀಮಂತರಿಗೆ ಸಹಜವಾದ ಬಾಯಿತುಂಬ ಮಾತನಾಡುವುದು, ಎಲ್ಲರಲ್ಲಿಯೂ ವಿಶ್ವಾಸದಿಂದ ನಡೆದುಕೊಳ್ಳುವುದು, ಮೊದಲಾದ ಅನೇಕಾನೇಕ ಸದ್ಗುಣಗಳು ಇವರಲ್ಲಿ ಉಂಟು

ಇವರು ಉದಾರಿಗಳು ಮತ್ತು ದೇಶದ ಹಿತಕ್ಕಾಗಿ ನಡೆಯುವ ಕೆಲಸಗಳಿಗಾಗಿ ಬೇಕಾದಷ್ಟು ಸಹಾಯಮಾಡುವವರು. ಇವರಿಗೆ ನಮ್ಮ ಮಕ್ಕಳ ಪುಸ್ತಕದಲ್ಲಿ ಬಹಳ ಅಭಿಮಾನ, ಅದು ಚೆನ್ನಾಗಿ ವರ್ಧಿಸಿ ಯಶಸ್ವಿಯಾಗಿ ಬಾಳಲಿ ಎಂದು ಆಶೀರ್ವಾದ ಮಾಡಿದ್ದಾರೆ ಮತ್ತು ನೂರು ರೂಪಾಯಿಗಳನ್ನು ಕೊಟ್ಟು ಸಹಾಯಮಾಡುವುದಾಗಿ ವಾಗ್ದಾನಮಾಡಿದ್ದಾರೆ

ಇಂತಹ ಮಹನೀಯರು ಹೆಚ್ಚಲಿ. ಇಂತಹ ಉದಾರಿಗಳಿಗೆ ದೇವರು ಐಶ್ವರ್ಯ ಕೀರ್ತಿ, ಪದವಿಗಳನ್ನು ದಯಪಾಲಿಸಲಿ ಎಂದು ಮಕ್ಕಳ ಪುಸ್ತಕ ಓದುವವರೆಲ್ಲ ಹರಕೆಯನ್ನು ಹೊರಿ

# ಒಗಟೆ

---

೧ ಹುಟ್ಟುತ್ತ ಹರಿದೋಡಿ ಗಂಡನ ಹೊಟ್ಟೆಗೆ ದಿಂಡಾದವಳು ಯಾರು ?

೨ ಹಸಿಯಾದರೆ ಹೊಗೆ, ಒಣಗಿದರೆ ಬೆಳಕು.

೩ ನೋಡೋವಾಗ ಒಂದು : ನೋಡದಿದ್ದಾಗಲೂ ಒಂದು : ತಿವಿದು ನೋಡಿದರೆ ಎರಡು.

೪ ಹೋಳುಮಾಡಿ ತಿಂದರೆ ಹೊಟ್ಟೆ ತುಂಬ: ಹಾಗೇ ಇಟ್ಟರೆ ಗೂಡೇ ತುಂಬ.

೫ ಮುಸುಕಿಟ್ಟುಕೊಂಡು ಮಲಗಿದ ಪ್ಪನ್ನ ಎಬ್ಬಿಸೋಕೆ ಬಂದ ಒನಕೆ ರಾಯ

೬ ಅಪ್ಪ ಅಂದರೆ ಸೇರಿತು ಅತ್ತೆ ಅಂದರೆ ಬಿಟ್ಟಿತು.

# ವಿನೋದ

೧ ಉಪಾಧ್ಯಾಯ :—ಮೂಗೂರು ಎಲ್ಲಿದೆ ?

ಶಿಷ್ಯ :—ಬಾಯೂರು ಮೇಲೆ ಸಾರ್,

೨ ಉಪಾ :—ನೀಲುವಂಗಿ ಎಂದರೇನು ?

ಶಿಷ್ಯ:—ಮೂಲಂಗಿ ಹಾಗೆ ಅದೂ ಒಂದು ತರಕಾರಿ ಸಾರ್,

---

ಬಂಗಾಳದಲ್ಲಿ ಮೈಮನ್‌ಸಿಂಗ್ ಜಿಲ್ಲೆಯಲ್ಲಿ ರಾಧಾಕಾಂತಪುರ ಎಂಬ ಹಳ್ಳಿ ಅಲ್ಲಿ ಒಬ್ಬ ಬ್ರಾಹ್ಮಣ ಹುಡುಗನು ಅಸಾಧ್ಯರೋಗದಿಂದ ನರಳುತ್ತಿದ್ದನು. ಅವನಿಗೆ ಒಂದು ಕನಸಾಯಿತು ಅದರಲ್ಲಿ ಒಬ್ಬ ದೇವಿಯು ಕಾಣಿಸಿಕೊಂಡು, ತಾನು ಹೊಳೆಯಲ್ಲಿ ಬಿದ್ದಿರುವುದಾಗಿಯೂ ತನ್ನನ್ನು ಕರೆತಂದು ಪೂಜೆಮಾಡಬೇಕೆಂದೂ ಹೇಳಿದಂತಾಯಿತು. ಮರುದಿನ ಅವನು ಹೊಳೆಗೆ ಹೋಗಿ ಹುಡುಕಲು ಒಂದು ಅಮೃತ ಶಿಲೆಯ ವಿಗ್ರಹವು ದೊರೆಯಿತು ಅವನು ಅದನ್ನು ಮನೆಗೆ ತಂದು ಪೂಜೆಮಾಡುತ್ತಿದ್ದಾನೆ ಅವನ ರೋಗವು ಔಷಧವೇನೂ ಇಲ್ಲದೆ ಗುಣವಾಗಿದೆ

# ಮೆಣಸು

ನಮ್ಮಲ್ಲಿ ಮೆಣಸು ಕಾಣದಿದ್ದವರು ಇಲ್ಲ. ಆದರೆ ಈ ಮೆಣಸಿನಿಂದ ಪ್ರಪಂಚದ ಚರಿತ್ರೆಯೆಲ್ಲಾ ಹೇಗೆ ಬದಲಾಯಿಸಿ ಹೋಗಿದೆ ಎಂಬುವುದನ್ನು ಬಲ್ಲವರು ಅನೇಕರಿಲ್ಲ. ಒಂದುವರ್ಷಕ್ಕೆ ಸುಮಾರು ೩೦ ಸಾವಿರ ಟನ್ (೧ ಟನ್ ಎಂದರೆ ಸುಮಾರು ೮೦ ಮಣ) ಮೆಣಸು ಪ್ರಪಂಚಕ್ಕೆ ಬೇಕಾಗುವುದು ಎಂಬುದನ್ನು ಗುರ್ತಿಸಿರುವವರಂತೂ ಅತಿವಿರಳ.

ಇದು ಪ್ರಪಂಚದಲ್ಲಿ ಅತಿಪ್ರಾಚೀನಕಾಲದಿಂದಲೂ ಬಳಕೆಯಲ್ಲಿದೆ. ಹಿಪೊಕ್ರೆಟೆಸ್ ಎಂಬ ಗ್ರೀಸ್ ವೈದ್ಯನು ಇದನ್ನು ಔಷಧಿಗಳಲ್ಲಿ ಸೇರಿಸಿದ್ದಾನೆ. ಶುಂಠಿ, ಮೆಣಸು ಅಳಲೇ ಕಾಯಿ, ಇವು ಆಯುರ್ವೇದ ಹುಟ್ಟಿದಲಾಗಾಯಿತು ಔಷಧವಾಗಿ ಉಪಯೋಗ ವಾಗುತ್ತಿವೆ.

೧೫ನೆಯ ಶತಮಾನದಲ್ಲಿ ಈ ಮೆಣಸಿನ ಮೇಲಿನ ಆಸೆಗಾಗಿ ಪೋರ್ಚುಗೀಸರು ಇಂಡಿಯಾಕ್ಕೆ ಒಂದು ದಾರಿಯನ್ನು ಹುಡುಕಿಕೊಂಡು ಗುಡ ಹೋಪ್ ಭೂಶಿರವನ್ನು ಬಳಸಿಕೊಂಡುಬಂದರು ಇಂಡಿಯಾದಲ್ಲಿ ಯೂರೋಪಿನರು ಬಂದು ನೆಲಸುವುದಕ್ಕೆ ಮೆಣಸು ಕಾರಣವಾಯಿತು ಈ ಮೆಣಸಿನ ರುಚಿಯು ಯೂರೋಪಿಯನರಿಗೆ ತಿಳಿಯದೇ ಹೋಗಿದ್ದರೆ ಇಂಡಿಯಾದಲ್ಲಿ ಬ್ರಿಟಿಷರ ಸಾಮ್ರಾಜ್ಯವು ಸ್ಥಾಪಿತವಾಗುತ್ತಿದ್ದಿತೋ ಇಲ್ಲವೋ. ಹೇಳಲಸಾಧ್ಯ

೧೬ನೆಯ ಶತಮಾನದ ಕೊನೆಯ ಭಾಗದಲ್ಲಿ ಯೂರೋಪಿಗೆ ಹೋಗುವ ಮೆಣಸಿನ ವ್ಯಾಪಾರವೆಲ್ಲವೂ ಡಚ್ ವರ್ತಕರ ಕೈಯ್ಯಲ್ಲಿತ್ತು ಅವರು ಒಂದು ಪೌಂಡು ಮೆಣಸಿಗೆ ಮೂರು ಷಿಲಿಂಗು ಎಂಟು ಪೆನ್ನಿ ಮಾಡಿಬಿಟ್ಟರು. ಆ ಹೆಚ್ಚಿನ ಧಾರಣೆಯನ್ನು ಕೊಟ್ಟು ಕೊಂಡುಕೊಳ್ಳಲು ಹಿಂತೆಗೆದು ಇಂಗ್ಲಿಷ್ ವರ್ತಕರು ಮೆಣಸಿನ ವ್ಯಾಪಾರ ಮಾಡಲು ತಾವೇ ಒಂದು ಕಂಪೆನಿಯನ್ನು ಮಾಡಿಕೊಂಡರು ಅದೇ ಇಸ್ಟ್ ಇಂಡಿಯಾ ಕಂಪೆನಿ ೧೬೦೦ ರಲ್ಲಿ ಆ ದೇಶದಲ್ಲಿ ರಾಣಿಯಾಗಿದ್ದ ಎಲಿಸಬೆತಳಿಂದ ಅವರಿಗೆ ರಹದಾರಿಯು ಸಿಕ್ಕಿತು ಅವರು ಇಂಡಿಯಾಕ್ಕೆ ಬಂದು ವ್ಯಾಪಾರಕ್ಕೆ ಆರಂಭಿಸಿದರು ಮುಂದಿನ ಕಥೆ ಎಲ್ಲರಿಗೂ ಗೊತ್ತು

ಇದರಲ್ಲಿ ಬಿಳಿಮೆಣಸು ಕರಿಮೆಣಸು, ಬಾಲಮೆಣಸು ಇರುವಂತೆಯೇ, ಕಾಡು ಮೆಣಸೂ ಒಂದಿದೆ ಮೆಣಸನ್ನು ಸಾಮಾನ್ಯವಾಗಿ ಆಹಾರಪದಾರ್ಥಗಳ ಜತೆಯಲ್ಲಿ ಉಪಯೋಗಿಸುತ್ತಾರೆ.

ಸುಮಾರು ಮೂರು ಸಾವಿರ ವರ್ಷಗಳಿಂದ ಇಂಡಿಯಾದಲ್ಲಿ ಮೆಣಸು ಬೆಳೆಯುತ್ತಿದೆ ಈಚೀಚೆಗೆ ಸುಮಾರು ನೂರುವರ್ಷಗಳಿಂದ ಬೇರೆ ಬೇರೆ ದೇಶಗಳಲ್ಲಿ, ಮುಖ್ಯವಾಗಿ ಬ್ರಿಟಿಷ ಮಲಯಾ, ಡಚ ಈಸ್ಟ್ ಇಂಡೀಸ್, ಇಲ್ಲಿ ಮೆಣಸಿನ ಬೆಳೆಯನ್ನು ಮಾಡುತ್ತಿದ್ದಾರೆ

ಆ ಮೆಣಸಿನಲ್ಲಿರುವ ಕರೀತೊಗಟೆಯಿಂದಲೇ ಅದರಲ್ಲಿರುವ ಖಾರ ಮತ್ತು ರುಚಿ

# ಸ್ಕೌಟ್ ಚಳುವಳಿ

ನಮ್ಮ ದೇಶದಲ್ಲಿ ಸ್ಕೌಟ್ ಎಂದರೇನು ಎಂಬುದನ್ನು ಕಾಣದವರೇ ಇಲ್ಲ. ಸ್ಕೌಟ್ ಚಳುವಳಿಯು ದೇಶದ ಮೂಲೆಮೂಲೆಗಳಿಗೂ ನುಗ್ಗುತ್ತಿದೆ. ಒಬ್ಬರನ್ನೊಬ್ಬರು ಒಡ ಹುಟ್ಟುಗಳಂತೆ ಕಾಣುವುದು. ಇನ್ನೊಬ್ಬರಿಗೆ ಸಹಾಯಮಾಡಲು ಸರ್ವದಾ ಸಿದ್ಧರಾಗಿರುವುದು, ಸದಾ ಸಂತೋಷ ಚಿತ್ತರಾಗಿರುವುದು. ಇವು ಮೂರು ಸ್ಕೌಟುಗಳ ಮುಖ್ಯ ಗುಣವೆಂದು ಹೇಳಬಹುದು.



ಈ ಸಲ ಈ ಸ್ಕೌಟು ಚಳುವಳಿಗು ಎರಡು ಚಿತ್ರಗಳನ್ನು ಕೊಟ್ಟಿದೆ. ಕೆಳಗಿರುವುದು ಹೊಸಕೋಟೆತಾಲ್ಲೂಕು ಸೂಲಬೆಲೆಯಲ್ಲಿ ನಡೆದ ಸ್ಕೌಟ್ ದೀಕ್ಷೆಯ ಚಿತ್ರ ಇದನ್ನು ಇಂಗ್ಲಿಷಿನಲ್ಲಿ ಇನ್‌ವೆಸ್ಟಿಚ್ಯೂರ್ ಎನ್ನುತ್ತಾರೆ ಆಗ ಆ ವೂರಿನ ದೊಡ್ಡ ಮನುಷ್ಯರು. ಅಮಲ್ದಾರರು, ಸಬ ಡಿವಿಜನ್ ಆಫೀಸರು ಎಲ್ಲರೂ ದಯಮಾಡಿಸಿದ್ದರು.



ಮೇಲಿನ ಚಿತ್ರವು ದೊಡ್ಡಬಳ್ಳಾಪುರದಲ್ಲಿರುವ ವೈ. ಎಂ ಸಿ. ಎ ಗ್ರಾಮಸೇವಾ ಸಂಘದ್ದು. ವೈ. ಎಂ. ಸಿ. ಎ. ಎಂಬ ಸಂಘವು ಇಂಡಿಯದ ಮುಖ್ಯ ಮುಖ್ಯ ಪಟ್ಟಣಗಳಲ್ಲಿ ತನ್ನ ಕಚೇರಿಗಳನ್ನು ಇಟ್ಟುಕೊಂಡಿದೆ ಜನರಿಗೆ ಸಹಾಯಮಾಡುವುದೇ ಈ ಸಂಘದ ಮುಖ್ಯೋದ್ದೇಶ. ಈ ಸಂಘದ ಬೆಂಗಳೂರು ಕಚೇರಿಯು ದೊಡ್ಡಬಳ್ಳಾಪುರದಲ್ಲಿ ಕಚೇರಿಯನ್ನಿಟ್ಟು ಅಲ್ಲಿ ಹಳ್ಳಿಗಾಡಿಗೆ ಬೇಕಾಗುವ ಸಣ್ಣಪುಟ್ಟ ಉದ್ಯೋಗಗಳು, ಗ್ರಾಮುವನ್ನು ಶುಚಿಯಾಗಿಟ್ಟುಕೊಳ್ಳುವುದು, ಮೊದಲಾದ ಕಾರ್ಯಗಳನ್ನು ಮಾಡಿ ತೋರಿಸುತ್ತಿದೆ ಈ ಕಚೇರಿಯ ಕಾರ್ಯಗಳಲ್ಲಿ ಅಮಲ್ದಾರ್ ರಾಜಶೇಖರ ಒಡೆಯರವರು ಬಹಳ ಉತ್ಸಾಹಿಗಳು. ಅಲ್ಲಿ ನಡೆದ ಸ್ಕೌಟ್ ಟ್ರೈನಿಂಗ್ ಮೀಟಿಂಗಿನ ಚಿತ್ರವಿದು.

# ವಿಶೇಷಗಳೂ ವಿಚಿತ್ರಗಳೂ

ಅಮೇರಿಕದ ಕೆನಡಾರಾಜ್ಯದಲ್ಲಿ ಅಲ್ಲಿನ ಸರಕಾರದವರು ವಿಚಿತ್ರವಾದ ಒಂದು ಉದ್ಯಾನವನ್ನು ಕಲ್ಪಿಸುತ್ತಿದ್ದಾರೆ. ಅಲ್ಲಿ ಸೇಂಟ್‍ಜಾರ್ಜೆಸ್ ಐರ್ಲೆಂಡ್ ಎಂಬುದೊಂದು ದ್ವೀಪ ಅಲ್ಲಿ ಐದುಕೋಟಿ ವರ್ಷಗಳ ಹಿಂದೆ ಕೆನಡಾರಾಜ್ಯದಲ್ಲಿ ಬದುಕಿಬಾಳಿದ ದಿನೋಸಾರಗಳನ್ನು ಕಲ್ಪಿಸುವರು ಆ ತೋಟಕ್ಕೆ ದಿನೋಸಾರ್ ತೋಟ ಎಂದು ಹೆಸರು. ದಿನೋಸಾರ್‍ಗಳು ಹಲ್ಲಿಯ ಜಾತಿಯ ಪ್ರಾಣಿಗಳು. ೧೨೦ ಅಡಿ ಉದ್ದವಿದ್ದವಂತೆ. ಅವುಗಳ ಮೂಳೆಮೊದಲಾದವು ಅಲ್ಲಲ್ಲಿ ಸಿಕ್ಕಿವೆ.

ಅಲ್ಲಿ ನಲವತ್ತು ದಿನೋಸಾರ್‍ಗಳನ್ನು ಕಟ್ಟಿಸುವರಂತೆ. ಹ್ಯಾಂಬರ್ಗ್ (ಅಮೇರಿಕಾ) ಎಂಬಲ್ಲಿ ಮಾತ್ರ ಇಂತಹದೊಂದು ತೋಟವಿತ್ತು ಈಗ ಆಗುವುದು ಎರಡನೆಯದು

o o o o o o

ಇದುವರೆಗೆ ಗಣಿಗಳಲ್ಲಿ ಕೆಲಸಮಾಡುವವರು, ಡೈನಮೈಟ್ ಎಂಬ ಸಿಡಿಮದ್ದನ್ನು ಉಪಯೋಗಿಸಿ ಬಂಡೆ ಮೊದಲಾದವುಗಳನ್ನು ಒಡೆಯುತ್ತಿದ್ದರು ಈಗ ಅದರ ಬದಲಾಗಿ ಗಾಳಿಯನ್ನು ನೀರುಮಾಡಿ, ಅದನ್ನು ಒಂದು ಪಟಾಕಿಯಂತಿರುವ ಕೋಟಾದಲ್ಲಿಟ್ಟು ಹಾರಿಸುವರು. ಇದರಿಂದ ಕೆಲಸಮಾಡುವವರಿಗೆ ಅಪಾಯವೂ ಖರ್ಚೂ ಬಹಳ ಕಡಿಮೆಯಾಗುವುದು

o o o o o o

ಜಪಾನಿನವರು ತಮ್ಮ ದ್ವೀಪದ ಸುತ್ತಮುತ್ತಲೂ ಬೆಳೆಯುವ ಒಂದು ಜೊಂಡಿನಿಂದ ನೂಲುತೆಗೆಯುವುದನ್ನು ಕಂಡುಹಿಡಿದಿದ್ದಾರೆ ಆ ಜೋಡನ್ನು ಒಂದು ಜಾತಿಯ ರಸಾಯನದಲ್ಲಿ ಬೇಯಿಸಿ ಅದರಲ್ಲಿರುವ ಕ್ಷಾರ ಮತ್ತು ಸುಣ್ಣಗಳನ್ನು ತೆಗೆದುಬಿಟ್ಟರೆ ಅದು ನಾರಿನಂತೆ ಆಗಿ ನೂಲುತೆಗೆಯಲು ಅನುಕೂಲವಾಗುವುದಂತೆ. ಇದು ಬಹಳ ಸುಲಭವಾಗಿ ಆಗುವುದರಿಂದ ಖರ್ಚು ಬಹಳ ಕಡಿಮೆಯಾಗುವುದು. ಇದರಿಂದ ಆದ ಬಟ್ಟೆಗಳು ಹತ್ತಿಯ ನೂಲಿನ ಬಟ್ಟೆಗಳಿಗಿಂತ ಹಗುರವೂ ಮೃದುವೂ ಆಗಿದ್ದು ರೇಶ್ಮೆಯಂತೆ ಹೊಳೆಯುವುವು ಮತ್ತು ಉಣ್ಣೆಯಂತೆ ಬೆಚ್ಚಗಿರುವುವು

o o o o o o o o o

ಮಡಗಾಸ್ಕರ್ ದ್ವೀಪದಲ್ಲಿ ಒಂದು ಗೊಂಡಾರಣ್ಯವಿದೆ. ಆ ದ್ವೀಪದ ಸುತ್ತಲೂ ಇರುವ ಆ ಅರಣ್ಯವು ೨೦ ಮೈಲಿಯಷ್ಟು ವಿಸ್ತಾರವಾಗಿದೆಯಂತೆ

o o o o o o o o o

ಸಿಡ್ನಿಯ ಸಮುದ್ರತೀರದಲ್ಲಿ ಒಂದು ಶಾಲುಸಿಕ್ಕಿದೆ. ಅದನ್ನು ಸಮುದ್ರದಲ್ಲಿ ಸಿಕ್ಕುವ ಕಪ್ಪೆಚಿಪ್ಪುಗಳಿಂದಲೇ ಮಾಡಿರುವರಂತೆ ಅದಕ್ಕೆ ಈಗ ೧೨೦೦ ಪೌಂಡು ಬೆಲೆ ಕಟ್ಟಿದ್ದಾರೆ. (ಒಂದು ಪೌಂಡಿಗೆ ೧೩ ರೂ. ೫ ಆ. ೪ ಕಾಸು)

ಕ್ಯಾಸ್ಪಿಯನ್ ಸಮುದ್ರದ ಹತ್ತಿರ ಗಿಲನ್ ಎಂಬ ಹಳ್ಳಿ ಅಲ್ಲಿ ಮೊಹಮದ್ ಗುರ್ಬನ್ ಆಲಿ ಎಂಬ ಮುದುಕನಿದ್ದಾನೆ. ಆತನಿಗೆ ೧೨೮ ವರ್ಷ. ಅವನ ಮಗನಿಗೆ ೧೦೨ ವರ್ಷ ಅವನ ಮಗಳಿಗೆ ೯೬ ವರ್ಷ. ಈಗ ಅವನಿಗೆ ೩೦೦ ಜನ ಮೊಮ್ಮಕ್ಕಳು ಇದ್ದಾರಂತೆ

೦ ೦ ೦ ೦ ೦ ೦ ೦ ೦ ೦

ಎಚ್. ಎಚ್. ಆಗಾಖಾನರು ಎಂಬುವರು ಮಹಮ್ಮದೀಯರಲ್ಲಿ ಒಂದು ಪಂಗಡದ ಗುರುಗಳು ಅವರು ಪಟ್ಟಕ್ಕೆ ಬಂದು ೫೦ ವರ್ಷಗಳಾಯಿತು. ಆ ಸಂತೋಷದ ಜ್ಞಾಪಕಾರ್ಥವಾಗಿ ಅವರು ತುಲಾಭಾರವನ್ನು ತೂಗಿಸಿಕೊಂಡು ತಮ್ಮ ತೂಕದ ಚಿನ್ನವನ್ನು ಬಡವರಿಗೆ ಹಂಚಿಕೊಟ್ಟರು. ಅವರ ತೂಕದ ಚಿನ್ನದ ಬೆಲೆಯು ಲಕ್ಷಾಂತರ ರೂಪಾಯಿಗಳಾಯಿತು.

ಅವರಂತೆಯೇ ತಾನೂ ಮಾಡಬೇಕೆಂದು ಮತ್ತೊಬ್ಬನು ತನ್ನ ತೂಕ ಮಿಠಾಯನ್ನು ಎಲ್ಲರಿಗೂ ಹಂಚಿದನಂತೆ ಆ ಮಿಠಾಯಿ ಹೆಸರು ಬಟಸ ಅದರಿಂದ ಅವನಿಗೆ ಬಟಸಖಾನ್ ಎಂದು ಹೆಸರಾಗಿದೆ. ಅವನ ತೂಕ ಮಿಠಾಯಿಗೆ ೬೦ ರೂ. ಬೆಲೆಯಾಯಿತಂತೆ. (ನಂಜನಗೂಡಿನಲ್ಲಿ ಬೆಲ್ಲ, ಅಕ್ಕಿ, ಮೊದಲಾದವುಗಳಿಂದ ತುಲಾಭಾರ ತೂಗಿಸಿಕೊಳ್ಳುವುದುಂಟು. ಭಕ್ತರು ನಂಜುಂಡೇಶ್ವರನಿಗೆ ಹರಕೆಹೊತ್ತು ತುಲಾಭಾರ ತೂಗಿಸಿಕೊಳ್ಳುವರು.)

ತುಲಾಭಾರವು ಇಂದಿನ ಪದ್ಧತಿಯಲ್ಲ. ಬಹು ಹಿಂದಿನ ಹಿಂದೂಪದ್ಧತಿ, ಸಂತೋಷಕ್ಕಾಗಿ ತುಲಾಭಾರದಾನ ಮಾಡುವಂತೆ, ಕೇಡುತಪ್ಪುವುದಕ್ಕಾಗಿ, ಮತ್ತು ಪುಣ್ಯವು ಲಭಿಸುವುದಕ್ಕಾಗಿ ತುಲಾದಾನಗಳನ್ನು ಮಾಡುವುದು ವಾಡಿಕೆ

ಹಿಂದೆ ಜಹಾಂಗೀರ್ ಚಕ್ರವರ್ತಿಯು ತುಲಾಭಾರವನ್ನು ತೂಗಿಸಿಕೊಂಡು ೧೪೦ ಪೌಂಡುಗಳ ತನ್ನ ತೂಕದ ಚಿನ್ನವನ್ನು ದೀನಾನಾಥರಿಗೆ ವಿನಿಯೋಗಿಸಿದನು.

ಮಹಾರಾಷ್ಟ್ರ ಚಕ್ರವರ್ತಿಯಾದ ಶಿವಾಜಿಯು ತುಲಾಭಾರ ತೂಗಿಸಿಕೊಂಡು ತನ್ನ ತೂಕ ೧೬೦ ಪೌಂಡು ಚಿನ್ನವನ್ನು ವಿದ್ವಾಂಸರಿಗೆ ಹಂಚಿದನು

೧೮೭೦ ರಲ್ಲಿ ತಿರುವಾಂಕೂರು ಮಹಾರಾಜರು ೨೦೪ ಪೌಂಡುಗಳಷ್ಟು ಚಿನ್ನದಿಂದೆ ತುಲಾಭಾರವನ್ನು ತೂಗಿಸಿಕೊಂಡು ಅದರ ಬೆಲೆಯಾದ ೧೬೦ ಸಾವಿರ ಹಣವನ್ನು ಪ್ರಜೆಗಳಿಗೆಲ್ಲ ಭೂರಿದಕ್ಷಿಣೆಯಾಗಿ ಕೊಟ್ಟರು.

ವಿಜಯನಗರದ ಚಕ್ರವರ್ತಿಯಾದ ಕೃಷ್ಣದೇವರಾಯನು ದಿಗ್ವಿಜಯಮಾಡಿಕೊಂಡು ಬಂದಮೇಲೆ ನವರತ್ನಗಳಿಂದ ತುಲಾಭಾರ ತೂಗಿಸಿಕೊಂಡು ಎಲ್ಲವನ್ನೂ ಪ್ರಜೆಗಳಿಗೆ ಹಂಚಿದನಂತೆ. ಮೈಸೂರು ದೊರೆಗಳಾದ ಮುಮ್ಮಡಿ ಕೃಷ್ಣರಾಜ ಒಡೆಯರವರು ತುಲಾಭಾರವನ್ನು ತೂಗಿಸಿಕೊಂಡಿದ್ದರಂತೆ.

## ಬಹುಮಾನಗಳನ್ನು ಪಡೆದವರು

(೧) ಕೆ. ಶಾರದಮ್ಮ, ಬೆಂಗಳೂರು

(೨) ಡಿ. ಆರ್ ಜಗನ್ನಾಥರಾವ್, ಮಂಡ್ಯ

(೩) ಯಂ ಪರಮೇಶ್ವರಪ್ಪ. ಗುಡ್ಡದ ರಂಗವ್ವನಹಳ್ಳಿ, ಚಿತ್ರದುರ್ಗ

(೪) ಎಲ್. ಎಸ್ ಸದಾಶಿವನ್, ಮೈಸೂರು

(೫) ಕೆ. ಟಿ. ತಿರುಮಲರಾಜು, ಚಿಕ್ಕಮಗಳೂರು.

(೬) ಎ ಹೇಮಾವದಿ, ಬೆಂಗಳೂರು

(೭) ಬಿ. ಕೆ. ಸತ್ಯ, ಬೆಂಗಳೂರು

(೮) ಬಿ ವಿ ವೆಂಕಟರಾಯ. ಹೊನ್ನವಳ್ಳಿ

(೯) ಟಿ. ತಿಪ್ಪಯ್ಯ, ಚಿತ್ರದುರ್ಗ

(೧೦) ಪಿ ಶಕುಂತಳಾಬಾಯಿ ಬಾಲ್ಯ

(೧೧) ಎಚ ಎನ್. ಅಪ್ಪಣ್ಣಾಚಾರ್, ಹೊಳವನಹಳ್ಳಿ

(೧೨) ವಿ ರಾಘವೇಂದ್ರಾಚಾರ್. ಆನವಟ್ಟಿ

(೧೩) ಬಿ. ಎಸ ಸೀತ, ಬೆಂಗಳೂರು

(೧೪) ಕೆ ಎಲ್ ಪ್ರಸನ್ನಕುಮಾರ ಶಿವಮೊಗ್ಗ

(೧೫) ಜಿ ಕೇಶವಮೂರ್ತಿ, ಬೆಂಗಳೂರು

(೧೬) ಅಮೃತಾದೇವಿ, ಹಿರೆಮಠ ಮೋಟೇ ಬೆನ್ನೂರು ಧಾರವಾಡ

(೧೭) ಕೆ ಶ್ರೀನಿವಾಸಶೆಟ್ಟಿ. ಚಿತ್ರದುರ್ಗ

## ಉತ್ತರಗಳನ್ನು ಬರೆದವರು

ಶ್ರೀ॥ ಜಿ ಪದ್ಮಾವತೀಬಾಯಿ, ಕೆ ಎಲ ಪ್ರಸನ್ನಕುಮಾರ, ಬಿ ಕೆ ಸತ್ಯ. ಅಮೃತಾದೇವಿ ಹಿರೇಮಠ

—ಮಕ್ಕಳ ಪುಟ—

## ಶಾಸ್ತ್ರಿಗಳ ಅದೃಷ್ಟ

ರಾಮಾಶಾಸ್ತ್ರಿಗಳು ಕಡು ಬಡವರು. ಇವರ ಮನೆಯಲ್ಲಿ ಮಕ್ಕಳೂ ಸೇರಿ ಒಟ್ಟು ಎಂಟು ಜನರು. ಮನೆಯೋ ಒಂದು ಕಗ್ಗತ್ತಲೆಯ ಗೂಡು. ಎಲ್ಲರಿಗೂ ಪಕ್ಷಕ್ಕೊಂದು ಸಲ ಏಕಾದಶಿಯಾದರೆ ಇವರಿಗೆ ವಾರಕ್ಕೈದು ದಿನ ಏಕಾದಶಿ

ಇವರ ಧರ್ಮಪತ್ನಿ ಗೋಪೀಬಾಯಿಯವರಿಗೆ, ಒಡವೆಯ ಮೇಲೆ ಕಡುಪ್ರೀತಿ. ನಿತ್ಯವೂ ಮಧ್ಯಾಹ್ನ ಎರಡು ಗಂಟೆಯವರೆಗೆ ದಿನಗೂಲಿ ಮಾಡಿದರೆ ಒಂದೊಂದು ದಿನ ಆರುಕಾಸು, ಒಂದೊಂದು ದಿನ ಸಂಪಾದನೆಯೇ ಇಲ್ಲ ಈ ಕಷ್ಟದಲ್ಲಿ ಒಂದು ದಿನ ಮನೆಗೆ ಬಂದರು. ಇವರ ಮೊದಲನೆಯ ಮಗಳು, ಹನ್ನೊಂದು ವರ್ಷದ ಸರಸಿ ಯೊಬ್ಬಳ ಹೊರತು ಮಿಕ್ಕ ಐದುಜನ ಮಕ್ಕಳೂ ಬಂದು ತಂದೆಯನ್ನು ಸುತ್ತಿಕೊಂಡು ಅಪ್ಪಾ, ನನಗೆ ಬಟ್ಟೆ ಹೊಲಿಸಿಕೊಡು, ಒಡವೆ ತಂದುಕೊಡು, ಅಮ್ಮನಿಗೆ ಸೀರೆ ತಂದೆಯಾ ? ತಿಂಡಿ ಮಾಡುವುದಕ್ಕೆ ಸಾಮಾನು ತಂದುಕೊಡು ಬೊಂಬೆ ತಂದುಕೊಡು ಎಂದು ವಿಧವಿಧವಾಗಿ ಕೇಳಿದರು. ಗೋಪೀಬಾಯಿಯು " ನನಗೆ ಉಡಲು ಸೀರೆಯಿಲ್ಲ. ಪಕ್ಕದ ಮನೆ ಅಚ್ಚಕ್ಕ ಜಗತಾರೀ ಸೀರೇ ತೆಗೆದುಕೊಂಡಳು ಆಚೇಮನೆಯ ಸಾಕಮ್ಮ ನೋರ ಹತ್ತುವರ್ಷದ ಮಗಳು ಪದ್ದೀಗೆ ಇನ್ನು ಎಂಟು ದಿನಕ್ಕೆ ಮದುವೆಯಂತೆ. ಅವ ರೆಲ್ಲಾ ಅಂಗಡೀಗೆ ಹೋಗಿ ಇನ್ನೂರು ರೂಪಾಯಿಯ ಬೆಳ್ಳಿಯ ಸಾಮಾನು, ೫೦೦ ರೂಪಾಯಿನ ಜವಳಿ, ಮಗಳಿಗೆ ಮುತ್ತಿನ ಬುಗಡಿ ಗಿಗಡಿ, ಸೀರೆ, ಪೀತಾಂಬರ ಎಲ್ಲಾ ತಂದರು ನಮ್ಮ ಸರಸೀಗೂ ಮದುವೆಮಾಡಿ ಎಂದಳು.

ಶಾಸ್ತ್ರಿಗಳಿಗಂತೂ ದಿಕ್ಕೇ ತೋರಲಿಲ್ಲ ರಾತ್ರಿಗೆ ಅಕ್ಕಿ ಇರಲಿಲ್ಲ. ಶಾಸ್ತ್ರಿಗಳು ಆ ಊರಿನ ಶಾನುಭೋಗರ ಹತ್ತಿರ ಹೋಗಿ ಒಂದೆರಡು ರೂಪಾಯಿ ಸಾಲವನ್ನು ಕೇಳಿ ದರು. ಅದಕ್ಕೆ ಅವರು " ಏನ್ರಿ. ಐದು ರೂಪಾಯಿ ಸಾಲಾ ತೆಗೆದುಕೊಂಡು ೧ ವರ್ಷ ವಾಯಿತು ಇನ್ನೂ ಕೊಟ್ಟಿಲ್ಲ. ನಾನು ಕೊಡುವುದಿಲ್ಲ " ಎಂದರು.

ಶಾಸ್ತ್ರಿಗಳ ಬುದ್ಧಿ ಚುರುಕು ಅಲ್ಲೀ ಇಲ್ಲೀ ಕೇಳಿ ೮ ಆಣೆ ಬೇಡಿ ಅಷ್ಟಕ್ಕೂ ರೊಟ್ಟಿಯನ್ನೂ ೪ ಗಡಿಗೆ ನೀರನ್ನೂ ೧ ಲೋಟವನ್ನೂ ಒಂದು ಹಳೆಯ ಪಂಚಾಂಗ ವನ್ನೂ ತೆಗೆದುಕೊಂಡು ಊರಿನಹೊರಗೆ ದೆವ್ವದ ಗುಡ್ಡದ ಮೇಲೆ ಹೋಗಿ ಕೂತರು. ರಾತ್ರಿಯಾಯಿತು ಇವರಿಗೆ ಸ್ವಲ್ಪದೂರದಲ್ಲಿ ಒಂದು ದೊಡ್ಡ ಹುಣಸೆಯ ಮರವಿತ್ತು ಅದರಲ್ಲಿ ಐದು ದೆವ್ವಗಳಿದ್ದವು. ಅವು ಈ ಶಾಸ್ತ್ರಿಗಳನ್ನು ನೋಡಿ ತಮ್ಮಲ್ಲೇ ಬಗೆ ಬಗೆ ಯಾಗಿ ಮಾತಾಡಿಕೊಂಡು ಅವರ ಹತ್ತಿರ ಹೋಗಿ, "ಎಲೈ ನೀನು ಯಾರು ? ಈ ರಾತ್ರಿಯಲ್ಲೇಕೆ ಕುಳಿತಿದ್ದೀ " ಎಂದವು. ಶಾಸ್ತ್ರಿಗಳು "ಎಲೈ ಭೂತಗಳಿರಾ, ನಾನು

ಒಬ್ಬ ಪ್ರಸಿದ್ಧನಾದ ಜೋತಿಷ್ಕನು ಮತ್ತು ಮಾಂತ್ರಿಕನು ನನ್ನ ದೃಷ್ಟಿಯಿಂದ ನೀವು ಇರುವ ಸ್ಥಳವನ್ನು ತಿಳಿದುಕೊಂಡು ಇಲ್ಲಿ ಬಂದಿದ್ದೇನೆ ನಿಮ್ಮ ಹತ್ತಿರ ಇರುವ ದ್ರವ್ಯ ವನ್ನು ನನಗೆ ಒಪ್ಪಿಸಬೇಕೆಂದು ದೈವೇಚ್ಛೆ ಹಾಗೆ ಒಪ್ಪಿಸದಿದ್ದರೆ ನೀವು ನಾಶವಾಗು ವಿರಿ'' ಎಂದು ವಿಕೃತಸ್ವರದಲ್ಲಿ ಹೇಳಿದರು.

ಆ ಭೂತಗಳು ಹೆದರಿ ಇವರನ್ನು ತಮ್ಮ ಮರದ ಹತ್ತಿರ ಕರೆದುಕೊಂಡು ಹೋಗಿ ಅಲ್ಲಿ ಹೂತಿಟ್ಟಿದ್ದ ಅಪಾರವಾದ ಧನಕನಕ ವಸ್ತುಗಳನ್ನೂ ಬೆಲೆಯುಳ್ಳ ವಸ್ತ್ರಗಳನ್ನೂ ವಿನಯದಿಂದ ಕೊಟ್ಟು, ಒಂದು ಹಿತ್ತಾಳೆಯ ಬಟ್ಟಲನ್ನು ಒಪ್ಪಿಸಿ, ''ಸ್ವಾಮಿ, ಈ ಬಟ್ಟಲನ್ನು ಒಂದು ಪರಿಷ್ಕಾರವಾದ ಜಾಗದಲ್ಲಿಟ್ಟು ಪೂಜಿಸಿ. ನಿಮ್ಮ ಇಷ್ಟವನ್ನು ಹೇಳಿ ಕೊಂಡರೆ ಅದು ಕೈಗೂಡುವುದು ಇದನ್ನು ಸ್ವೀಕರಿಸಿ'' ಎಂದು ಹೇಳಿ ಅದನ್ನು ಕೊಟ್ಟವು ಶಾಸ್ತ್ರಿಗಳು ಎಲ್ಲವನ್ನೂ ತಂದಾಗ ಮನೆಯವರಿಗೆ ಬಹಳ ಬಹಳ ಸಂತೋಷ ವಾಯಿತು. ಶಾಸ್ತ್ರಿಗಳೂ ಅಂದಿನಿಂದ ಸುಖವಾಗಿದ್ದರು ಕೆ ಜಯ

## ಗೋವಿಂದ

ಗೋವಿಂದಾ | ಗೋವಿಂದಾ | ಕೂಗಿದನಪ್ಪನು ಹೊರಗಿಂದ |
ಅಪ್ಪನು ಕೂಗಲು ಗೋವಿಂದ | ಬಾಗಿಲ ತೆಗೆವೆನು ತಾನೆಂದ |
ಓಡುತ ಬಂದನು ಗೋವಿಂದ | ಮುಹಡಿಯ ಮೆಟ್ಟಲ ಮೇಲಿಂದ |
ಬುಡು ಬುಡು ಬಿದ್ದನು ಗೋವಿಂದ | ಅಟ್ಟದ ಮೇಲಿಂದ |
ಬಿದ್ದ ಕೂಡಲೆ ಗೋವಿಂದ | ಗೋವಿಂದನು ಗೋವಿಂದ |

ಬಿ ಎಸ್. ವಿ. ಮೂರ್ತಿ

## ಚಂದ

ಬೆಲ್ಲದ ಪಾಯಸ ಕುಡಿಯಲು ಚಂದ |
ಹುಲ್ಲೆಯ ಮರಿಗಳು ಕುಣಿಯಲು ಚಂದ |
ಮಲ್ಲಿಗೆ ಸಂಪಿಗೆ ಮುಡಿಯಲು ಚಂದ |
ಮೆಲ್ಲನೆ ವೀಣೆಯ ನುಡಿಸಲು ಚಂದ |

೦ ೦ ೦ ೦ ೦

ಅಕ್ಕನ ಹಾಡನು ಕೇಳಲು ಚಂದ |
ನಕ್ಕರೆ ಮಕ್ಕಳು ತಾಯಿಗೆ ಚಂದ |
ಸಕ್ಕರೆ ತಿಂದರೆ ಬಾಯಿಗೆ ಚಂದ |
ಮಕ್ಕಳ ಪುಸ್ತಕ ವೋದಲು ಚಂದ |

ಎಂ. ಕೆ. ವೆಂಕಟಾದ್ರಿ

# ಹೆರೊಡೊಟಸ್

## (ಇತಿಹಾಸದ ಜನಕ)

**ಬರೆದವರು: ದೊಡ್ಡೇರಿ ವೆಂಕಟಗಿರಿರಾವ್.**

ನೀನು ಇಸ್ಕೂಲಿನಲ್ಲಿ ಓದುವ ಪಾಠಗಳಲ್ಲಿ ಚರಿತ್ರೇನು ಒಂದು ಅಲ್ಲವೆ? ಚರಿತ್ರೇನ ಇತಿಹಾಸ ಅಂತಲೂ ಕರೀತಾರೆ. ಈ ಇತಿಹಾಸ, ಚರಿತ್ರೆ, ನಮ್ಮ ಹಿಂದಿನ ಕಾಲದಲ್ಲಿ ಏನೇನು ನಡೀತು, ನಮ್ಮ ರಾಜ್ಯ ಯಾರು ಯಾರು ಆಳಿದರು, ಹೇಗೆ ಆಳಿದರು ಯಾವಾಗ ಆಳಿದರು ಎಂಬ ವಿಚಾರಗಳನ್ನೆಲ್ಲಾ ತಿಳಿಸುತ್ತೆ. ಹಳೆಯ ನಾಣ್ಯಗಳಿಂದಲೂ ಶಿಲಾಶಾಸನಗಳಿಂದಲೂ ಮತ್ತು ಹಿಂದಿನವರ ಬರಹಗಳಿಂದಲೂ ಚರಿತ್ರೆಯನ್ನು ಬರೆದರು ಅಂತ ಚರಿತ್ರೆಯಲ್ಲಿ ನೀನು ಓದಿದುದು ನೆನಪಿರಬಹುದು ಹೀಗೆ ಆಯಾ ಕಾಲದ ನಡವಳಿಕೆ, ದೇಶಸ್ಥಿತಿ, ರಾಜ್ಯಭಾರ, ರಾಜ್ಯದ ಬೆಳವಣಿಗೆ ಮುಂತಾದ ವಿಷಯಗಳನ್ನು ಮೊಟ್ಟಮೊದಲು ಬರೆದವನು ಯಾರೆಂದು ಗೊತ್ತಿದೆಯೆ?

ಕ್ರಿಸ್ತನು ಹುಟ್ಟುವುದಕ್ಕೆ ೫೦೦ ವರ್ಷಗಳ ಮುಂಚೆ, ಏಷಿಯಾ ಮೈನರಿಗೆ ಹೆಲಿಕರ್ನಾಸಸ ಎಂಬ ಒಂದು ಊರು ಸೇರಿತ್ತು. ಈ ಊರಿನಲ್ಲಿ ಲೈಕ್ಸಸ್ ಎಂಬುವನು ವಾಸವಾಗಿದ್ದನು ಇವನಿಗೆ ಡ್ರಯೋ ಎಂಬವಳನ್ನು ಕೊಟ್ಟು ಲಗ್ನವಾಗಿತ್ತು ಗಂಡ ಹೆಂಡಿರಿಬ್ಬರೂ ಸುಖವಾಗಿದ್ದರು

ಹೀಗೆ ಇರುವಾಗ ಕ್ರಿಸ್ತಪೂರ್ವ ೪೮೪ರಲ್ಲಿ ಅವರಿಗೆ ಒಂದು ಗಂಡು ಶಿಶು ಹುಟ್ಟಿತು. ಲೈಕ್ಸಸನು ಆ ಮಗುವಿಗೆ ಹೆರೊಡೊಟಸ್ ಎಂದು ಹೆಸರಿಟ್ಟರು. ಹೆರೊಡೊಟಸನಿಗೆ ಏಳೆಂಟು ವರ್ಷಗಳಾದಾಗ ಅವನನ್ನು ಇಸ್ಕೂಲಿಗೆ ಸೇರಿಸಿದರು. ಅವನು ಅಲ್ಲಿ ಕೆಲವು ಕಾಲ ಮಾತ್ರ ಓದಿದನು ಅವನಿಗೆ ಹಿಂದಿನ ಕಥೆಗಳನ್ನು ಕೇಳುವುದರಲ್ಲಿ ಬಹಳ ಪ್ರೀತಿಯಿತ್ತು ಯಾರಾದರೂ ತಮ್ಮ ದೇಶದ ಪೂರ್ವಿಕರ ವಿಚಾರವಾಗಿ ಏನಾದರೂ ಹೇಳುತ್ತಿದ್ದರೆ ಕಿವಿಗೊಟ್ಟು ಕೇಳುತ್ತಿದ್ದನು. ಕೇಳಿಕೊಂಡು ಮನೆಗೆ ಬಂದವನೇ ಅದನ್ನು ಬರೆದಿಡುತ್ತಿದ್ದನು ಹೀಗೆ ತನ್ನ ದೇಶದ ಕತೆಯನ್ನೂ ದೇಶದ ಸ್ಥಿತಿಯನ್ನೂ ಒರೆದಿಡುವುದು ಅವನ ಪದ್ಧತಿಯಾಯಿತು.

ಹೆರೊಡೊಟಸನು ತನ್ನ ೨೦ನೇ ವಯಸ್ಸಿನಲ್ಲಿ ಊರನ್ನು ಬಿಟ್ಟು ದೇಶಸಂಚಾರಕ್ಕೆ ಹೊರಟನು. ಗ್ರೀಸ್, ಇಟಲಿ ಮುಂತಾದ ದೇಶಗಳಲ್ಲಿ ಮುಖ್ಯ ಮುಖ್ಯವಾಗಿ ನೋಡಬೇಕಾದುದನ್ನೆಲ್ಲಾ ನೋಡಿದನು. ರಾಜ್ಯಭಾರ, ಕಲೆ, ದೇಶದ ಸ್ಥಿತಿ, ಮುಂತಾದ

ವಿಚಾರಗಳಲ್ಲಿ ತನಗೆ ಬೇಕಾದುದನ್ನೆಲ್ಲಾ ಸಂಗ್ರಹಿಸಿಕೊಂಡು ಮೆಸಿಡೋನಿಯಾ ದೇಶಕ್ಕೆ ಬಂದನು. ಅಲ್ಲಿಂದ ಕಪ್ಪುಸಮುದ್ರದ ಮಾರ್ಗವಾಗಿ ಪರ್ಷಿಯದ ಆಗಿನ ಮುಖ್ಯ ಪಟ್ಟಣವಾದ ಸೂಸಕ್ಕೂ ಅಲ್ಲಿಂದ ಬ್ಯಾಬಿಲೋನ್ ಮತ್ತು ಪ್ಯಾಲಸ್ಟೈನ್‌ಗೂ ಹೋಗಿ ತನ್ನ ದೇಶಕ್ಕೆ ಹಿಂದಿರುಗಿದನು

ಅವನು ತನ್ನ ದೇಶಕ್ಕೆ ಹಿಂತಿರುಗಿದಾಗ ಅಲ್ಲಿನ ಅಧಿಕಾರಿಯಾದ ಲಿಗ್ಯಾಡಮಿಸ್‌ನು ಜನರಿಗೆ ಬಹಳ ಹಿಂಸೆಕೊಡುತ್ತಿದ್ದನು. ಆಗಿನ ಕಾಲದ ಅಲ್ಲಿನ ಪ್ರಸಿದ್ಧ ಕವಿಯಾದ ಪನ್ಯಾಸಿಸ್ ಎಂಬುವನನ್ನು ಲಿಗ್ಯಾಡಮಿಸ್ಸನು ಕೊಲ್ಲಿಸಿದನು. ಪನ್ಯಾಸಿಸ್ಸನು ಹೆರೊಡೊಟಸ್ಸನ ಸಂಬಂಧದವನಾಗಿದ್ದನು. ಹೆರೊಡೊಟಸ್ಸನು ದೇಶದ ಹಲವು ಜನರೊಡನೆ ಕೂಡಿಕೊಂಡು ಲಿಗ್ಯಾಡಮಿಸ್ಸನನ್ನು ದೇಶದಿಂದ ಓಡಿಸುವ ಕೆಲಸದಲ್ಲಿ ಬಹುಮುತವರ್ಜಿಯಿಂದ ಕೆಲಸಮಾಡಿದನು ದೇಶವೆಲ್ಲವೂ ಶಾಂತಸ್ಥಿತಿಗೆ ಬಂದಮೇಲೆ ಗ್ರೀಸ್ ಮತ್ತು ಪರ್ಷಿಯ ರಾಜಗಳ ಬೆಳವಣಿಗೆ ರಾಜ್ಯಭಾರ, ಸ್ಥಿತಿಗಳನ್ನೊಳಗೊಂಡ ಎರಡು ಪುಸ್ತಕಗಳನ್ನು ಬರೆದನು. ಈ ಪುಸ್ತಕಗಳು ಆ ದೇಶಗಳ ಇತಿಹಾಸವೊಂದೇ ಅಲ್ಲದೆ ಭೂವಿವರಣೆಯನ್ನೂ ಹೇಳುತ್ತದೆ.

ಗ್ರೀಸ್ ಮತ್ತು ಪರ್ಷಿಯದ ಇತಿಹಾಸಗಳನ್ನೂ ಬರೆದನಂತರ, ಏನಾದರೂ ಸಹಾಯ ಸಿಕ್ಕಬಹುದೆಂಬ ಆಸೆಯಿಂದ ಗ್ರೀಸಿನ ಮುಖ್ಯಪಟ್ಟಣವಾದ ಅಥೆನ್ಸ್ಸಿಗೆ ಕ್ರಿ ಪೂ ೪೪೭ ರಲ್ಲಿ ಹೋಗಿ ಕೊನೆಯವರೆಗೂ ಅಲ್ಲೇ ಉಳಿದನು ಇವನ ಪ್ರತಿಭೆಯನ್ನು ಕಂಡ ಅಥೆನಿಯನ್ನರು ಕ್ರಿ ಪೂ ೪೪೫ ರಲ್ಲಿ ಹೆರೊಡೊಟಸನಿಗೆ ೨೪೦೦ ಪೌಂಡುಗಳನ್ನು ಬಹುಮಾನವಾಗಿ ಕೊಟ್ಟರು. ಅವನು ಬರೆದ ಇತಿಹಾಸಗಳು ಅವುಗಳ ಶೈಲಿ ಮತ್ತು ವಸ್ತುಗಳ ವಿವರಣೆಗಾಗಿ ಪ್ರಸಿದ್ಧಿಹೊಂದಿವೆ. ಕ್ರಿ. ಶ ೧೭೩೭ ರಲ್ಲಿ ಅವನ ಪುಸ್ತಕಗಳು ಇಂಗ್ಲಿಷ ಭಾಷೆಗೆ ಪರಿವರ್ತಿತವಾದುವು ಕ್ಯಾನನ್ ರಾಲಿನ್‌ಸನ್‌ನು ೧೮೫೮ ರಲ್ಲಿ ಅನುವಾದಿಸಿದ ಪುಸ್ತಕಗಳಲ್ಲಿ ಹೆರೊಡೊಟಸ್ಸನ ವಾಕ್ಯಗಳು ಬಹಳ ಇವೆ ಕ್ರಿ ಪೂ ೪೨೪ ರಲ್ಲಿ ಅವನು ಅಥೆನ್ಸಿನ 'ತೂರಿ' ಎಂಬಲ್ಲಿ ತೀರಿಹೋದನು

## ಗಾದೆಗಳು

ಹರಿದೋಗೋ ಹಾವು ಎದ್ದು ನಿಂತರೆ ಆಳುದ್ದ.
ಬೇರುಬಲ್ಲವನಿಗೆ ಎಲೆ ತೋರಿಸಬೇಕೆ ?
ಕಾಯಿಬೇಕಾದರೆ ಮರ ಕೆಡುವೋದೆ ?
ಅಟ್ಟ ಹತ್ತಬೇಕಲ್ಲಾ ಅಂತ ಬೆಟ್ಟಕ್ಕೋಡಿ ಹೋದಹಾಗೆ

---




ವಿದ್ಯಾಪರಾ ದೇವತಾ

ಕಟ್ಟು ೯ | ಯುವ ಸಂ|| ಚೈತ್ರ-ವೈಶಾಖ-ಏಪ್ರಿಲ್-ಮೇ ೧೯೩೬ | ಪುಸ್ತಕ ೧೧-೧೨

# ತಮ್ಮನೆ ಬುದ್ಧಿವಂತ.

ಧನಿಧನಿ ಭೇಧಿಸಿ ಪೇಳುವನವ್ವ |
ಮಣಿಬಂದ | ಫಣಿಬಂದ | ಬಾಗಿಲಲೆಂಬ |
ಹಣಕುತ ನಿಂತಿದ್ದು ಓಡು ಓಡೆನುವ |
ಅಮ್ಮ | ಕೇಳಮ್ಮ | ಬೊಮ್ಮನ ಆಣೆಗು |
ತಮ್ಮನು | ಎನಗಿಂತ ಬಲುಬುದ್ಧಿವಂತ |
ಪ್ಯಾಲದಹಾಲೆಲ್ಲ ಚೆಲ್ಲಿದನವ್ವ |
ಬಾಳ ಕೇಳೋ ಇದು ಸಾಗರವೆಂದ ||
ಪ್ಯಾಲವ ಕಾಚಿಟ್ಟು ಲಂಕೆಯಿದೆಂದ |
ಬಾಳ | ಬಾರೋ ಬೇಗಿ ನಡುವನು ಎಂದ ||
ನಾಳೆಯೆ ತರುವೆನು ಸೀತೆಯನೆಂದ |
ಅಮ್ಮ | ಕೇಳಮ್ಮ ತಮ್ಮನು ಎನಗಿಂತ |
ಬೊಮ್ಮನ ಆಣೆಗು ಬಲುಬುದ್ಧಿವಂತ

ಶ್ರೀ ಹೊಯಿಸಳ.




ಈಸಲ ಮುಂದಿನ ತಿಂಗಳ ಸಂಚಿಕೆಯನ್ನೂ ಸೇರಿಸಿ ಕಳುಹಿಸಿದ್ದೇನೆ. ಎಂದರೆ ನಿನಗೆ ಏಪ್ರಿಲ್ ತಿಂಗಳಿನಲ್ಲಿಯೇ ಏಪ್ರಿಲ್ ಮತ್ತು ಮೇ ತಿಂಗಳುಗಳ ಪುಸ್ತಕಗಳು ಒಟ್ಟಾಗಿ ಬಂದಿವೆ ಮೇ ತಿಂಗಳಿನಲ್ಲಿ ಎಲ್ಲಾ ಶಾಲೆಗಳಿಗೂ ರಜಾ. ಅನೇಕರು ಅತ್ತಿತ್ತ ಹೋಗಿ ಬರುವುದುಂಟು. ಅದರಿಂದ ಹೀಗೆ ಮಾಡಿದರೆ ಒಳ್ಳೆಯದು ಎಂದು ಹೀಗೆ ಮಾಡಿದ್ದೇನೆ

ಈಸಲ ರಾಮಕೃಷ್ಣಪರಮಹಂಸರ ಗುಂಪೊಂದು, ಹರಿದಾಸರ ಗುಂಪೊಂದು, ಹೀಗೆ ಎರಡು ಗುಂಪುಗಳು ಚಿತ್ರಗಳು ಬಂದಿವೆ. ಮೊದಲನೆಯ ಗುಂಪಿನಲ್ಲಿ ರಾಮ ಕೃಷ್ಣರು, ಅವರ ಪಟ್ಟಶಿಷ್ಯ ವಿವೇಕಾನಂದರು, ಅವರ ಮಡದಿ ಶಾರದಾದೇವಿಯವರು, ಅವರು ತಪಸ್ಸುಮಾಡಿ ಸಿದ್ಧಿಪಡೆದ ದಕ್ಷಿಣೇಶ್ವರದ ಕಾಳೀದೇವಾಲಯ, ಇವಿಷ್ಟೂ ಇವೆ. ಎರಡನೆಯ ಗುಂಪಿನಲ್ಲಿ ಕರ್ನಾಟಕದ ಪ್ರಸಿದ್ಧ ಹರಿದಾಸರುಗಳಾದ ಪುರಂದರದಾಸರು, ಕನಕದಾಸರು, ತೆಲುಗಿನಲ್ಲಿ ಹರಿಕೀರ್ತನೆಗಳನ್ನು ಬರೆದ ತ್ಯಾಗರಾಜರು, ಸಂಸ್ಕೃತ ದಲ್ಲಿ ಗೀತಗೋವಿಂದ ಎಂಬ ಹಾಡುಗಳ ಕಂತೆಯನ್ನು ಬರೆದಿರುವ ಜಯದೇವರು ಇವರು ಗಳ ಚಿತ್ರಗಳಿವೆ

ಇವರೆಲ್ಲರೂ ಒಂದಲ್ಲ ಒಂದು ವಿಧದಲ್ಲಿ ಪ್ರಸಿದ್ಧರು ಮತ್ತು ದೇವರನ್ನು ನಂಬಿ ಬದುಕಿದವರು. ಈಗಿನ ಕಾಲವು ದೇವರು ಬೇಡವೆಂದು ತನ್ನದೊಂದು ಹೊಸಹಾದಿ ಯನ್ನು ಮಾಡಿಕೊಳ್ಳುತ್ತಿದೆ ಇಂತಹ ಕಾಲದಲ್ಲಿ ನೀನು ಇವರ ಚರಿತ್ರೆಗಳನ್ನು ಅಗತ್ಯ ವಾಗಿ ಓದಬೇಕು.

ಇತಿ, ನಿನ್ನ ಅಣ್ಣ—

# ಚಿತ್ರಪರಿಚಯ

---

ಈ ಸಲದ ಚಿತ್ರವನ್ನು ತಾವರೆಯ ಹೂವು ಎಂದು ಕರೆದಿದೆ. ಕಾರಣವೇನು? ಭಾರಿಯ ಹಸುವಿದೆ ದೊಡ್ಡಹೆಂಗುಸೊಬ್ಬಳು ದೊಡ್ಡಬಿಂದಿಗೆಯನ್ನು ಇಟ್ಟುಕೊಂಡು ಕುಳಿತಿದ್ದಾಳೆ. ಆದರೂ ಚಿತ್ರದ ಹೆಸರು ತಾವರೆಯ ಹೂವು.

ಹಸುವು ಆ ಹೆಂಗುಸನ್ನು ನೋಡುತ್ತಿದೆ. ಹೆಂಗುಸಿನ ದೃಷ್ಟಿಯು ಇನ್ನು ಏನನ್ನೋ ನೋಡುತ್ತಿದೆ. ಮಗ್ಗುಲಲ್ಲಿರುವ ಬಿಂದಿಗೆಯೂ ಕೂಡ ತನ್ನ ಒಡತಿಯು ಏನು ನೋಡುತ್ತಿರುವಳೋ ನೋಡೋಣವೆಂದು ಬಗ್ಗಿದಂತಿದೆ. ಹೆಂಗುಸು ನೋಡುತ್ತಿರುವುದು ಏನನ್ನು? ಅವಳು ನೀರಿನ ಮಗ್ಗುಲಲ್ಲಿ ಕುಳಿತು ನೀರಿನಲ್ಲಿ ಬೆಳೆದಿರುವ ತಾವರೆಯ ಹೂವನ್ನು ನೋಡುತ್ತಿದ್ದಾಳೆ. ಆದರಿಂದ ಎಲ್ಲರ ಗಮನವೂ ಒಂದೇ ಕಡೆಗೆ ಇರುವುದರಿಂದ, ಅದನ್ನು ತಾವರೆಯ ಹೂವೆಂದು ಕರೆದಿದೆ.

ಇದರಲ್ಲಿರುವ ಒಡವೆಗಳನ್ನು ನೋಡು. ಮುಂಗೈಯಲ್ಲಿ ಚಿನ್ನದ ಬಳೆಗಳು, ತೋಳಿನಲ್ಲಿ ತೋಳಬಂದಿ ಅದರ ಮುಖವು ವಿಸ್ತಾರವಾಗಿ ಅಂದವಾಗಿದೆ. ಕತ್ತಿನಲ್ಲಿ ಜೋಮಾಲೆಯಂತಹ ಸರವಿದೆ. ಕಿವಿಯಲ್ಲಿ ಚಳತುಂಬುಗಳಿವೆ. ತಲೆಯ ಮೇಲೆ ಭಾಷಿಂಗದಂತಹ ಒಡವೆಯೊಂದಿದೆ. ಪುರಾತನ ಕಾಲದಲ್ಲಿ ಈ ಒಡವೆಗಳನ್ನೆಲ್ಲ ಹಾಕಿಕೊಳ್ಳುತ್ತಿದ್ದರು.

ಈ ಹೆಂಗುಸು ರವಕೆಯನ್ನು ಕಟ್ಟಿಕೊಂಡಿರುವ ರೀತಿಯನ್ನು ನೋಡು. ಒಂದು ಬಟ್ಟೆಯನ್ನು ತೆಗೆದುಕೊಂಡು ಅದನ್ನು ಎದೆಗೆ ಕಟ್ಟಿಕೊಂಡಿದ್ದಾಳೆ. ಅದೂ ಹಿಂದಿನ ಪದ್ಧತಿ. ಹಾಗೆಯೇ ಉಟ್ಟಿರುವುದೊಂದು ಜಾತಿಯ ಬಟ್ಟೆ, ಹೊದ್ದಿರುವುದು ಇನ್ನೊಂದು ಜಾತಿಯ ಬಟ್ಟೆ. ಅದೂ ಹಿಂದಿನ ವಾಡಿಕೆ. ಇಷ್ಟೆಲ್ಲವೂ ಹಿಂದಿನ ಪದ್ಧತಿಯಾಗಿದ್ದರೂ ಒಂದು ಮಾತ್ರ ಹೊಸಗುರುತು ಬಂದಿದೆ. ಹೇಳಬಲ್ಲೆಯಾ? ಹೆಂಗುಸಿನ ಹಣೆಯಲ್ಲಿರುವ ಕುಂಕುಮವನ್ನು ನೋಡು. ಗುಂಡಗಿದೆ. ಹಿಂದಿನವರು ಸಾಮಾನ್ಯವಾಗಿ ಕುಂಕುಮವನ್ನು ಗುಂಡಾಗಿ ಇಟ್ಟುಕೊಳ್ಳುತ್ತಿರಲಿಲ್ಲ. ಅಡ್ಡವಾಗಿ ಹುಣಸೆಯ ಎಲೆಯಂತೆಯೊ ಇಲ್ಲದಿದ್ದರೆ ಉದ್ದವಾಗಿ ತಿಲಕದಂತೆಯೋ ಇಟ್ಟುಕೊಳ್ಳುತ್ತಿದ್ದರು.

---




## ಮಕ್ಕಳ ಆಟಗಳು

### ಬಜ' ಆಟ

ಈ ಆಟಕ್ಕೆ ಎಷ್ಟು ಜನರಾದರೂ ಕೂಡಬಹುದು.

ಮೊದಲನೆಯವನು 'ಒಂದು' ಎನ್ನುವನು. ಎರಡನೆಯವನು 'ಎರಡು' ಮೂರ ನೆಯವನು ಮೂರು' ಹೀಗೆಯೇ, ಒಬ್ಬೊಬ್ಬನೂ ಒಂದೊಂದು ಸಂಖ್ಯೆಯನ್ನು ಹೆಚ್ಚಿಸಿ ಎಣಿಸುತ್ತಾ ಹೋಗುವರು. ಆದರೆ 'ಏಳು' ಅಥವ ಏಳರ ಗುಣಿತ ಫಲ (೭,೧೪,೨೧, ೨೮,೩೫, ಮುಂತಾದುವು) ಸಂಖ್ಯೆಗಳಾಗಿ ಬಂದರೆ, ಆ ಸಂಖ್ಯೆಗಳನ್ನು ಹೇಳಕೂಡದು ಆ ಸಂಖ್ಯೆಗೆ ಬದಲಾಗಿ ಅವರು 'ಬಜ' ಎನ್ನಬೇಕು ಹಾಗೆ ಎನ್ನದೆ ಮರೆತವನು ಸೋಲುವನು ಬಳಿಕ ಉಳಿದವರು ಆಡುವರು ಕಟ್ಟಕಡೆಗೂ ನಿಂತವನೇ ಗೆದ್ದವ ನಾಗುವನು

[ಉದಾಹರಣೆ :—೧, ೨, ೩, ೪, ೫, ೬, ಬಜ್ ೮, ೯, ೧೦, ೧೧, ೧೨, ೧೩, ಬಜ (೭×೨=೧೪=ಬಜ), ೧೫, ೧೬, ಬಜ' (೧೭ ರಲ್ಲಿ ೭ ಇದೆ) ೧೮, ೧೯, ೨೦, ಬಜ' (೭×೩=೨೧=ಬಜ), ೨೨, ೨೩, ೨೪, ೨೫, ೨೬, ಬಜ', (೨೭ ರಲ್ಲಿ ೭ ಇದೆ, (೭೪×೨=೨೮=ಬಜ'), ಮುಂತಾಗಿ ೭೦ ರಿಂದ ೭೯ರ ವರೆವಿಗೂ ಬಲಗಡೆಯಲ್ಲಿ ಬರುವ ಏಳು ಮಾತ್ರ ಲೆಖ್ಖಕ್ಕೆ ಬರುವುದು]

ಈ ಆಟವು ಹುಡುಗರ ಗುಂಪಿನಲ್ಲಿ ಆಡಲು ಬಹು ವಿನೋದಕರವಾಗಿರುವುದು

ಎಂ. ವೆಂಕಟಕೃಷ್ಣಪ್ಪ
ಶಿಡ್ಲಘಟ್ಟ.

# ಮ ಹಾ ತ್ಮ

ಇದು ಒಂದು ಪ್ರಸಿದ್ಧ ನುಡಿಚಿತ್ರ ಎಂದರೆ ಟಾಕೀ ಮರಾಠಾ ದೇಶದಲ್ಲಿ ಏಕನಾಥ ನೆಂಬ ಸಾಧುಸಂತನಿದ್ದನು ಆತನು ಪರಮ ವೈಷ್ಣವನು ಆತನ ಕಥೆಯು ಈಗ ಚಿತ್ರವಾಗಿದೆ. ಅದೇ ಇದು. ಇದರಲ್ಲಿ ಮರಾಠಾ ದೇಶದ ಪ್ರಸಿದ್ಧ ಅಭಿನಯಕಾರರಾದ ಬಾಲಗಂಧರ್ವರು ಏಕನಾಥನ ಪಾತ್ರವನ್ನು ವಹಿಸಿದ್ದಾರೆ ಇದನ್ನು ಒಮ್ಮೆ ನೋಡಿದರೆ ಇನ್ನೂ ಹಲವು ಸಲ ನೋಡಬೇಕೆನ್ನಿಸುತ್ತದೆ. ಅಷ್ಟು ಚೆನ್ನಾಗಿದೆ ಈ ಪಟ.

ಏಕನಾಥನ ಚರಿತ್ರೆಯೂ ಬಹಳ ಸೊಗಸಾದುದು. ಏಕನಾಥನು ಪರಮ ವೈಷ್ಣವ ಆತನಿಗೆ ಯಾರಮೇಲೂ ಹಗೆಯಿಲ್ಲ. ಎಲ್ಲರ ಮೇಲೆಯೂ ವಿಶ್ವಾಸ, ಆತನು ಭಕ್ತಿಯಿಂದ ದಿನ ದಿನವೂ ಭಜನೆಮಾಡುವನು. ಊರಿನಲ್ಲಿ ಇರುವವರೆಲ್ಲ ಬಂದು ಆ ಭಜನೆಯನ್ನು ಕೇಳುವರು ಆ ಭಜನೆಯನ್ನು ಕೇಳಿದವರಿಗೆ ಅಲ್ಲಿರುವಷ್ಟು ಹೊತ್ತು ಮೈಮರೆದಂತಾಗಿ ಆನಂದವಾಗುವುದು.

ಒಂದು ದಿನ ಏಕನಾಥ ಮನೆಯಲ್ಲಿ ಶ್ರಾದ್ಧವು ಬಂತು ಆ ದಿನ ಅಡುಗೆಗಳು ಬೇಕಾದಹಾಗೆ ಆಗುತ್ತಿವೆ. ಅವುಗಳ ಪರಿಮಳವು ಬೀದಿಯಲ್ಲೆಲ್ಲಾ ತುಂಬಿಹೋಗಿದೆ. ಬೀದಿಯಲ್ಲಿ ಹೋಗುತ್ತಿದ್ದ ಹೊಲೆಯರು ಮೊದಲಾದ ಕೆಲವರು ಬಡವರು ಆ ಅಡುಗೆಯ ವಾಸನೆಗೆ ಮನಸೋತರು ಮೊದಲೇ ಹೊಟ್ಟೆಗಿಲ್ಲದವರು ಮೇಲೆ ಅಡುಗೆಯ ಗಮ ಗಮ, ಏಕನಾಥನ ಮನೆಯ ಮುಂದುಗಡೆ ಕುಳಿತು "ನಮಗಾದರೂ ಬಡಿಸಬಾರದೆ !" ಎಂದು ಹಂಬಲಿಸಿದರು

ಆ ಹಂಬಲವು ಏಕನಾಥನ ಕಿವಿಗೆ ಬಿತ್ತು. " ಹೋಗಲಿ ಅವರಿಗೆ ಇದನ್ನು ಬಡಿಸಿ ಬಿಡೋಣ, ಆ ಮೇಲೆ ಬ್ರಾಹ್ಮಣರಿಗೆ ಬೇರೆ ಅಡುಗೆ ಮಾಡಿ ಬಡಿಸಿದರಾಯಿತು " ಎಂದು ಏಕನಾಥನು ಅದುವರೆಗೆ ಆಗಿದ್ದ ಅಡುಗೆಯನ್ನೆಲ್ಲ ಆ ಬೀದಿಯ ಬಿಕಾರಿಗಳಿಗೆ ಬಡಿಸಿ ಬಿಟ್ಟನು.

ಏಕನಾಥನ ಭೂಮಿಕೆಯನ್ನು ಧರಿಸಿರುವ ಭಾರತ ಸಂಗೀತ ರತ್ನ ಭಾಲಗಂಧರ್ವ.



ಏಕನಾಥನ ಭೂಮಿಕೆಯನ್ನು ಧರಿಸಿರುವ ಭಾರತ ಸಂಗೀತ ರತ್ನ ಭಾಲಗಂಧರ್ವ.



'ಮಹಾತ್ಮಾ'

ಚಲನ ಚಿತ್ರದಲ್ಲಿ ಕುಮಾರಿ ವಾಸಂತಿಯು ಹರಿಜನ ಕನ್ಯೆ ಚಂಪಾ
ಭೂಮಿಕೆಯಲ್ಲಿ ಅಭಿನಯಿಸಿರುವ ಭಂಗಿ.

ಹೀಗೆ ಮಾಡಿದುದು ಆ ವೂರಿನ ಆಚಾರಪರರಿಗೆ ಸರಿಬೀಳಲಿಲ್ಲ ಅವರು ಅವನನ್ನು ನಿಂದಿಸಿದರು. ಅಷ್ಟೇ ಅಲ್ಲ ಕೆಲವರು ಆ ಬಿಕಾರಿಗಳನ್ನು ಕರೆದು "ಏಕನಾಥನು ನೀವು ಹಾಳಾಗಲೆಂದು ಹೀಗೆಮಾಡಿದ್ದಾನೆ ನಿಮ್ಮ ಮೇಲೆ ಪ್ರೀತಿಯಿಂದ ಈ ಕೆಲಸ ಮಾಡಿದ್ದರೆ ಅವನು ನಿಮ್ಮ ಮನೆಗೆ ಊಟಕ್ಕೆ ಬರುವನೇನೋ ನೋಡಿ" ಎಂದು ಅವರನ್ನು ಹೆದರಿಸಿದರು.

ಈ ಸುದ್ದಿಯು ಹೊಲಗೇರಿಯ ತುಂಬಾ ಹತ್ತಿತು ಅವರು ಇವನು ಆಡುತ್ತಿರುವಾಗ ಚಂಪಾ ಎಂಬ ಹೊಲೆಯರ ಹುಡುಗಿಯ ಕಿವಿಗೆ ಬಿತ್ತು ಅವಳು ಏಕನಾಥನಂತೆಯೇ ವಿಷ್ಣುಭಕ್ತಳು. ಆತನ ಭಜನೆಗೆ ಹೋಗುವಳು ಆತನು ಅವಳನ್ನು ಮಗಳಂತೆ ನೋಡುವನು. ಈ ಹುಡುಗಿಯು "ಅದೇನು ಮಹಾ! ಏಕನಾಥ ಬಾಪೂಜಿಯನ್ನು ನಾನು ಕರೆದುಕೊಂಡು ಬರುವೆನು" ಎಂದು ಹೋದಳು.

ಏಕನಾಥನ ಮಗನಿಗೆ ತಂದೆಯ ವರ್ತನವು ಸರಿಬೀಳದೆ ಅವನು ಆ ಹುಡುಗಿಯನ್ನು ಹೊಡೆದು ಓಡಿಸಲು ಯತ್ನಿಸಿದನು. ಏಕನಾಥನು ಆ ವೇಳೆಗೆ ಬಂದು ಅವಳನ್ನು ಸಂತೈಸಿ ತಾನು ಅವಳ ಮನೆಗೆ ಊಟಕ್ಕೆ ಬರುವುದಾಗಿ ಒಪ್ಪಿಕೊಂಡನು.

ಊರಲ್ಲೆಲ್ಲಾ ಗುಲ್ಲೋಗುಲ್ಲಾಯಿತು. ಎಲ್ಲರ ಬಾಯಲ್ಲೂ ಏಕನಾಥನದೇ ಮಾತು ಹೀಗಾಗಿ ಏಕನಾಥನಿಗೆ ಬಹಿಷ್ಕಾರವಾಯಿತು. ಆತನು ಹೋಗಿ ಹೊಲೆಗೇರಿಯಲ್ಲಿಯೇ ನಿಂತನು

ಕೊನೆಗೆ ಕಾಶಿಯಿಂದ ಪ್ರಸಿದ್ಧ ವಿದ್ವಾಂಸರು ಬಂದರು ಅವರು ಏಕನಾಥನು ಮಾಡಿದುದನ್ನೆಲ್ಲ ವಿಚಾರಿಸಿ. ಅವನು ನಿರಪರಾಧಿಯೆಂದು ತೀರ್ಪುಕೊಟ್ಟರು ಮಗನೂ ತಂದೆಯ ಕಾಲಿಗೆ ಬಿದ್ದು ಮನ್ನಣೆಯನ್ನು ಕೇಳಿದನು.

ಈ ಚಿತ್ರದ್ದು ಈ ಕಥೆ, ಮೊದಲೇ ಮಹಾವೈಷ್ಣವನ ಕಥೆ ಅದರ ಮೇಲೆ ಬಾಲಗಂಧರ್ವನ ಅಭಿನಯ. ಜೊತೆಗೆ ಈಗ ಎಲ್ಲೆಲ್ಲೂ ಕೇಳಿಬರುವ ಹರಿಜನರ ವಿಚಾರ, ಎಲ್ಲವೂ ಸೇರಿ ಈ ಚಿತ್ರಕ್ಕೆ ಹೆಚ್ಚುಬಣ್ಣ ಬಂದಿದೆ ಇದರಲ್ಲಿ ವಾಸಂತೀ ಎಂಬ ಹುಡುಗಿಯು ಚಂಪಾಪಾತ್ರವನ್ನು ವಹಿಸಿದ್ದಾಳೆ. ಅವಳ ಅಭಿನಯವು ಘನವಾಗಿದೆ.

---

# ಪರಮಹಂಸರು

ಈಗ್ಗೆ ನೂರುವರ್ಷಗಳ ಹಿಂದೆ ಒಬ್ಬ ಮಹನೀಯರು ಜನ್ಮವೆತ್ತಿದರು. ಅವರು ಹುಟ್ಟಿದುದು ಬಡವರ ಗುಡಿಸಲಿನಲ್ಲಿ ಆ ತಂದೆತಾಯಿಗಳಿಗೆ ಮಾತ್ರ ಆ ಮಗುವು ಪರಮೇಶ್ವರನ ಅನುಗ್ರಹದಿಂದ ಹುಟ್ಟಿದುದು ಎಂಬುದು ತಿಳಿದಿತ್ತು. ಆದರೆ ಲೋಕದಲ್ಲಿ ಇಷ್ಟು ಪ್ರಸಿದ್ಧವಾಗುವುದೆಂದು ತಿಳಿದಿರಲಿಲ್ಲ. ಆ ಮಗುವೇ ರಾಮಕೃಷ್ಣ ಆ ಮಗುವಿಗೆ ಬಾಲ್ಯದಲ್ಲಿಯೇ ತಂದೆಯು ತೀರಿಹೋದರು. ಅದರಿಂದ ಅಣ್ಣನೇ ಆ ಬಾಲಕನನ್ನು ಬೆಳೆಸಿದನು ಆ ಹುಡುಗನಿಗೆ ಓದಿನಲ್ಲಿ ಅಷ್ಟು ಶ್ರದ್ಧೆಯಿರಲಿಲ್ಲ ಮೊದಲಿಂದಲೂ ದೇವರು ದಿಂಡರ ಹುಚ್ಚು ಆ ಹುಚ್ಚಿನಲ್ಲಿಯೇ ಬೆಳೆಯಿತು ಆ ಹುಡುಗ.

ಮೊದಲೇ ಬಡವರು ಜೊತೆಗೆ ಬರುವ ಆದಾಯವೂ ಕಡಿಮೆಯಾಗಿ ಹೋಗಿ ತಿನ್ನುವುದಕ್ಕೂ ಮಾರ್ಗವಿಲ್ಲದೆ ಹೋಗಲು, ಮನೆಯವರೆಲ್ಲ ಹುಟ್ಟಿದ ಹಳ್ಳಿಯನ್ನು ಬಿಟ್ಟು ಕಲಿಕತ್ತೆಗೆ ಬಂದರು. ಅಲ್ಲಿ ಒಂದು ಕಾಳೀ ದೇವಾಲಯದ ಪೂಜೆಯನ್ನು ರಾಮಕೃಷ್ಣನ ಅಣ್ಣನು ಒಪ್ಪಿಕೊಂಡನು ಬರುಬರುತ್ತ ಆ ಪೂಜೆಯ ಭಾರವು ರಾಮಕೃಷ್ಣನ ಮೇಲೆ ಬಿತ್ತು.

ಮೊದಲಿಂದಲೂ ದೇವರ ಹುಚ್ಚಿನಲ್ಲಿದ್ದ ರಾಮಕೃಷ್ಣನಿಗೆ ಕಾಳೀಪೂಜೆಯು ಸಿಕ್ಕಿದ್ದು ತೂಕಡಿಸುವವರಿಗೆ ಹಾಸಿಗೆ ಹಾಕಿದಂತೆ ಆಯಿತು ದೇವರ ಹುಚ್ಚು ಬಲಿತು ಅದೊಂದು ಬಿಟ್ಟು ಏನೂ ಬೇಡವೆನ್ನುವಂತಾಯಿತು ಅಂತಹವರಿಗೆ ದೇವರು ಒಲಿಯದಿರುವುದೂ ಉಂಟೆ? ದೇವರು ಕಾಳಿಯ ರೂಪಿನಲ್ಲಿಯೇ ರಾಮಕೃಷ್ಣರಿಗೆ ದರ್ಶನವಿತ್ತನು ಆಗ ಬಡಹುಡುಗನಾಗಿದ್ದ ರಾಮಕೃಷ್ಣನು ಸಾಧು ರಾಮಕೃಷ್ಣನಾದನು.

ಅಲ್ಲಿಂದಾಚೆಗೆ ರಾಮಕೃಷ್ಣರಿಗೆ ಹೊಸ ಹೊಸ ಅನುಭವಗಳು ಬಂದುವು. ಒಬ್ಬಯೊ ಗಿನಿಯು ಬಂದು ಇವರಿಗೆ ಯೋಗಶಾಸ್ತ್ರವನ್ನು ಕಲಿಸಿದಳು ತೋತಾಪುರಿಗಳೆಂಬ ಸನ್ಯಾಸಿಗಳು ಬಂದು ಇವರಿಗೆ ವೇದಾಂತವನ್ನು ಕಲಿಸಿಕೊಟ್ಟರು ಹಾಗೆಯೇ ರಾಮಕೃಷ್ಣರು ತಮ್ಮ ಯೋಗಬಲದಿಂದ, ಬೌದ್ಧ ಕ್ರೈಸ್ತ, ಮಹಮ್ಮದೀಯ ಮತಗಳನ್ನೆಲ್ಲ ಅಚರಿಸಿ ಅನುಭವಪಡೆದರು

ಇವರು ಈ ಅಭ್ಯಾಸದ ಕಾಲದಲ್ಲಿ ಅನೇಕವೇಳೆ ಮೈಮರೆಯುತ್ತಿದ್ದರಂತೆ. ಎಷ್ಟೋದಿನಗಳು ಅನ್ನಾಹಾರಗಳನ್ನು ಬಿಟ್ಟು "ಕಾಳೀಮಾತಾ" "ಕಾಳೀಮಾತಾ" ಎಂದು ಹಂಬಲಿಸುತ್ತ ತಿರುಗುತ್ತಿದ್ದರಂತೆ!



**ಶ್ರೀ ರಾಮಕೃಷ್ಣ ಪರಮಹಂಸ ದೇವರು**

ವಿವಿಧ ಧರ್ಮಗಳ ಸಾರವನ್ನು ಹೀರಿ ಜಗತ್ತಿಗೆ ಸಮಾನ ಧರ್ಮವನ್ನು ಕಂಡುಹಿಡಿದ ಮಹಾಯುಗದ ಪುರುಷರು.



ಶ್ರೀ ಶಾರದಾಮಣಿಯವರು

ಶ್ರೀ ರಾಮಕೃಷ್ಣ ಪರಮಹಂಸರ ಪತ್ನಿ

ಅಮೇರಿಕದಲ್ಲಿ ಯಾರೂ ಇವನಿಗೆ ಗೊತ್ತಿಲ್ಲ ಕೊನೆಗೆ ಅವರಿವರ ಪರಿಚಯವಾಗಿ ಈತನೂ ಸಮ್ಮೇಳನಕ್ಕೆ ಹೋದನು. ಈಸಲ ಕೊಟ್ಟಿರುವ ಚಿತ್ರವು ಆತನು ಅಲ್ಲಿಗೆ ಹೋದಾಗ ಧರಿಸಿದ್ದ ವೇಷ ಅಲ್ಲಿ ಆತನು ಹಿಂದೂ ಮತವನ್ನು ಕುರಿತು ಉಪನ್ಯಾಸ ಮಾಡಿದನು. ಆ ಉಪನ್ಯಾಸವನ್ನು ಕೇಳಿ ಎಲ್ಲರೂ ಬೆರಗಾದರು. ಎಲ್ಲರೂ ಹಿಂದೂ ಮತ, ಹಿಂದೂ ಸನ್ಯಾಸಿ, ಇವರ ಮಾತನ್ನಾಡುವವರೇ ! ಹೀಗಾಗಿ ಎಲ್ಲರಿಗೂ ಇಂಡಿಯದ ಕಡೆ ಮನಸ್ಸಾಯಿತು

ವಿವೇಕಾನಂದರು ಹೊರಗೆ ಹೋಗಿ ಇಂಡಿಯದ ಧರ್ಮ ವೇದಾಂತಗಳನ್ನು ಹೊಗಳಿದಂತೆಯೇ ಇಂಡಿಯದಲ್ಲಿರುವವರ ಬಡತನ, ಕೊಳಕುತನ, ಬುದ್ಧಿಹೀನತನ, ಇವುಗಳನ್ನು ನಿಂದಿಸಿ, ಅವುಗಳನ್ನು ಬಿಟ್ಟು ಬದುಕಿರಿ ಎಂದು ನವ ಗೆ ಬೋಧಿಸಿದರು

o o o o o o o o o

ರಾಮಕೃಷ್ಣರು ಯೋಗವನ್ನು ಅಭ್ಯಾಸಮಾಡಿದುದು ಅವರು ಯೌವ್ವನವಂತರಾಗಿದ್ದಾಗ ಆಗ ಅವರು ಇದ್ದುದನ್ನು ನೋಡಿ ಎಲ್ಲರೂ ಅವರಿಗೆ ಹುಚ್ಚು ಹಿಡಿಯಿತು ಎಂದು ಅವರಿಗೆ ಮದುವೆಯನ್ನು ಮಾಡಿಸಿದರು ಮದುವೆಯಾದ ಹೆಣ್ಣಿನ ಹೆಸರು ಶಾರದಾಮಣಿ ಎಂದು.

ಶಾರದಾಮಣಿಯರು ತಂದೆಯ ಮನೆಯಲ್ಲಿಯೇ ಇದ್ದರು ಗಂಡನು ತನ್ನನ್ನು ಬಂದು ಕರೆದುಕೊಂಡು ಹೋಗಲಿಲ್ಲ ಅದಕ್ಕಾಗಿ ಆಕೆಯೇ ಗಂಡನನ್ನು ನೋಡುವುದಕ್ಕೆ ಬಂದಳು. ಆಗ ಗಂಡನು " ನಿನ್ನನ್ನು ಮದುವೆಯಾಗಿದ್ದೇನೆ ನೀನು ಅಪ್ಪಣೆಕೊಟ್ಟರೆ ನಾನು ಬ್ರಹ್ಮಚಾರಿಯಾಗಿದ್ದು ಮುಂದಿನ ಸದ್ಗತಿಯನ್ನು ಸಾಧಿಸುತ್ತೇನೆ ಇಲ್ಲ ನಿನ್ನೊಡನೆ ಸಂಸಾರ ಮಾಡಿಕೊಂಡು ಇರಲೇಬೇಕು ಎಂದರೆ ಹಾಗೂ ಆಗಲಿ " ಎಂದರು ಶಾರದಾಮಣಿಯು "ಗಂಡನ ಯೋಗಕ್ಷೇಮವು ತನ್ನ ಸುಖಸಂತೋಷಗಳಿಗಿಂತ ಹೆಚ್ಚು" ಎಂದುಕೊಂಡಳು. ಆತನು ಬ್ರಹ್ಮಚಾರಿಯಾಗಿಯೇ ಇರಬಹುದು ಎಂದು ಅಪ್ಪಣೆಯನ್ನು ಕೊಟ್ಟಳು ತಾನೂ ಬ್ರಹ್ಮಚಾರಿಣಿಯಾಗಿಯೇ ಇದ್ದಳು.

ರಾಮಕೃಷ್ಣರ ಭಕ್ತರೆಲ್ಲರೂ ಆಕೆಯನ್ನು ಮಹಾಮಾತೆಯೆಂದು ಕರೆಯುತ್ತಾರೆ ಆಕೆಯ ಹೆಸರಿನಲ್ಲಿ ಎಷ್ಟೋ ಧರ್ಮಗಳನ್ನು ಮಾಡಿದ್ದಾರೆ.

o o o o o o

ಈಗ ರಾಮಕೃಷ್ಣರ ಹೆಸರಿನಲ್ಲಿ ಆಶ್ರಮಗಳು ಜಗತ್ತಿನಲ್ಲೆಲ್ಲಾ ಇವೆ ರಾಮಕೃಷ್ಣ ವಿವೇಕಾನಂದ ಇವರ ಹೆಸರುಗಳನ್ನು ಕೇಳದವರೇ ಇಲ್ಲ ಅವರ ಹೆಸರುಗಳನ್ನು ಹೇಳಿಕೊಂಡು ಕೃತಾರ್ಥರಾಗಿರುವವರು ಅನೇಕಾನೇಕ ಮಂದಿ

ರಾಮಕೃಷ್ಣರು ಯಾವ ಗ್ರಂಥಗಳನ್ನೂ ಬರೆದಿಲ್ಲ ವಿವೇಕಾನಂದರು ಅನೇಕಾನೇಕ ಗ್ರಂಥಗಳನ್ನು ಬರೆದಿದ್ದಾರೆ ಆ ಗ್ರಂಥಗಳಲ್ಲಿ ಹಲವು ನಮ್ಮ ಭಾಷೆಗೂ ಬಂದಿವೆ ಅವನ್ನೆಲ್ಲ ಓದು

ಬರುಬರುತ್ತ ಇವರ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತು. "ನನ್ನ ಶಿಷ್ಯರು ಕಡಲಿನಿಂದಾಚೆ ಇದ್ದಾರೆ" ಎಂದು ಎಷ್ಟೋ ಸಲ ಹೇಳುತ್ತಿದ್ದರಂತೆ.

ಇವರು ಹಗಲಿರುಳೆನ್ನದೆ ಕೆಲವು ವರ್ಷಗಳ ಕಾಲ ತಮ್ಮ ಬಳಿಬಂದವರಿಗೆ ಬೋಧಿಸಿದರು. ಅವರು ಗ್ರಂಥಗಳನ್ನು ಇಟ್ಟುಕೊಂಡು ಬಂದವರಿಗೆ ಪಾಠಹೇಳಲಿಲ್ಲ. ತಮ್ಮ ಹೃದಯದಲ್ಲಿ ಏನು ಹುಟ್ಟಿದರೆ ಅದನ್ನು ಹೇಳಿಬಿಡುವರು. ಅದೇ ಇತರರಿಗೆ ಉಪದೇಶವಾಗಿ ಅವರನ್ನು ಕಾಪಾಡುವುದು

ಇವರು ಕೊನೆಗೆ ಅತಿಯಾಗಿ ಮಾತನಾಡಿದ ಆಯಾಸದಿಂದ ಹುಟ್ಟಿದ ಗಂಟಲು ಹುಣ್ಣಿನ ಬೇನೆಯಿಂದ ದೇಹವನ್ನೂ ಇಹಲೋಕವನ್ನೂ ಬಿಟ್ಟರು

೦ ೦ ೦ ೦ ೦ ೦ ೦ ೦ ೦

ಇವರು ತಪಸ್ಸುಮಾಡುವುದಕ್ಕೆ ಆರಂಭಿಸಿದ ಕಾಳಿಕಾದೇವಾಲಯ ಕಲಿಕತ್ತೆಯ ಬಳಿಯಿದೆ. ಈಗ ಅದು ಬಹುಪ್ರಸಿದ್ಧವಾಗಿದೆ. ಅದಕ್ಕೆ ದಕ್ಷಿಣೇಶ್ವರದ ಕಾಳಿಕಾದೇವಾಲಯವೆಂದು ಹೆಸರು

ಇದನ್ನು ರಾಸಮ್ಮಣಿಯೆಂಬ ಒಬ್ಬ ಜಹಗೀರುದಾರಿಣಿಯು ಕಟ್ಟಿಸಿದಳು. ಆಕೆಯು ಜಾತಿಯಲ್ಲಿ ಶೂದ್ರರವಳು ಅದರಿಂದ ಆಚಾರಶೀಲರಾದ ಬ್ರಾಹ್ಮಣರು ಯಾರೂ ಆಕೆಯ ಕಟ್ಟಿಸಿದ ದೇವಸ್ಥಾನದಲ್ಲಿ ಪೂಜಾರಿಗಳಾಗಿರಲು ಒಪ್ಪಲಿಲ್ಲ ಕೊನೆಗೆ ರಾಮಕೃಷ್ಣರು ಅಣ್ಣನು ತನ್ನ ಬಡತನವನ್ನು ತಡೆಯಲಾರದೆ ಒಪ್ಪಿಕೊಂಡನು

ರಾಮಕೃಷ್ಣರು ಪೂಜಾರಿಗಳಾಗಿದ್ದಾಗ ರಾಸಮಣಿಯ ಅಳಿಯನಾದ ಮಥುರ ಬಾಬುವು ಆ ದೇವಸ್ಥಾನ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದನು ಒಂದು ದಿನ ರಾಸಮಣಿಯು ದೇವರ ದರ್ಶನಕ್ಕೆ ಬಂದಿದ್ದಾಗ ಒಂದು ವಿಚಿತ್ರವು ನಡೆಯಿತಂತೆ. ಪೂಜಾರಿಯು ಮಂಗಳಾರತಿ ಕೊಡುವುದಕ್ಕೆ ಬಂದಿದ್ದವನು ಜಹಗೀರುದಾರಿಣಿಗೆ ಕಪಾಳಕ್ಕೆ ಬಿಮ್ಮನೆ ಒಂದೇಟು ಬಿಗಿದು "ಇಲ್ಲಿಯೂ ಹಾಳು ಕೋರ್ಟಿನ ಯೋಚನೆಯೇನೆ? ಲೋಕಮಾತೆಯ ದರ್ಶನ ಮಾಡಿ ಕೃತಾರ್ಥಗಳಾಗದೆ?" ಎಂದರಂತೆ

ಎಲ್ಲರೂ ಗಾಬರಿಯಾದರು ಮಥುರ ಬಾಬುವು 'ಈ ಪೂಜಾರಿಯು ದುಷ್ಟ! ಇವನನ್ನು ಕೆಲಸದಿಂದ ಕಿತ್ತುಹಾಕಬೇಕು" ಎಂದುಕೊಂಡನಂತೆ. ರಾಸಮಣಿಯು "ಆತನು ಮಾಡಿದುದು ಸರಿ. ಇವತ್ತು ನನ್ನ ಮನಸ್ಸೆಲ್ಲವೂ ಕೋರ್ಟಿನ ವ್ಯವಹಾರವನ್ನೇ ಕುರಿತು ಚಿಂತಿಸುತ್ತಿತ್ತು ಅಮ್ಮನವರನ್ನು ಕಣ್ಣು ಕಾಣುತ್ತಿದ್ದರೂ ಮನಸ್ಸು ನೋಡುತ್ತಿರಲಿಲ್ಲ. ಆತನು ನನಗೆ ಬುದ್ಧಿ ಕಲಿಸಿದ ಗುರು "ಎಂದು ಹೇಳಿ, ಪೂಜಾರಿಗೆ ವಂದಿಸಿದಳಂತೆ.



**ದಕ್ಷಿಣೇಶ್ವರದ ಕಾಳಿದೇವಾಲಯ**

(ಇಲ್ಲಿಯೇ ಶ್ರೀ ರಾಮಕೃಷ್ಣಪರಮಹಂಸರು ಸಗುಣ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡುದು.)



**ಶ್ರೀ ಸ್ವಾಮಿ ವಿವೇಕನಂದರವರು**

ಉಜ್ವಲ ಸ್ಫೂರ್ತಿಯಿಂದ ಅಖಂಡ ಪ್ರಪಂಚದಲ್ಲಿ ವೇದಾಂತ ಡಿಂಡಿಮವನ್ನು
ಬಾರಿಸಿ ಕ್ರಾಂತಿಯನ್ನುಂಟುಮಾಡಿದವರು.

ರಾಸಮಣಿ, ಮಧುರಬಾಬು ಇಬ್ಬರೂ ರಾಮಕೃಷ್ಣರನ್ನು ತಮ್ಮ ಕೊನೆಯ ಕಾಲ ದವರೆಗೂ ಸೇವಿಸಿ ಧನ್ಯರಾದರು. ಅವರು ರಾಮಕೃಷ್ಣರನ್ನು ಕರೆದುಕೊಂಡು ಹೋಗಿ ಪ್ರಯಾಗೆ, ಗಯಾ, ಕಾಶಿ, ಮಥುರಾ, ಬೃಂದಾವನ ಮೊದಲಾದ ಪ್ರಸಿದ್ಧ ಕ್ಷೇತ್ರಗಳ ಯಾತ್ರೆಯನ್ನು ಮಾಡಿಕೊಂಡುಬಂದರು

ಈ ದೇವಾಲಯದ ಮಗ್ಗುಲಲ್ಲಿ ರಾಮಕೃಷ್ಣರು ಒಂದು ಪಂಚವಟಿಯನ್ನು ಸ್ಥಾಪಿಸಿ ದರು ಅಲ್ಲಿಯೇ ಅವರು ಬಹಳ ಕಾಲ ತಪಸ್ಸು ಮಾಡಿಕೊಂಡಿದ್ದುದು ಈ ದೇವಾ ಲಯವು ಗಂಗಾತೀರದಲ್ಲಿದೆ ರಾಮಕೃಷ್ಣರ ಭಕ್ತರೆಲ್ಲರೂ ಈ ದೇವಸ್ಥಾನಕ್ಕೆ ಹೋಗಿ ದರ್ಶನಮಾಡಿಕೊಂಡು ಬರುತ್ತಾರೆ

o o o o o o

ರಾಮಕೃಷ್ಣರ ದರ್ಶನಕ್ಕೆ ಅನೇಕರು ಬರುತ್ತಿದ್ದರು ಅವರಲ್ಲಿ ನರೇಂದ್ರನಾಥ ನೆಂಬುವನೂ ಒಬ್ಬನು. ಅವನು ಕಾಲೇಜಿನಲ್ಲಿ ಓದಿದವನು ಅವನಿಗೆ ದೇವರು ದಿಂಡರು ಇದಾವುದರಲ್ಲಿಯೂ ನಂಬಿಕೆಯೇ ಇಲ್ಲ, ಅಷ್ಟೇ ಅಲ್ಲ, ಹಾಗೆ ನಂಬಿರುವವರು ಯಾರಾದರೂ ಸಿಕ್ಕಿ ದರೆ ಅವರನ್ನು ಹಾಸ್ಯಮಾಡುವನು ಗೇಲೀ ಮಾಡಿಬಿಡುವನು ಇಂಥ ನರೇಂದ್ರನು ಬರು ಬರುತ್ತ ರಾಮಕೃಷ್ಣರ ಪಟ್ಟಶಿಷ್ಯನಾದನು.

ನರೇಂದ್ರನ ಚಿಕ್ಕಪ್ಪನು ರಾಮಕೃಷ್ಣರ ಭಕ್ತ ದಿನವೂ ಅವರ ಬಳಿಗೆ ಹೋಗಿ ಬರುತ್ತಿದ್ದನು. ಒಂದು ದಿನ ನರೇಂದ್ರನು ಚಿಕ್ಕಪ್ಪನನ್ನು ಹಾಸ್ಯಮಾಡಿದನು. ಆತನು "ನೀನು ಪರಮಹಂಸರ ಬಳಿಗೆ ಬಾ ಅವರು ನಿನಗೆ ಅದನ್ನೆಲ್ಲ ಹೇಳುವರು" ಎಂದನು. ನರೇಂದ್ರನು "ನೋಡುವೆಯಂತೆ, ನಿನ್ನ ಗುರುವನ್ನೂ ನಿನ್ನನ್ನೂ ಇಬ್ಬರನ್ನೂ ಹಾರಿಸಿ ಬಿಡುತ್ತೇನೆ" ಎಂದು ಗರ್ವದಿಂದ ಮಾತನಾಡಿಕೊಳ್ಳುತ್ತಾ ರಾಮಕೃಷ್ಣರ ಬಳಿಗೆ ಬಂದನು ರಾಮಕೃಷ್ಣರು ಇವನನ್ನು ಕಂಡಕೂಡಲೇ 'ಅಪ್ಪಾ! ಇಷ್ಟುದಿನವೂ ಯಾಕೋ ಬರಲಿಲ್ಲ? ಈಗಲಾದರೂ ಬಂದೆಯಲ್ಲಾ" ಎಂದು ತಬ್ಬಿಕೊಂಡರು ನರೇಂದ್ರನಿಗೆ ಅವರು ಮುಟ್ಟುತ್ತಲೂ ಮೈನಡುಗಿಹೋಯಿತು ಆದರೂ "ನೀವು ದೇವರನ್ನು ಕಂಡಿರುವಿರಾ? ನನಗೆ ತೋರಿಸುವಿರಾ?" ಎಂದು ಕೇಳಿದನು ರಾಮಕೃಷ್ಣರು ನಗುನಗುತ್ತಾ "ಕಂಡಿ ದ್ದೇನೆ ತೋರಿಸುತ್ತೇನೆ" ಎಂದು ಹೇಳಿದರು. ಅನುಗ್ರಹಮಾಡಿ ದೇವರ ದರ್ಶನ ಮಾಡಿಸಿದರು, ನರೇಂದ್ರನು ವಿವೇಕಾನಂದನಾದನು.

ರಾಮಕೃಷ್ಣರು ತಾವು ಪರಲೋಕಕ್ಕೆ ತೆರಳುವಾಗ ತಮ್ಮ ಪ್ರಭಾವವೆಲ್ಲವನ್ನೂ ವಿವೇಕಾನಂದನಿಗೆ ಒಪ್ಪಿಸಿ ಹೊರಟುಹೋದರು ವಿವೇಕಾನಂದನು (ಈಗ ಸನ್ಯಾಸಿ) ಇಂಡಿಯವೆಲ್ಲವನ್ನು ಪಾದಚಾರಿಯಾಗಿ ತಿರುಗಿ, ಕೊನೆಗೆ ಅಮೇರಿಕದಲ್ಲಿ ನಡೆದ ಸರ್ವ ಧರ್ಮಸಮ್ಮೇಳನಕ್ಕೆ ಹೋದನು

# ನೀನಾರು?

(ಒಂದು ಹಾಡು)

ಕುರುಡರು ನಿನ್ನನು ನೋಡುವರು ।
ಕಿವುಡರು ನಿನ್ನನು ಕೇಳುವರು ॥ಪ॥

ಅವರಾ ಕಂಗಳ । ಭೂಮಿಯ ವಸ್ತುಗಳು ।
ಮೋಹಿಸಿ ಬಂಧಿಸಲಿಲ್ಲ ॥

ಅವರಾ ಕಿವಿಗಳ । ಭುವಿಯ ರಾಗಗಳು ।
ಮೋಹಿಸಿ ಎಳೆತರಲಿಲ್ಲ ॥

ಅವರು ನಯನಗಳ । ಶೂನ್ಯವಾಗಿರಿಸೆ ।
ಅವುಗಳ ತುಂಬುವೆ ನೀನು ॥

ಅವರಾ ಕಿವಿಗಳು । ರವರಹಿತವಾಗೆ ।
ಅವುಗಳಲುಲಿಯುವೆ ನೀನು ॥

ಕಿಶೋರ ಚಂದ್ರವಾಣಿ.

# ಅಣ್ಣನು ಬರೆದ ಕಾಗದ

## ನಿನಗೆ ಹ್ಯಾಗೆ ಬರುತ್ತೆ?

ಮಗು, ನೀನು ಇರುವುದು ಒಂದು ಊರು. ನಾನು ಇರುವುದು ಮತ್ತೊಂದು ಊರು. ನಮ್ಮ ಇಬ್ಬರಿಗೂ ನೂರಾರು ಮೈಲಿಗಳ ದೂರವಿದೆ ಆದರೂ ಕೂಡ, ನಿನಗಾಗಿ ನಾನು ಬರೆದ ಕಾಗದಗಳೆಲ್ಲವೂ ತಪ್ಪದೆ ನಿನಗೆ ತಲುಪುತ್ತವೆ (ಸೇರುತ್ತವೆ) ಈ ಸಂಗತಿಯು ನಿನಗೆ ಆಶ್ಚರ್ಯವನ್ನು ಉಂಟುಮಾಡಬಹುದು.



ನಾನು "ಮಕ್ಕಳ ಪುಸ್ತಕ"ದ ಕಚೇರಿಯಲ್ಲಿ ಕೂತು ನಿನಗಾಗಿ ಒಂದು ಕಾಗದ ಬರಿಯುತ್ತೇನೆ ಕಾಗದ ಬರೆದು ಮುಗಿದನಂತರ, ಕಾಗದದ ಒಂದು ಚೀಲದಲ್ಲಿ ಹಾಕಿ ಚೀಲದ ಬಾಯಿ ಮುಚ್ಚಿ (ಕವರ್) ಚೀಲದ ಮೇಲೆ, ನಿನ್ನ ಹೆಸರು ಮತ್ತು ನಿನ್ನ ಊರಿನ ಹೆಸರು (ವಿಳಾಸ) ಇವುಗಳೆರಡನ್ನೂ ಬರೆದು ತಲೆ ಚೀಟಿಯನ್ನು ಹಚ್ಚಿ (ಸ್ಟಾಂಪು) ಕಾಗದದ ಚೀಲವನ್ನು (ಕವರ್) ತೆಗೆದುಕೊಂಡು, ಹೋಗಿ, ರಸ್ತೆಗಳ ಪಕ್ಕಗಳಲ್ಲಿ ನಿಲ್ಲಿಸಿರುವ, ಕೆಂಪು ಬಣ್ಣದ ಪೆಟ್ಟಿಗೆಯೊಂದರಲ್ಲಿ (ಪೋಸ್ಟುಬಾಕ್ಸ್ ಅಥವಾ ಅಂಚೆಪೆಟ್ಟಿಗೆ) ಅಥವಾ ಅಂಚೆಮನೆಯಲ್ಲಿ ಹಾಕುತ್ತೇನೆ ಇದರಂತೆಯೇ, ನಮ್ಮ ಊರಿನ ಅನೇಕ ಜನರು ತಮ್ಮ ಕಾಗದಗಳನ್ನೂ ಅಂಚೆಯ ಪೆಟ್ಟಿಗೆಯಲ್ಲಿ ಹಾಕುತ್ತಾರೆ ಒಂದು ಗೊತ್ತಾದ ಕಾಲಕ್ಕೆ





ಸರಿಯಾಗಿ, ಒಬ್ಬ ಅಂಚೆಯ ಆಳು ಬಂದು ಪೆಟ್ಟಿಗೆಯ ಬೀಗವನ್ನು ತೆಗೆದು ಅದರಲ್ಲಿರುವ ಕಾಗದಗಳನ್ನು ಒಂದು ಚೀಲದಲ್ಲಿ ಹಾಕಿಕೊಂಡು ಅಂಚೆಕಛೇರಿಗೆ ಹೋಗುತ್ತಾನೆ. ಅಲ್ಲಿಯ ಯಜಮಾನರು (ಪೋಸ್ಟು ಮಾಸ್ಟರು), ಎಲ್ಲಾ ಕಾಗದಗಳ ತಲೆ ಚೀಟಿಯ ಮೇಲೆ, ಆ ದಿವಸದ ತಾರೀಖು ಮತ್ತು ಊರಿನ ಹೆಸರು ಇರುವ ಮುದ್ರೆಯನ್ನು ಒತ್ತಿಸಿ ಆಯಾ ಊರುಗಳಿಗೆ

ಕಳುಹಿಸಲು ಬೇರೆ ಬೇರೆ ಚೀಲಗಳಲ್ಲಿ ಹಾಕುತ್ತಾರೆ. ಒಂದು ಸಣ್ಣಮುದ್ರೆಹಾಕಿದ ತಲೆಚೀಟಿಯನ್ನು ಪುನಃ ಉಪಯೋಗಿಸಲು ಆಗುವುದಿಲ್ಲ. ಚೀಲಗಳ ಬಾಯಿಗೆ ಬೀಗ ಹಾಕಿದನಂತರ, ಇದನ್ನು ಹತ್ತಿರವಿರುವ ರೈಲು ಸ್ಟೇಷನ್‌ಗೆ (ರೈಲು ನಿಲ್ಲುವ ಸ್ಥಳ) ಒಂದು ಗಾಡಿಯಲ್ಲಾಗಲೀ ಅಥವಾ ಮೋಟಾರಿನಲ್ಲಾಗಲೀ, ತೆಗೆದ ಕೊಂಡು ಹೋಗಿ ಹಾಕುತ್ತಾರೆ ಆ ರೈಲು ಅಲ್ಲಿಂದ ಬೇರೆ ಊರುಗಳಿಗೆ ಅದನ್ನು ಸಾಗಿಸುತ್ತದೆ ಮಧ್ಯೆ ದಾರಿಯಲ್ಲಿ ಆಯಾ ಹೆಸರಿನ ಚೀಲಗಳನ್ನು ಕೊಟ್ಟು ಮುಂದೆ ಹೊರಟು ಹೋಗುತ್ತದೆ.





ರೈಲಿನಲ್ಲಿರುವ ಅಂಚೆಯವನು ಚೀಲದ ಬಾಯನ್ನು ಒಡೆದು ಕಾಗದಗಳನ್ನೆಲ್ಲಾ ತೆಗೆದು ಒಂದೊಂದು ಊರಿನ ಕಾಗದಗಳನ್ನೆಲ್ಲಾ ಒಂದೊಂದು ಚೀಲಕ್ಕೆ ಹಾಕಿ ಪುನಃ ಬಾಯಿಗಳನ್ನು ಭದ್ರಪಡಿಸುತ್ತಾರೆ. ರೈಲು ಗಾಡಿಯು ನಿಮ್ಮ ಊರಿನ ಹತ್ತಿರ ಬರುವ ವೇಳೆಗೆ ಅಲ್ಲಿಯ ಅಂಚೆಯ ಜವಾನನೊಬ್ಬನು ಕಾಣುತ್ತಾನೆ.



ಸ್ಟೇಷನ್‌ಗೆ ರೈಲು ಬಂದ ಒಡನೆಯೇ ನಿಮ್ಮೂರಿನ ಹೆಸರಿನ ಕಾಗದಗಳ ಚೀಲವನ್ನು ಜವಾನನು ನಿಮ್ಮ ಊರಿನ ಅಂಚೆಯ ಕಛೇರಿಗೆ ಒಯ್ಯುತ್ತಾನೆ ಅಲ್ಲಿಯ ಪೋಸ್ಟುಮಾಸ್ಟರು ಚೀಲವನ್ನು ಒಡೆದು ಎಲ್ಲಾ ಕಾಗದಗಳ ಮೇಲೂ ನಿಮ್ಮ ಊರಿಗೆ ತಲಪಿದ ತಾರೀಖು ಮತ್ತು ಹೆಸರು ಇರುವ ಮುದ್ರೆಯೊಂದನ್ನು ಒತ್ತಿ ಆಳಿನ ಕೈಲಿ ಕೊಡುತ್ತಾರೆ. ಕಾಗದಗಳನ್ನೆಲ್ಲಾ ಜೋಡಿಸಿಕೊಂಡು ಅಂಚೆಯ



ಆಳು ನಿಮ್ಮಮನೆಯ ಬಳಿ ಬಂದು "ಪೋಸ್ಟ ಮ್ಯಾನ್" ಎಂದು ಕೂಗಿದವಡನೆಯೇ, ಯಾರಾದರೂ ಬಂದು ಅಂಚೆಯ ಮನುಷ್ಯನಿಂದ ಕಾಗದವನ್ನು ಪಡೆಯುತ್ತಾರೆ.



---

# ತಮಿಳುವೇದ

ತಮಿಳು ನಮ್ಮ ಕನ್ನಡಕ್ಕೆ ಬಹಳ ಹತ್ತಿರದ ಭಾಷೆ. ತೆಲುಗು ಬಿಟ್ಟರೆ ಇನ್ನಾವ ಭಾಷೆಯೂ ಕನ್ನಡಕ್ಕೆ ಅಷ್ಟು ಹತ್ತಿರಲಿಲ್ಲ. ಆದರೂ ನಮ್ಮಲ್ಲಿ ಯಾರೂ ತಮಿಳನ್ನು ಅಷ್ಟು ಚೆನ್ನಾಗಿ ಓದುವುದಿಲ್ಲ. ಏನಿದ್ದರೂ ತಮಿಳರೊಡನೆ ಮಾತನಾಡುವಾಗ ಹರಕು ಬರಕಾಗಿ ಮಾತನಾಡುವುದಕ್ಕೆ ಮಾತ್ರ ನಮಗೆ ಬರುತ್ತದೆ ಆ ಭಾಷೆಯನ್ನು ಚೆನ್ನಾಗಿ ಬಲ್ಲ ವಿದ್ವಾಂಸರು ಇಂತಹ ತಮಿಳನ್ನು ಕೊಚ್ಚೆ ತಮಿಳು ಎನ್ನುತ್ತಾರೆ ಯಾವ ಭಾಷೆಯಾಗಲೀ ನಾವು ಸೊಟ್ಟು ಸೊಟ್ಟಾಗಿ ಮಾತನಾಡಿದರೆ, ಆ ಭಾಷೆಯನ್ನು ಬಲ್ಲವರಿಗೆ, ಅದರ ಮೇಲೆ ವಿಶ್ವಾಸ ಇಟ್ಟುಕೊಂಡಿರುವರಿಗೆ ಬೇಸರವಾಗುತ್ತದೆ ಆದರಿಂದ ಯಾವ ಭಾಷೆಯಾಗಲೀ ಕಲಿತು ಮಾತನಾಡಬೇಕು.

ತಮಿಳುಕೂಡ ಬಹಳ ಪುರಾತನವಾದ ಭಾಷೆ ಈ ಭಾಷೆಯಲ್ಲಿ ಸುಮಾರು ಎರಡು ಸಾವಿರವರ್ಷಗಳ ಹಿಂದೆ ಬರೆದ ಗ್ರಂಥಗಳು ಇವೆ ತಮಿಳುದೇಶದಲ್ಲಿ ಅಷ್ಟು ಹಿಂದಿನ ಕಾಲದಲ್ಲಿಯೇ "ಸಂಘ"ಗಳಿದ್ದುವು ಇವು ರಾಜರ ಆಶ್ರಯದಲ್ಲಿ ಇದ್ದ ವಿದ್ವಾಂಸರು ಸೇರಿ ಸ್ಥಾಪಿಸಿಕೊಂಡಿದ್ದ ಸಂಘಗಳಿವು. ಈ ಸಂಘಗಳು ಒಪ್ಪಿಕೊಳ್ಳದ ಗ್ರಂಥಗಳನ್ನು ಆಗ ಯಾರೂ ಗೌರವಿಸುತ್ತಿರಲಿಲ್ಲವಂತೆ. ಈ ಸಂಘಗಳ ಮಧುರೆಯಲ್ಲಿದ್ದವಂತೆ

ಈ ಭಾಷೆಯಲ್ಲಿ 'ತೊಳಕಾಪ್ಪಿಯಂ" ಎಂಬ ಪುರಾತನ ವ್ಯಾಕರಣವಿದೆ. ಅದನ್ನು ಬರೆದಿರುವುದು ಪದ್ಯರೂಪದಲ್ಲಿ ಇದರಲ್ಲಿ ಆಗಿನ ಕಾಲದಲ್ಲಿದ್ದ ಅನೇಕಾನೇಕ ಗ್ರಂಥಗಳ ಒಂದೊಂದು ಚೂರು ಬಂದಿದೆ ಇದರಲ್ಲಿ '.ಪೊರುಳಡಿಗಾರಂ" ಎಂಬ ಭಾಗವೊಂದಿದೆ. ಅದರಲ್ಲಿ ಆಗಿನ ಕಾಲದ ಜನರು ಹೇಗಿದ್ದರು ಏನು ಎಂಬುದನ್ನು ಕುರಿತು ಬೇಕಾದಷ್ಟು ಹೇಳಿದೆ

ಪುರಾತನ ತಮಿಳು ಭಾಷೆಯಲ್ಲಿ ಪುಗಂ, ಅಹಂ ಎಂಬ ಎರಡು ಜಾತಿಯ ಪದ್ಯಗಳಿದ್ದುವು. ಅವು ಯುದ್ಧ, ಪ್ರೇಮಗಳನ್ನು ಕುರಿತು ಹಾಡಿದ ಹಾಡುಗಳು ಇವರಲ್ಲಿ ಶಿಲಪ್ಪಧಿಕಾರಂ, ಮಣಿಮೇಖಲೆ ಯೆಂಬ ಭಾರಿಯ ಕಾವ್ಯಗಳುಂಟು ಇವೆಲ್ಲದಕ್ಕಿಂತಲೂ ಹಳದು 'ಕುರಳ" ಎಂಬ ಗ್ರಂಥ.

ಈ ಕುರಳ' ಎಂಬುದು ಒಂದು ಧರ್ಮಶಾಸ್ತ್ರ ಗ್ರಂಥದಂತಿದೆ. ಏನು ಮಾಡಬೇಕು ಏನು ಬಿಡಬೇಕು ಎಂಬುದನ್ನು ಹೇಳುವುದಕ್ಕೆ ಹೊರಟಿರುವ ಗ್ರಂಥವಿದು ತಮಿಳರು ಇದನ್ನು ವೇದಕ್ಕೆ ಸಮಾನವೆಂದು ಭಾವಿಸಿ, ಇದನ್ನು "ತಮಿಳುವೇದ" ಎಂದು ಕರೆಯುತ್ತಾರೆ.

# ಈ ಸ್ಪರ್ಧೆಯ ನಿಯಮಗಳು.

೧. ಮಕ್ಕಳ ಪುಸ್ತಕದಲ್ಲಿರುವ ಚೌಕಬಂಧದ ಕಾಗದವನ್ನು ಹರಿದುಕೊಂಡು, ಅದರಲ್ಲಿ ಅಕ್ಷರಗಳನ್ನು ಬರೆದು ಕಳುಹಿಸತಕ್ಕದ್ದು. ೨ ಪ್ರತಿಯೊಂದು ಉತ್ತರದ ಜೊತೆಯಲ್ಲಿಯೂ ಒಂದು ಆಣೆ ಸ್ಟಾಂಪು ಇಡತಕ್ಕದ್ದು. ೩ ಸರಿಯಾದ ಉತ್ತರವು ಹಲವರಿಂದ ಬಂದರೆ ಚೀಟಿಯನ್ನು ಹಾಕಿ ಯಾರಹೆಸರು ಬಂದರೆ ಅವರಿಗೆ ಬಹುಮಾನವನ್ನು ಕೊಡಲಾಗುವುದು. ೪ ಮೊದಲನೆಯ ಬಹುಮಾನ ಎರಡು ರೂಪಾಯಿ ಎರಡನೆಯ ಬಹುಮಾನ ಪುಸ್ತಕದ ಬಹುಮಾನ ೨೦ ೫ ಮಕ್ಕಳ ಪುಸ್ತಕದ ಸಂಪಾದಕರ ತೀರ್ಮಾನವೇ ಕೊನೆಯಾಗಿರತಕ್ಕದ್ದು ೬ ಮಕ್ಕಳ ಪುಸ್ತಕದ ಕಚೇರಿಗೆ ಉತ್ತರಗಳು ೨೦ನೆಯ ತಾರೀಖಿನೊಳಗೆ ಬರಬೇಕು ೭ ದಯವಿಟ್ಟು ನಿಮ್ಮ ರಿಜಿಸ್ಟರ್ ನಂಬರನ್ನು ಹಾಕಿರಿ. (ಮಕ್ಕಳ ಪುಸ್ತಕಕ್ಕೆ ಸುತ್ತಿರುವ ಕಾಗದದ ಮೇಲೆ ಎಡಗಡೆ ಈ ನಂಬರು ಇರುತ್ತದೆ.) ೮ ಈ ಸ್ಪರ್ಧೆಯನ್ನು ಏರ್ಪಡಿಸಿರುವುದು ಮಕ್ಕಳಿಗಾಗಿ, ಅದರಿಂದಲೇ ಇಷ್ಟು ಸುಲಭವಾಗಿರುವುದು ದೊಡ್ಡವರು ಈ ಸ್ಪರ್ಧೆಗೆ ನಿಲ್ಲಬಾರದಾಗಿ ಪ್ರಾರ್ಥನೆ.

## ಚೌಕಬಂಧ ಸ್ಪರ್ಧೆ

| | | | | |
|---|---|---|---|---|
| ೧ | | ೨ | | ೩ |
| | ೪ | | ೫ | |
| ೬ | | ೭ | | ೮ |
| | ೯ | | ೧೦ | |
| ೧೧ | | ೧೨ | | ೧೩ |

ರಿಜಿಸ್ಟರು ನಂಬರು......

............ ....

ಸ್ಟಾಂಪು ಇಲ್ಲಿ ಹಚ್ಚಿ

ಉತ್ತರಬರೆದವರ ವಿಳಾಸ :—

೧,೪,೭, ಕೃಷ್ಣನವಾದ್ಯ ೬,೯,೧೨, ನೆಂಟರಗುಂಪು ೧೧,೧೨,೧೧, ಮಾರುವ ಸ್ಥಳ ೧೩,೧೨, ಕೊಟ್ಟಿಯಲ್ಲಿ ಹುಟ್ಟಿದವನು ೧೩,೧೧, ಸಾಯುವುದು. ೮,೧೦, ದೇವಾಲಯ ೩,೫,೭, ರಾಮಭಕ್ತನಾದ ಪ್ರಾಣಿ ೮,೫, ಹಳ್ಳ ೨,೫, ಕಾಲಿನ ಆಭರಣ

# ಪುರಂದರದಾಸರು

ಪುರಂದರದಾಸರ ಕಥೆಯು ವಿಚಿತ್ರವಾದುದು. ಮೊದಲು ಅವರು ಬಹಳ ದೊಡ್ಡ ಸಾಹುಕಾರರು. ಆದರೆ ಒಂದು ಕಾಸು ಕೂಡ ಇತರರಿಗೆ ಕೊಡರು. ಕಾಸಿರಲಿ, ಕಾಸಿನ ಮೇಲಿನ ಧೂಳೂ ಕೊಡದಂತಹ ಜಿಪುಣ.

ಒಮ್ಮೆ ಒಬ್ಬ ಬ್ರಾಹ್ಮಣನು ಇವರ ಬಳಿಗೆ ಬಂದು "ಸ್ವಾಮೀ! ನನ್ನ ಮಗನಿಗೆ ಉಪನಯನವಾಗಬೇಕು. ಏನಾದರೂ ಸಹಾಯ ಮಾಡಿ" ಎಂದು ಬೇಡಿಕೊಂಡನು. ಈತನು ಅವನನ್ನು ಎಷ್ಟೋ ದಿನ "ಈಗ ಬಾ ಆಗ ಬಾ" ಎಂದು ಅಲೆಯಿಸಿ ಕೊನೆಗೆ ಒಂದು ಸವಕಲು ಕಾಸು ಕೊಟ್ಟನು. ಆ ಬ್ರಾಹ್ಮಣನು ಅದರಿಂದ ಫಲವಿಲ್ಲವೆಂದು ಅದನ್ನು ತೆಗೆದುಕೊಳ್ಳಲಿಲ್ಲ.

ಅವನು ಹಾಗೆಯೇ ಹೋಗಿ ಅವರ ಹೆಂಡತಿಯನ್ನು ಬೇಡಿಕೊಂಡನು. ನಡೆದುದು ಎಲ್ಲವನ್ನೂ ಕೇಳಿ ಆಕೆಯು ಬಲುವಾಗಿ ಮರುಗಿದಳು. ಕೊನೆಗೆ ತನಗೆ ತವರುಮನೆಯವರು ಕೊಟ್ಟಿದ್ದ ಒಂದು ಮೂಗು ಬಟ್ಟನ್ನು ಕೊಟ್ಟುಕಳುಹಿಸಿದಳು.

ಆ ಬ್ರಾಹ್ಮಣನು ಅದನ್ನು ತೆಗೆದುಕೊಂಡು ಮಾರುವುದಕ್ಕೆ ಅವರ ಬಳಿಗೇ ಹೋದನು. ಗಂಡನು ಹೆಂಡತಿಯ ಮೂಗುಬಟ್ಟು ಗುರುತಿಸುವುದು ಕಷ್ಟವೇ? ಗುರುತಿಸಿ ಎಲ್ಲಿಂದ ಬಂತು ಎಂದು ವಿಚಾರಿಸಿದನು. ಬ್ರಾಹ್ಮಣನು ಏನೇನೋ ಹೇಳಿದನು. ಅವನ ಅನುಮಾನವು ಬಲಿತು, ಮನೆಗೆ ಹೋಗಿ ನೋಡಬರಬೇಕೆನ್ನಿಸಿ ಮನೆಗೆ ಹೋದನು.

ಅಲ್ಲಿ ಹೆಂಡತಿಯ ಮೂಗು ಬರಿದಾಗಿದೆ. ಗಂಡನು ಗದರಿಸಿಕೊಂಡು "ಎಲ್ಲಿ ಮೂಗುಬಟ್ಟು! ಎಂದು ಕೇಳಿದನು. ಹೆಂಡತಿಯು ಹೆದರಿ ಎಲ್ಲಿಯೋ ಇಟ್ಟಿದ್ದೇನೆ ಹುಡುಕಿ ತರುತ್ತೇನೆ ಎಂದಳು. ಒಳಗೆ ಹೋಗಿ "ಸ್ವಾಮಿ! ಕೃಷ್ಣಾ! ನಿನಗೆ ತೃಪ್ತಿಯಾಗಲಿ ಎಂದು ನಾನು ಅದನ್ನು ಕೊಟ್ಟೆ. ಈಗ ಹೀಗೆ ಮಾಡಿದೆ, ನಿನ್ನಿಚ್ಛೆಯಿದ್ದಂತಾಗಲಿ" ಎಂದು ವಿಷವನ್ನು ಕುಡಿದು ಪ್ರಾಣವನ್ನು ಬಿಡುವುದಕ್ಕೆ ಸಿದ್ಧಳಾದಳು. ವಿಷವನ್ನು ಕುಡಿಯಲು ಬಟ್ಟಲನ್ನೆತ್ತಿದಾಗ, ಅದರಲ್ಲಿ ಏನೋ ಥಳಥಳ ಎಂದಿತು. ನೋಡಿದರೆ ಮೂಗು ಬಟ್ಟು. ಆಕೆಯು ಅದನ್ನು ನೋಡಿ ದೇವರಿಗೆ ಕೈ ಮುಗಿದು, ಅದನ್ನು ತಂದು ಗಂಡನಿಗೆ ಕೊಟ್ಟಳು.

ಗಂಡನಿಗೆ ಅನುಮಾನವಾಯಿತು. ಅಂಗಡಿಗೆ ಹೋಗಿನೋಡಿದನು. ಅಲ್ಲಿ ಮೂಗು ಬಟ್ಟು ಇರಲಿಲ್ಲ. ಆಗ ಅವನಿಗೆ ಜ್ಞಾನೋದಯವಾಯಿತು. ಕೂಡಲೇ ಬಂದು ಹೆಂಡತಿಗೆ ಅಡ್ಡಬಿದ್ದು "ನಿನ್ನಿಂದ ಉದ್ಧಾರವಾದೆನು" ಎಂದು ಇದ್ದುಬದ್ದುದೆಲ್ಲವನ್ನೂ ದಾನಮಾಡಿ ದಾಸನಾಗಿ ಹೊರಟನು.

ಪುರಂದರದಾಸರು ಹರಿಭಕ್ತ ಶಿರೋಮಣಿಗಳು. ಅವರು ಹಾಡಿರುವ ಅನೇಕಾನೇಕ ಪದಗಳು ನಮ್ಮ ದೇಶವಲ್ಲಿ ತುಂಬಿಹೋಗಿವೆ. ಸಂಗೀತಗಾರರು ಸಂಗೀತಪಾಠವನ್ನು ಆರಂಭಿಸುವುದು ಇವರ ಗೀತಗಳಿಂದ. ಇವರನ್ನು ಅನೇಕರು ನಾರದರ ಅವತಾರವೆನ್ನುತ್ತಾರೆ.

## ಕನಕದಾಸರು

ಕನಕದಾಸರು ಪುರಂದರದಾಸರ ಕಾಲದಲ್ಲಿಯೇ ಇದ್ದವರು ಇವರು ಜಾತಿಯಲ್ಲಿ ಬೇಡರು. ಧಾರವಾಡದಜಿಲ್ಲೆ ಬಂಕಾಪುರದಲ್ಲಿ ನಾಡುಗೌಡ ಬೀರಯ್ಯನ ಮಗನಾಗಿ ಜನಿಸಿದರು. ಇವರ ತಂದೆಯು ಇವರನ್ನು ತನ್ನ ಮುಪ್ಪಿನ ವಯಸ್ಸಿನಲ್ಲಿ ತಿರುಪತಿಯ ವೆಂಕಟರಮಣನ ಅನುಗ್ರಹವಾಗಿ ಪಡೆದನಂತೆ ಅದರಿಂದ ಇವರಿಗೆ ತಂದೆಯು ತಿಮ್ಮ ನೆಂದು ಹೆಸರಿಟ್ಟನು. ಬಾಲ್ಯದಲ್ಲಿಯೇ ಇವರ ತಂದೆಯು ತೀರಿಹೋದನು. ಅದರಿಂದ ಜೊತೆಯ ಹುಡುಗರೊಡನೆ ತಿರಿಯಾಟಗಳನ್ನು ಆಡುವುದರಲ್ಲಿ ಕಾಲಕಳೆಯುತ್ತಿದ್ದರು ಒಂದು ದಿನ ಇವರಿಗೆ ಒಂದು ತಪ್ಪಲಿಯಲ್ಲಿ ಕೊಪ್ಪರಿಗೆಗಳ ತುಂಬಾ ನಿಧಿಯು ಸಿಕ್ಕಿತಂತೆ! ಅದನ್ನು ಇವರು ಎಲ್ಲರಿಗೂ ಧಾರಾಳವಾಗಿ ಕೊಟ್ಟುಬಿಟ್ಟುದರಿಂದ ಇವರಿಗೆ ಮೊದಲನೆಯ ತಿಮ್ಮನೆಂಬ ಹೆಸರು ಹೋಗಿ ಕನಕ ಎಂಬ ಹೆಸರಾಯಿತು.

ಕನಕನಿಗೆ ಮದುವೆಯಾಯಿತು ಜೊತೆಗೆ ಆಗಿನ ಅರಸರಾಗಿದ್ದ ವಿಜಯನಗರದ ವರಿಂದ ಇವನಿಗೆ ಅಧಿಕಾರವೂ ಬಂತು. ಆಗಲೇ ಇವನಿಗೆ ಕನಸಾಗಿ ಆದಿಕೇಶವನ ವಿಗ್ರ ಹವು ಸಿಕ್ಕಿದುದು. ಅದನ್ನು ತೆಗೆದುಕೊಂಡುಹೋಗಿ ಕಾಗಿನೆಲೆಯಲ್ಲಿ ಸ್ಥಾಪಿಸಿ, ಅಲ್ಲೊಂದು ಭಾರಿಯ ದೇವಾಲಯವನ್ನು ಕಟ್ಟಿಸಿದರು.

ಮುಂದೆ, ಇವರು ಸರಕಾರದ ಬೊಕ್ಕಸವನ್ನೆಲ್ಲ ತೋರಿದ ಹಾಗೆ ವಿನಿಯೋಗ ಮಾಡುತ್ತಿದ್ದರೆಂದು ಅರಸಿಗೆ ದೂರುಹೋಗಿ ಇವರ ಕೆಲಸವು ಹೋಯಿತು ಆ ಮೇಲೆ ಇವರು ಹೋಗಿ ಕಾಗಿನೆಲೆಯಲ್ಲಿಯೇ ನಿಂತರು

ಅಲ್ಲಿರುವಾಗ ಇವರಿಗೆ ನೀನು ದಾಸನಾಗೆಂದು ಕನಸಾಯಿತು ಆದರೆ ಬೇಟೆಯಲ್ಲಿ ಬಹಳ ಆಶೆಯುಳ್ಳ ಕನಕನಾಯಕನಿಗೆ ಅದು ಒಪ್ಪಲಿಲ್ಲ ಮತ್ತೊಂದು ದಿನ ಇವರು ನೆರೆಯ ಊರಿನವರೊಡನೆ ಕಾದಾಡುತ್ತಿದ್ದಾಗ ಕುದುರೆಯ ರಾವುತನು ಒಬ್ಬನು ಬಂದು ಇವನೊಡನೆ ಕಾದಾಡಿ ಮೈಕೈಗಳನ್ನೆಲ್ಲ ತತಾತೂತು ಮಾಡಿದನಂತೆ. ಆನೋವು ತಡೆಯ ಲಾರದೆ ಮೂರ್ಛೆ ಒಂತಂತೆ ! ಆಗ ಯಾರೋ ಕನಸಿನಲ್ಲಿ ಬಂದು “ ಈಗಲಾದರೂ ದಾಸನಾಗು ನಿನ್ನ ಗಾಯಗಳೆಲ್ಲ ಮಾಯುವವು ” ಎಂದರಂತೆ. ಆಗ ಒಪ್ಪಿಕೊಂಡು ಅವನು ದಾಸನಾದನಂತೆ ನಿದ್ದೆಯಿಂದ ಏಳುವ ವೇಳೆಗೆ, ಗಾಯಗಳೆಲ್ಲವೂ ಮಾಯ ವಾಗಿದುವಂತೆ ಮುಂದೆ ಕನಕನು ಇದ್ದುಬದ್ದುದೆಲ್ಲವನ್ನು ಕೊಟ್ಟು ದಾಸನಾಗಿ ತಿರುಪ ತಿಗೆ ಹೋದನು ಅಲ್ಲಿ “ನೀನು ವ್ಯಾಸರಾಯರ ಬಳಿಯಿರು ಹೋಗು” ಎಂದು ಕನ ಸಾಯಿತಂತೆ ಅದರಂತೆಯೇ ಅವರು ಬಂದು ಸೋಸಲೆಯ ವ್ಯಾಸರಾಯ ಮಠದಲ್ಲಿ ನಿಂತರು. ಕನಕರು ತಮ್ಮ ೯೨ನೆಯ ವಯಸ್ಸಿನ ಮುಕ್ತರಾದರು ಕನಕನ ಕಿಂಡಿ ಮೊದಲಾದ ಅನೇಕ ಕಥೆಗಳು ಇವರ ವಿಚಾರವಾಗಿ ಪ್ರಸಿದ್ಧವಾಗಿವೆ. ಇವರು ಬೇಕಾ ದಷ್ಟು ಕೀರ್ತನೆಗಳನ್ನು ಬರೆದಿದ್ದಾರೆ. ಇವರು ಓದಿಬರೆದವರಲ್ಲ ಆದರೂ ಇವರ ಕೀರ್ತನೆ ಗಳು ಜನರಿಗೆ ಅಚ್ಚುಮೆಚ್ಚಾಗಿವೆ.

# ತ್ಯಾಗರಾಜರು

ತ್ಯಾಗರಾಜರು ಪರಮ ಭಾಗವತರು ಎಂದರೆ ಹರಿಭಕ್ತರಲ್ಲಿ ಅಗ್ರಗಣ್ಯರಾದವರು. ಇವರು ತಂಜಾವೂರಿನ ಬಳಿಯಿರುವ ತಿರುವಳ್ಳೂರು ಎಂಬಲ್ಲಿ ಜನಿಸಿದರು ಇವರ ತಂದೆಯು ರಾಮಬ್ರಹ್ಮಂ ಎಂಬ ತೆಲುಗು ಬ್ರಾಹ್ಮಣನು. ಈತನು ಸಂಗೀತ ಸಾಹಿತ್ಯ ಕಲಿತು ತನ್ನಪಾಡಿಗೆ ತಾನು ಇದ್ದವನು ಆತನ ಹೆಂಡಿತಿ ಶಾಂತಾಯೆಂಬಾಕೆಯು. ಆ ದಂಪತಿಗಳ ಮಗನಾಗಿ ಇವರು ಜನ್ಮಿಸಿದರು.

ಬಾಲ್ಯದಲ್ಲಿ ಇವರಿಗೆ ಕೊಂಚ ಸಂಸ್ಕೃತವನ್ನು ಕಲಿಸಿದರು ಆದರೆ ಇವರಿಗೆ ಸಂಗೀತದ ಮೇಲೆ ವಿಶೇಷವಾದ ಅಭಿಮಾನ ಇವರ ಮನೆಯ ಎದುರಿನಲ್ಲಿಯೇ ಇದ್ದ ಶೊಂಠಿವೆಂಕಟಸುಬ್ಬಯ್ಯನೆಂಬ ವಿದ್ವಾಂಸರು ಇವರಿಗೆ ಸಂಗೀತದ ಮೊದ ಮೊದಲು ಪಾಠವನ್ನು ಹೇಳಿಕೊಟ್ಟವರು ಇವರು ಸಂಗೀತವನ್ನು ಕಲಿಯುತ್ತಿದ್ದಾಗ ಒಬ್ಬರು ಭಾಗವತರ ದರ್ಶನವಾಯಿತು ಅವರಿಂದ ಇವರಿಗೆ ರಾಮತಾರಕಮಂತ್ರವು (ಎಂದರೆ ರಾಮ ನಾಮ) ಉಪದೇಶವಾಯಿತು ಅಂದಿನಿಂದ ತ್ಯಾಗರಾಜರು ಬೇರೆ ಜನ್ಮವೆತ್ತಿದಂತೆ ಆಯಿತು ತ್ಯಾಗರಾಜರು ಹಗಲಿರುಳೂ ದೇವರ ಪೂಜೆ, ಧ್ಯಾನ, ಕೀರ್ತನೆಗಳಲ್ಲಿ ಕಾಳಿತು ಬಿಟ್ಟರು ಪ್ರತಿ ಶನಿವಾರವೂ ಅವರು ತಮ್ಮ ಶಿಷ್ಯರೊಡನೆ ಗ್ರಾಮಕೀರ್ತನೆ (ಯೆಂದರೆ ಊರಲ್ಲೆಲ್ಲ ಭಜನೆ ಮಾಡಿಕೊಂಡು ಬರುವುದು) ಮಾಡಿಕೊಂಡು ಬರುವರು ಆಗ ಊರಿನವರು ಕೊಡುವ ಅಕ್ಕಿಬೇಳೆಗಳು ಒಂದು ವಾರದವರೆಗೂ ಇವರಿಗೆ ಸಾಕಾಗುವುದು.

ಒಂದು ದಿನ ಒಬ್ಬ ವೃದ್ಧ ಸನ್ಯಾಸಿಯು ಬಂದು "ನಿಮ್ಮ ಹಾಡು ಕೇಳಬೇಕು" ಎಂದರಂತೆ. ತ್ಯಾಗರಾಜರು ಆಗಲೆಂದು ಬಹುಮನೋಹರವಾಗಿ ಹಾಡಿದರಂತೆ. ಸನ್ಯಾಸಿಯು ಬಹುಸಂತೋಷಪಟ್ಟು ತಾವು ತಂದಿದ್ದ ಒಂದು ಪುಸ್ತಕವನ್ನು ಅವರಿಗೆ ಕೊಟ್ಟು "ಇದು ಇಲ್ಲಿರಲಿ ನಾನು ಹೊಳೆಗೆ ಹೋಗಿ ಸ್ನಾನಮಾಡಿಬರುವೆನು" ಎಂದು ಹೊರಟು ಹೋದರು ತ್ಯಾಗರಾಜರು ದೇವತಾರ್ಚನಾದಿಗಳನ್ನೆಲ್ಲ ಮುಗಿಸಿಕೊಂಡು ಬಹು ಹೊತ್ತು ಕಾದಿದ್ದರೂ ಅವರು ಬರಲಿಲ್ಲವಂತೆ ಬಹಳವಾಗಿ ಹುಡುಕಿಸಿದರೂ ಸಿಕ್ಕಲಿಲ್ಲವಂತೆ. ಆಗ ಅವರಿಗೆ ತೂಕಡಿಕೆಬಂದ ಹಾಗಾಗಿ ಕನಸು ಕಾಣಿಸಿ "ಬಂದಿದ್ದವನು ನಾನೇ ನಾನು ನಾರದ ನಾನು ತಂದಿದ್ದ ಪುಸ್ತಕ ಸ್ವರಾರ್ಣವ ಅದನ್ನು ಕಲಿಯಿರಿ" ಎಂದು ಹೇಳಿ ಮಾಯವಾದರಂತೆ ಅದನ್ನು ಆ ಮೇಲೆ ತ್ಯಾಗರಾಜರು ಪಾಠಮಾಡಿದರು

ತ್ಯಾಗರಾಜರು ಹಾಡಿರುವ ಕೀರ್ತನೆಗಳು ಅಪೂರ್ವವಾದವು. ಈಗಿನ ಸಂಗೀತಗಾರರು ಹಾಡಿರುವ ಕೀರ್ತನೆಗಳಲ್ಲಿ ಅನೇಕಾನೇಕ ಅವರವು ಅವರು ಸನ್ಯಾಸತೆಗೆದುಕೊಂಡು ಮುಕ್ತರಾದರು ಈಗಲೂ ತ್ಯಾಗರಾಜ ಜಯಂತಿಯು ವರ್ಷವರ್ಷ ದಕ್ಷಿಣ ಇಂಡಿಯದಲ್ಲೆಲ್ಲಾ ನಡೆಯುತ್ತದೆ.

# ಜಯದೇವ

ಜಯದೇವಕವಿಯು ಪೂರ್ವದೇಶದವನು ಆತನು ಬರೆದಿರುವುದು ಸಂಸ್ಕೃತ ದಲ್ಲಿ ಆತನ ಗ್ರಂಥದ ಹೆಸರು ಗೀತಗೋವಿಂದ ಎಂದು ಅದರಲ್ಲಿ ರಾಧೆಯೆಂಬ ಗೋಪಿಯು ಕೃಷ್ಣನ ಮೇಲೆ ಇಟ್ಟುಕೊಂಡಿರುವ ಪ್ರೇಮದ ಕಥೆಯನ್ನು ವರ್ಣಿಸಿದೆ ಗೀತಗೋವಿಂದ ದಲ್ಲಿರುವ ಪದ್ಯಗಳು ಹಾಡುವುದಕ್ಕೆ ಮತ್ತು ಅಭಿನಯ ಕಟ್ಟುವುದಕ್ಕೂ ಬಹಳ ಅನು ಕೂಲವಾಗಿವೆ ಅಲ್ಲದೆ ಬಹಳ ಮೃದುವಾಗಿ ಕಿವಿಗೆ ಬಹಳ ಹಿತವಾಗಿವೆ

ಜಯದೇವಕವಿಯ ಕಥೆಯೂ ಇತರ ಭಕ್ತರ ಕಥೆಯಂತೆ ಬಹಳ ಮನೋಹರ ವಾದುದು ಈತನು ಒಬ್ಬ ಭಕ್ತನ ಬಳಿಗೆ ಹೋಗಿದ್ದನು ಆತನು ಬೇಕಾದ ಹಾಗೆ ಐಶ್ವರ್ಯವನ್ನು ಕೊಟ್ಟುಕಳುಹಿಸಿದನು ದಾರಿಯಲ್ಲಿ ಇಬ್ಬರು ಕಳ್ಳರುಬಂದು ಅದನ್ನು ದೋಚಿಕೊಂಡು, ‘ ಈತನು ಬದುಕಿದ್ದರೆ ನನಗೆ ಪ್ರಾಣಸಂಕಟವು ತಪ್ಪದು’’ ಎಂದು ಆತನ ಕೈಕಾಲುಗಳನ್ನು ಕಡಿದು’ ಒಂದು ಪಾಳುಭಾವಿಗೆ ಹಾಕಿ ಹೊರಟುಹೋದರು.

ಜಯದೇವನು ಅಲ್ಲಿಯೂ ತನ್ನ ಭಜನೆಯನ್ನು ಆರಂಭಿಸಿದನು. ಗಾಯಗಳ ನೋವನ್ನೂ ಗಮನಿಸದೆ ಮನೋಹರವಾಗಿ ಕೀರ್ತನ ಮಾಡುತ್ತಿರುವ ಆ ಪುಣ್ಯಾತ್ಮನ ಹಾಡು ಆ ಮಾರ್ಗವಾಗಿ ಹೋಗುತ್ತಿದ್ದ ಒಬ್ಬ ರಾಜನ ಕಿವಿಗೆ ಕೇಳಿಸಿತು. ಆತನು ಒಂದು ಭಾವಿಯಲ್ಲಿ ಬಿದ್ದಿದ್ದ ಈತನನ್ನು ಮೇಲಕ್ಕೆ ಎತ್ತಿಸಿದನು. ಈತನು ಇಂಥವನು ಎಂದು ತಿಳಿದ ಕೂಡಲೇ ಆ ರಾಜನು ಬಹುವಾಗಿ ಸಂಕಟಪಟ್ಟು, ಆತನನ್ನು ತನ್ನ ಜೊತೆ ಯಲ್ಲಿಯೇ ಕರೆದುಕೊಂಡು ಹೋದನು.

ಜಯದೇವನು ರಾಜನಿಗೆ ಹೇಳಿ ಭಾಗವತರು ಎಂದು ಬಂದವರಿಗೆಲ್ಲ ಬೇಕಾದ ಹಾಗೆ ಧಾರಾಳವಾಗಿ ಸಹಾಯಮಾಡಿಸುತ್ತ ಬಂದನು. ಈತನಿಗೆ ದ್ರೋಹಮಾಡಿದ್ದ ಕಳ್ಳರಿಬ್ಬರೂ ಈ ಸುದ್ದಿಯನ್ನು ಕೇಳಿ, ತಾವು ಭಾಗವತರಂತೆ ವೇಷಧರಿಸಿ ಆ ರಾಜನಲ್ಲಿಗೆ ಬಂದರು. ಜಯದೇವನು ಆ ಕಳ್ಳರನ್ನೂ ಭಾಗವತರಂತೆಯೇ ಭಾವಿಸಿದನು. ಅವರಿಗೆ ಇನ್ನೂ ಹೆಚ್ಚು ಮರ್ಯಾದೆಯಾಯಿತು ಆ ಕಳ್ಳರು ಅಲ್ಲಿ ಇದ್ದರೆ ತಮಗೆ ಕಷ್ಟವೆಂದು ಆದಷ್ಟು ಬೇಗ ಅಲ್ಲಿಂದ ಹೊರಟರು ದಾರಿಯಲ್ಲಿ ರಾಜನಾಳುಗಳು ‘‘ ಸ್ವಾಮಿ ! ತಮ್ಮ ಮೇಲೆ ಜಯದೇವರಿಗೆ ಬಹಳ ಭಕ್ತಿ ಅದೇಕೆ ?’’ ಎಂದರು. ಕಳ್ಳರು ‘‘ನಾವು ಅವ ರಿಗೆ ಹಿಂದೆ ಪರಮೋಪಕಾರಮಾಡಿದೆವು ಅದಕ್ಕಾಗಿ’’ ಎಂದರು.

ಭೂಮಿದೇವಿಯು ಆ ಸುಳ್ಳನ್ನು ತಡೆಯಲಾರದೆ ಬಾಯಿಬಿಟ್ಟು ಅವರನ್ನು ನುಂಗಿ ಬಿಟ್ಟಳು. ಜಯದೇವನು ಇದನ್ನು ತಿಳಿದು ಸ್ವಾಮಿಯನ್ನು ಪ್ರಾರ್ಥಿಸಿ, ಆ ಕಳ್ಳರನ್ನು ಮತ್ತೆ ಬದುಕಿಸಿದನು ಸ್ವಾಮಿಯದರ್ಶನದಿಂದ ಆತನ ಮೊಂಡುಕೈಕಾಲುಗಳು ಮತ್ತೆ ಮೊಳೆತುವು

# ಭೀಷ್ಮ

ಹೈದರನು ಮಹಾಭಾರತವನ್ನು ಈ ಕೊನೆಯಿಂದ ಆ ಕೊನೆಯವರೆಗೂ ಕೇಳಿ, "ಅಲ್ಲಿರುವವರು ಮೂವರು. ಒಬ್ಬ ಮುದುಕ, ಒಬ್ಬ ಹುಡುಗ ಒಬ್ಬ ಕಳ್ಳ" ಎಂದ ನಂತೆ. ಆ ಮುದುಕನು ಭೀಷ್ಮ, ಹುಡುಗನು ಅಭಿಮನ್ಯು, ಕಳ್ಳನು ಕೃಷ್ಣ

ಮಹಾಭಾರತವು ಕೌರವಪಾಂಡವರ ಕಥೆ ಕೌರವರು ಧೃತರಾಷ್ಟ್ರನ ಮಕ್ಕಳು. ಪಾಂಡವರು ಪಾಂಡುರಾಯನ ಮಕ್ಕಳು, ಹೀಗೆ ಅಣ್ಣತಮ್ಮಂದಿರ ಮಕ್ಕಳಾದ ಇವರಿವರಿಗೆ ರಾಜ್ಯಕ್ಕಾಗಿ ಯುದ್ಧವು ನಡೆಯಿತು ಧೃತರಾಷ್ಟ್ರನು ಕುರುಡ, ಪಾಂಡುರಾಯನು ಮಕ್ಕಳು ಹುಡುಗರಾಗಿದ್ದಾಗಲೇ ಸತ್ತುಹೋದನು ಆದರಿಂದ ಕೌರವರನ್ನೂ ಪಾಂಡವರನ್ನೂ ಬೆಳೆಸುವ ಭಾರವು ಭೀಷ್ಮನ ಮೇಲೆಯೇ ಬಿದ್ದಿತು ಆ ಎರಡು ಗುಂಪಿನವರನ್ನು ವಿದ್ಯೆಬುದ್ಧಿಗಳನ್ನು ಹೇಳಿಬೆಳೆಸಿದನು. ಆದರೆ, ಮುಂದೆ ಶಕುನಿಯೆಂಬ ಒಬ್ಬ ದುಷ್ಟನು ಬಂದು ಕೌರವರ ಜೊತೆ ಸೇರಿದನು ಅವನು ಅವರ ಮನಸ್ಸನ್ನು ಕೆಡಿಸಿ ಭೀಷ್ಮನ ಮಾತು ನಡೆಯುವಂತೆ ಮಾಡಿ ಕೌರವರನ್ನು ಮುಳುಗಿಸಿದನು ಭೀಷ್ಮನ ಇಚ್ಛೆಯಂತೆ ನಡೆದಿದ್ದರೆ ಭಾರತದ ಯುದ್ಧವೇ ಆಗುತ್ತಿರಲಿಲ್ಲ

ಭೀಷ್ಮನು ಶಂತನುಮಹಾರಾಜನಿಗೆ ಗಂಗಾದೇವಿಯಲ್ಲಿ ಹುಟ್ಟಿದ ಮಗನು ಇವನು ಹುಟ್ಟುತ್ತಿದ್ದ ಹಾಗೆಯೇ ಇವನ ತಾಯಿಯು ಶರೀರವನ್ನು ಬಿಟ್ಟುಹೋದಳು.

ಇವನು ಯೌವನವಂತನಾಗಿರುವಾಗ, ಒಂದು ವಿಚಿತ್ರವು ನಡೆಯಿತು ಇವನ ತಂದೆಯಾದ ಶಂತನುವು ಒಂದು ದಿನ ಬೇಟೆಗೆ ಹೋಗಿದ್ದಾಗ ಗಂಗಾತೀರದಲ್ಲಿ ಒಬ್ಬ ಬೆಸ್ತರವನ ಮಗಳನ್ನು ಕಂಡು ಮೋಹಿಸಿದನು ಆ ಬೆಸ್ತನು 'ನನ್ನ ಮಗಳ ಮಗನಿಗೇ ರಾಜ್ಯಭಾರವನ್ನು ಕೊಡಬೇಕು ಹಾಗೆ ಕೊಡುವುದಾದರೆ ನಾನು ಮಗಳನ್ನು ಕೊಡಲು ಸಿದ್ಧನಾಗಿದ್ದೇನೆ" ಎಂದನು

ಶಂತನುವು ಭೀಷ್ಮನಿರುವಾಗ ಅವನಿಗೆ ದೊರೆಯಬೇಕಾಗಿರುವ ರಾಜ್ಯವನ್ನು ಇನ್ನೊಬ್ಬರಿಗೆ ಕೊಡುವುದೆಂತು ? ಆದ್ದರಿಂದ ಸಾಧ್ಯವಿಲ್ಲನೆಂದು ಹೊರಟುಬಂದನು. ಆದರೂ ಬೆಸ್ತರ ಹುಡುಗಿಯ ನೆನೆಪು ಬಿಡಲಿಲ್ಲ ಅದೇ ಚಿಂತೆಯಾಯಿತು ಆಗ ಭೀಷ್ಮನು ಅದನ್ನು ತಿಳಿದು, ತಾನೇ ಹೋಗಿ, ಬೆಸ್ತರವನಿಗೆ ಅವನಿಷ್ಟದಂತೆ ನಡೆಯುವುದಾಗಿ ಪ್ರಮಾಣ ಮಾಡಿಕೊಟ್ಟು, ಆ ಬೆಸ್ತಗಿತ್ತಿಯನ್ನು ತಂದು ತಂದೆಗೆ ಮದುವೆಮಾಡಿಸಿದನು. ಅವನು ಬೆಸ್ತರವನಿಗೆ ಕೊಟ್ಟಮಾತಿನಂತೆ, ಸಾಯುವವರೆಗೂ ಮದುವೆಮಾಡಿಕೊಳ್ಳಲಿಲ್ಲ. ಹೀಗೆ ಹಿಡಿದ ಹಟವನ್ನು ಪೂರೈಸಿದನೆಂದು ಇವನನ್ನು ದೇವವ್ರತನೆನ್ನುತ್ತಾರೆ.



# ಜವಾಹಿರ್‌ಲಾಲ್ ನೆಹ್ರೂ ಅವರು

ಇಂಡಿಯದಲ್ಲಿ ನ್ಯಾಷನಲ ಕಾಂಗ್ರೆಸ ಎಂಬುದೊಂದು ಸಂಘವಿದೆ. ಅದು ಇಂಡಿಯಾ ಸ್ವತಂತ್ರರಾಜ್ಯವಾಗುವ ಹಾಗೆ ಮಾಡಬೇಕೆಂದು ಹೋರಾಡುತ್ತಿದೆ. ಈ ಸಂಘವು ವರ್ಷಕ್ಕೊಂದುಸಲ ಸಭೆಸೇರುತ್ತದೆ ಈ ಸಭೆಗೆ ಒಬ್ಬೊಬ್ಬರನ್ನು ಅಧ್ಯಕ್ಷರನ್ನಾಗಿ ಆರಿಸುತ್ತದೆ. ಈ ಪದವಿಯು ಈಗಿನ ಇಂಡಿಯದಲ್ಲಿ ಅತ್ಯುಚ್ಚವಾದುದು. ಅಮೇರಿಕದಲ್ಲಿ ರಾಜಾಧ್ಯಕ್ಷರ ಪದವಿಯುಷ್ಟು ಶ್ರೇಷ್ಠವಾದುದು.

ಈ ಸಲ ಈ ಅಧ್ಯಕ್ಷಪದವಿಯು ಶ್ರೀಯುತ ಜವಾಹಿರ್‌ಲಾಲ್ ನೆಹ್ರುಅವರಿಗೆ ಬಂದಿದೆ ಇವರು ಉಚ್ಚ ಶ್ರೀಮಂತ ಕುಲದಲ್ಲಿ ಜನಿಸಿದವರು. ಬಹಳ ದೊಡ್ಡ ಮನುಷ್ಯರು. ಇಂಡಿಯವೆಂದರೆ ಇವರಿಗೆ ಪಂಚಪ್ರಾಣ

ಇವರಿಗೆ ಈಚೆಗೆ ಪ್ರತ್ನೀವಿಯೋಗವು ಸಂಭವಿಸಿತು ಅದಕ್ಕಾಗಿ ಇಂಡಿಯವು ಆ ಸೇತು ಹಿಮಾಚಲಪರ್ಯಂತವಾಗಿ ಕಣ್ಣೀರಿನ ಕಾಣಿಕೆಯನ್ನು ಒಪ್ಪಿಸಿತು.

## ಒ ಗ ಟಿ

೧. ಕೊಳ, ಕೊಳದಲ್ಲೊಂದು ಮಂಟಪ ಮಂಟಪದಲ್ಲೊಬ್ಬ ಮಾನವ ಕೊಳದ ಸುತ್ತ, ಮರದ ಬೇಲಿ ಹೂವಿಲ್ಲ ಕಾಯಿಲ್ಲ ಹಕ್ಕಿಬರೋಲ್ಲ ಪಕ್ಕಿಬರೋಲ್ಲ

೨ ಮರಕರೀದು, ಎಲೆ ಕಿರೀದು, ಹೂ ಚಿನ್ನ ಕಾಯಿ ಬೆಳ್ಳಿ.

೩ ನೀರಲ್ಲಿ ಹುಟ್ಟಿ ನೀರಲ್ಲಿ ಬೆಳೆದು ಮನೆ ಮುಂದೆ ಬಂದು ಅಬ್ಬರಿಸುವುದು

೪. ಹಲ್ಲು ನಾಲಿಗೆಯಿಲ್ಲ, ಸೊಲ್ಲು ಸೋಜಿಗವಿಲ್ಲ. ಕೊಲ್ಲದೆ ಮೃಗಪಕ್ಷಿಗಳ ಹಿಡಿಯುವುದು

೫. ಅರಕಟ್ಟು ಮರಕಟ್ಟು, ಮಗಕ್ಕೆ ಮುನ್ನೂರ ಕಟ್ಟು, ಪಗಡೆಕಟ್ಟು, ಪಾಷಾಣಕಟ್ಟು, ಇದನ್ನು ಹೇಳಿದಂಥಾ ಜಾಣನಿಗೆ ಚಂದ್ರಮುರು ಕಟ್ಟು

೬ ಐಯ್ಯಣ್ಣನ ಕುದುರೆಗೆ ಮೈಯ್ಯೆಲ್ಲಾ ಗಾಯ

೭ ತಾಯಿ ತರಕಲಿ, ಮಗಳು ಬೋಳಿ, ಮೊಮ್ಮಗಳು ನುಣ್ಣಗೆ

೮. ಅಂಗಾಲು ಮೇಲಾಗಿ ನೀರಕುಡಿದಾತ: ನಿನಗಾರು ಹೇಳಿದರೋ ಕಣ್ಣಿಲ್ಲದಾತ ಕೇಳಿದವನಾರು ಕಣ್ಣಿಲ್ಲದಾತ

೯ ಊರಗಲದ ಹೊಲ ಉಳುವುದು ಎರಡು ಎತ್ತು ಬಿತ್ತುವುದು ಹಾಗೆ ಹದಿನೈದು ಕಾಳು ಹೀಗೆ ಹದಿನೈದು ಕಾಳು

೧೦ ಮರಕ್ಕೆ ಹನ್ನೆರಡು ಕವಲು, ಕವಲಿಗೆ ಮೂವತ್ತು ಎಲೆ. ಅದರಲ್ಲಿ ಹದಿನೈದು ಬಿಳೀ ಬಿಳುಪು ಹದಿನೈದು ಕರೀ ಕಪ್ಪು

೧೧ ಕೈಯ್ಯುಂಟು ಕಾಲಿಲ್ಲ ಹೆಗಲೇರಿಬಂದ ತೆಗೆದುನೋಡಿದರೆ ಮೈಯೆಲ್ಲ ನವಗಾಯ

೧೨. ತಲೆತುಳಿದವನ್ನ ತೆಗೆದು ಮೊಳೆ ಮೇಲಿಟ್ಟರು.

## ವಿನೋದ

ಶಾನುಭೋಗರು :— ಏನೋ ಕತ್ತೆಮಗನೆ !
ನಿನ್ನ ತಲೇಲಿ ಬುದ್ಧಿ ಇದೆಯೋ ಇಲ್ಲವೊ ?
ತಳವಾರ : – ಅಯ್ಯೋ ಬಿಡಿ ! ನಮ್ಮಪ್ಪ ನಿಮ್ಮದು ಇದ್ದೇಇದೆ.

o o o o o o

‘ ಶಿಷ್ಯನಿಗಿಂತ ಗುರುಗಳು ಹೆಚ್ಚಲ್ಲವೆ ?’’
‘‘ಹೌದು ! ಹೌದು ! ಗುರುಗಳಿಗೆ ಎರಡುಕೊಂಬುಗಳಿವೆ.’’

# ಚಿತ್ರಪರಿಚಯ

ಈ ಚಿತ್ರವು ಉಮ್ಮರ್ ಖಯ್ಯಾಂ ಎಂಬ ಕವೀಶ್ವರನದು, ಆತನು ಪರ್ಷಿಯದವನು ಅಮೋಘವಾದ ಕಾವ್ಯವನ್ನು ಬರೆದಿರುವ ಈತನು, ಈ ಲೋಕದ ಆನಂದವನ್ನು ಕುರಿತು ಬಹುವಾಗಿ ಹೊಗಳಿದ್ದಾನೆ ಈತನು ೧೧-೧೨ ನೆಯ ಶತಮಾನದಲ್ಲಿ ಎಂದರೆ ಸುಮಾರು ೮೦೦ ವರ್ಷಗಳ ಕೆಳಗೆ ಇದ್ದನು

ಈತನು ರುಬಿಯಾತ್ ಎಂಬ ಪ್ರಸಿದ್ಧ ಕಾವ್ಯವನ್ನು ಬರೆದಿದ್ದಾನೆ ಅದು ಮೊದಲು ಸುಮಾರು ನೂರು ವರ್ಷಗಳ ಕೆಳಗೆ ಇಂಗ್ಲೀಷಿಗೆ ಭಾಷಾಂತರವಾಯಿತು. ಅಲ್ಲಿಂದ ಇತರ ಭಾಷೆಗಳಿಗೆ ಆಗಿದೆ

ಉಮ್ಮರನು ಜಾತಿಯಲ್ಲಿ ಮಹಮ್ಮದೀಯನು, ಆತನು ಹುಟ್ಟುವವೇಳೆಗೇ ಮಹಮ್ಮದೀಯರು ಪರ್ಷಿಯವನ್ನು ಹಿಡಿದುಕೊಂಡು ಅಲ್ಲಿದ್ದವರನ್ನೆಲ್ಲ ತಮ್ಮ ಜಾತಿಗೆ ಸೇರಿಸಿ ಸುಮಾರು ನಾಲ್ಕು ನೂರು ವರ್ಷಗಳಾಗಿತ್ತು

ಉಮ್ಮರನು ತನ್ನ ವಿಸ್ತಾರವಾದ ಕಾವ್ಯದಲ್ಲಿ, "ಒಬ್ಬಳು ರಮಣಿ, ಒಂದು ಕುಡಿಕೆ ಮಧು, ಒಂದು ಹಾಡಿನ ಪುಸ್ತಕ" ಇಷ್ಟಿದ್ದರೆ ಸಾಕು, ಎಂದು ಹೇಳಿಕೊಳ್ಳುತ್ತಾನೆ ಅದರಂತೆ ಈ ಚಿತ್ರದಲ್ಲಿರುವುದೆಲ್ಲ ಅಷ್ಟೆ! ಇವನು "ಈ ಜೀವನವು ಕುಂಬಾರನ ಗಡಿಗೆಯಂತೆ ಯಾವಾಗ ಒಡೆಯುವುದೋ ಯಾರಿಗೆ ಗೊತ್ತು? ಅದರಿಂದ ಆದಷ್ಟು ಸುಖವಾಗಿರೋಣ" ಎನ್ನುತ್ತಾನೆ

ಈತನು ಬರೆದಿರುವ ಹಾಡುಗಳನ್ನು ತೆಗೆದುಕೊಂಡು ಅನೇಕಾನೇಕರು ಚಿತ್ರಗಳನ್ನು ಬರೆದಿದ್ದಾರೆ



ಉಮ್ಮರ್ ಖಯಾಂ

"ಭಾರತಿಯ" ವಿಶ್ವಾಸದಿಂದ

ಚಿತ್ರಕಾರರು:—ಮಾಧವಸೆದ್ದಿ ಗೋಪಾಲಕೃಷ್ಣ ಗೋಖಲೆ

# ಉತ್ತರಗಳು

## ಚೌಕಬಂಧ ಸ್ಪರ್ಧೆಗೆ ಉತ್ತರ

| | | | | |
|---|---|---|---|---|
| ಹ ೧ | ✻ | ರ ೨ | ✻ | ✻ |
| ✻ | ಡ ೪ | ✻ | ಡು ೫ | ✻ |
| ಕಂ ೬ | ✻ | ಗು ೭ | ✻ | ಕಾ ೮ |
| ✻ | ಗೇ ೯ | ✻ | ವೇ ೧೦ | ▣ |
| ಪು ೧೧ | ▣ | ರಿ ೧೨ | ▣ | ಗ ೧೩ |

ಇದು ಯೋನುಗೆ ಉತ್ತರ-ಹೈರಾವಣ, ಮಹಿಶೂರನಗರ ನಂದಿದುರ್ಗ, ಕೃಷ್ಣರಾಜಸಾಗರ

ಒಗಟೆಗಳಿಗೆ ಉತ್ತರ—೧ ನದಿ, ೨ ಕಣ್ಣಿನ ನೋಟ, ೩ ಭತ್ತಕುಟ್ಟುವ ಯಾತ ೪ ಸೌದೆ ೫ ಕರಬೂಜ, ೬ ತುಟಿ

## ಉತ್ತರ ಬರೆದವರು

ಕೆ ಎಸ್. ದೇವಿ ಎ ಶಿವರಾಮಯ್ಯ, ಅನ್ನಪೂರ್ಣಾದೇವಿ ಹಿರೇಮಠ, ಸಿ ಶ್ರೀನಿವಾಸನ್, ಜಿ. ನಾಗಮ್ಮ, ಜಿ. ಎಸ. ಕಿಟ್ಟು, ಎಸ್. ಸರಸ್ವತೀಬಾಯಿ, ಡಿ ಎಸ್ ಚಂದ್ರಶೇಖರ, ಎ. ಹೇಮಾವತಿ, ಜಿ. ಕೇಶವಮೂರ್ತಿ ವಿ ಜೆ ರಾಮಲಿಂಗಮೊದಲಿಯಾರ್, ಎ. ಕೃಷ್ಣಮೂರ್ತಿ, ಕೆ. ಸರ್ವಮಂಗಳಾ ಡಿ ಆರ್. ಭಗವಾನ್ ಅಮೃತಾದೇವಿ ಹಿರೇಮಠ ಬಿ. ಎಸ. ರಂಗನಾಥನ್, ಎ ಶಿವರಾಮಯ್ಯ, ಡಿ ಆರ ಜಗನ್ನಾಥರಾವ್ ಜೆ ಆರ್. ವಿಜಯ, ಆನಂದರಾವ,

# ಪುಟ್ಟಕತೆ

ಒಬ್ಬ ರೈತನ ಬಳಿ ಒಂದು ಎತ್ತು, ಒಂದು ಎಮ್ಮೆ, ಒಂದು ನಾಯಿ, ಇದ್ದುವು ಅವನು ಬಲು ವಿನೋದಗಾರ ಯಾರನ್ನು ಕಂಡರೂ ಒಂದು ನಗೆ ಮಾತು ಆಡಬೇಕು ಒಂದು ಸಲ ನಗಿಸಬೇಕು. ತಾನೂ ನಕ್ಕು ಮುಂದೆಹೋಗಬೇಕು ಅಂಥವನು ಅವನು ಅವನು ಎಲ್ಲರಿಗೂ ಒಂದೊಂದು ವಿಚಿತ್ರವಾಗಿ ಹೆಸರಿಟ್ಟಿದ್ದನು ಅವನಿಗೆ ಹೆಂಡಿತಿ ಮೇಲೆ ಬಹಳ ವಿಶ್ವಾಸ ಅವಳೂ ಬಹಳ ಒಳ್ಳೆಯವಳು. ಬಾಯಿತುಂಬಾ ಮಾತನಾಡುವವಳು. ಅದರಿಂದ ಅವಳಿಗೆ ಅವನು '' ತಂಬಿಟ್ಟು '' ಎಂದು ಹೆಸರಿಟ್ಟಿದ್ದನು ಎತ್ತು ಕಷ್ಟಕ್ಕೆ ಒದಗಿ ಬೇಕಾದ ಹಾಗೆ ದುಡಿಯುತ್ತಿತ್ತು ಅದರಿಂದ ಅದಕ್ಕೆ ''ನೆಂಟ'' ಎಂದು ಹೆಸರು ಎಮ್ಮೆಯು ಯಾವಾಗಲೂ ಬಿದ್ದ ಕಡೆ ಬಿದ್ದಿರೋದು ಆದರಿಂದ ಅದಕ್ಕೆ ''ದೊಣ್ಣೆ'' ಎಂದು ಹೆಸರಿಟ್ಟಿದ್ದನು ನಾಯಿಯು ಮನೆಯ ಮಕ್ಕಳಿಗಿಂತಲೂ ವಿಶ್ವಾಸವಾಗಿತ್ತು ಅದರಿಂದ ಅದಕ್ಕೆ ''ಮಗು'' ಎಂದು ಹೆಸರಿಟ್ಟಿದ್ದನು

ಒಂದು ದಿನ ರೈತನು ಹೊಲದಲ್ಲಿ ಉಳುತ್ತಿರುವಾಗ ದೂರದ ಊರಿನಿಂದ ನೆಂಟನೊಬ್ಬನು ಬಂದನು ಅವನ ಸುಖದುಃಖಗಳನ್ನೆಲ್ಲ ವಿಚಾರಿಸಿ 'ನೀನು ಮನೆಗೆ ಹೋಗು, ಅಲ್ಲಿ ತಂಬಿಟ್ಟದೆ ನಾಹೇಳಿದೆ ಅಂತ ಹೇಳಿ ಇಕ್ಕಿಸಿಕೊಂಡು ಉಂಡು ಮಲಗಿರು. ನಾಬರುತೀನಿ'' ಎಂದನು ನೆಂಟನು ಆಸೆಯಿಂದ ತಂಬಿಟ್ಟು ತಿನ್ನೋಣವೆಂದು ಮನೆಗೆ ಹೋದನು ಅಷ್ಟು ಹೊತ್ತಿನ ಮೇಲೆ ರೈತನೂ ಮನೆಗೆ ಬಂದನು ಬರುವ ವೇಳೆಗೆ ಹೆಂಡಿತಿಯು ನೆಂಟನಿಗೆ ಬಡಿಸಿ ಬೇಕಾದ ಉಪಚಾರಮಾಡಿದ್ದಳು ಅವನು ಮಲಗಿ ನಿದ್ದೆಗಿದ್ದೆಮಾಡಿ ಆಗತಾನೇ ಎದ್ದು ಕುಳಿತಿದ್ದನು

ರೈತನು ಒಳಕ್ಕೆ ಬರುತ್ತ ''ನೆಂಟನೇನೋ ಮನೆಗೆ ಬ ದನ್ನೆ ಏಟು ಉಡುಕಿದರೂ ದೊಣ್ಣೆಯೇ ಸಿಕ್ಕಲಿಲ್ಲ ಲೇ! ನೆಂಟನ ಹಿಡಿದು ಕಟ್ಟಿಹಾಕು ನಾ ಓಗಿ ದೊಣ್ಣೆ ಉಡುಕ್ಕೊಂಡು ಬರುತೀನಿ'' ಎಂದನು ಒಳಗಿದ್ದ ''ಹೆಂಡಿತಿಯು ಅಂಗೇ ಆಗಲಿ'' ಎಂದಳು

ಆಗತಾನೇ ಎದ್ದು ಕುಳಿತಿದ್ದ ನೆಂಟನು ಇದಿಷ್ಟೂ ಕೇಳಿ ''ಇದೇನೋ ಬಂತು! ಇವನಂತು ವಿನೋದಗಾರ ಇಡಿದು ಇಕ್ಕಳಿಸಿಬಿಟ್ಟರೆ ಯಾರಿಗೆ ಏಳಿಕೊಳ್ಳೋದು' ಎಂದುಕೊಂಡು ಓಡಿದನು ಆ ವೇಳೆಗೆ ಸರಿಯಾಗಿ, ಎತ್ತು ಮನೆಬಿಟ್ಟು ಮುಂದೆಹೋಯಿತು. ''ಎಲಾ! ಮಗ! ನೆಂಟ ಹೊಂಟುಹೋಗ್ತದೆ ಹಿಡಿಕೊಳ್ಳೊ'' ಎಂದನು.

ನೆಂಟನಿಗೆ ಇನ್ನೂ ಗಾಬರಿಯಾಯಿತು ಅವನು ಸಿಕ್ಕಿದರೆ ಕೆಟ್ಟೆಎಂದು ಕಾಲಿಗೆ ಬುದ್ಧಿಹೇಳಿದನು ಆದನ್ನು ಕಂಡು ರೈತನು ''ಬಾರಯ್ಯ! ನಿನ್ನಲ್ಲ ಬಾರಯ್ಯ'' ಎಂದು ಹಿಂದೆ ಹೋದನು. ಅವನಿನ್ನೂ ನಾಗಾಲೋಟ ಓಡಿಬಿಟ್ಟನು

# ಮತ್ತೊಂದು ಸಹಾಯ



ಈ ಮಗ್ಗುಲಿನ ಚಿತ್ರವು ಡಾ|| ಬಿ. ಜಯರಾಂ ಇವರದು. ಇವರು ಎಂ. ಬಿ, ಎಲ. ಆರ್. ಸಿ. ಪಿ, ಎಂ. ಆರ್. ಸಿ. ಎಸ್., ಟಿ. ಡಿಡಿ., ಎಂಬ ಪ್ರಸಿದ್ಧ ಬಿರುದುಗಳನ್ನು ಪಡೆದಿದ್ದಾರೆ. ಈಗ ಇವರು ಮೈಸೂರು ಒಂಟಿಕೊಪ್ಪಲಿನಲ್ಲಿರುವ ರಾಜಕುಮಾರಿ ಕೃಷ್ಣಾಜಮ್ಮಣ್ಣಿ ಕ್ಷಯರೋಗದ ಆಸ್ಪತ್ರೆಯ ಛಾರ್ಜಿನಲ್ಲಿದ್ದಾರೆ. ಎಂದರೆ, ಅಲ್ಲಿರುವ ಖಾಯಿಲೆಯವರನ್ನು ನೋಡಿಕೊಳ್ಳುವುದು, ಅವರಿಗೆ ಔಷಧ, ಪಥ್ಯ, ಇವುಗಳನ್ನು ಗೊತ್ತು ಮಾಡುವುದು, ಇದು ಅವರ ಕೆಲಸ.

ಇವರು ದೊಡ್ಡವಂಶದವರು. ಇವರ ತಂದೆಯವರು ಶ್ರೀಯುತ ಬಿ. ವೆಂಕಟಸಾಮಿನಾಯಿಡುಯವರು ಬೆಂಗಳೂರಿನಲ್ಲಿರುವ ರೆಸಿಡೆನ್ಸಿ ಟ್ರೆಜರಿಯ ಟ್ರೆಜರರ್ ಆಗಿದ್ದರು. ಇವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದಿದರು. ಅನಂತರ ಮದರಾಸಿನ ಮೆಡಿಕಲ ಕಾಲೇಜಿನಲ್ಲಿ ಓದಿ ೧೯೨೭ ರಲ್ಲಿ ಯೂರೋಪ್, ಅಮೇರಿಕ, ಮೊದಲಾದ ದೇಶಗಳಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಪೂರಯಿಸಿಕೊಂಡು ಬಂದರು ಇವರು ಕ್ಷಯರೋಗದ ಚಿಕಿತ್ಸೆಯಲ್ಲಿ ಬಹಳ ಹೆಚ್ಚಿನ ಜಾತಿಯ ಕುಶಲರು.

ಈಚೆಗೆ ಇವರು ಮೈಸೂರಿನ ಗುಣಾಂಬಾ ಶಿಶುಸಂರಕ್ಷಣಾಲಯದಲ್ಲಿ "ಪ್ರಿವೆಂಟೋರಿಯಂ" ಎಂದು ಒಂದು ಚಿಕಿತ್ಸಾಲಯವನ್ನು ಸ್ಥಾಪಿಸಿದ್ದಾರೆ ಇಲ್ಲಿ ಎಳೆಯ ಮಕ್ಕಳಿಗೆ ಚಿಕಿತ್ಸೆ ನಡೆಯುವುದು ಕ್ಷಯರೋಗದ ಸೋಂಕು ಅಥವಾ ಅನುಮಾನವಿರುವ ಮಕ್ಕಳನ್ನು ಅಲ್ಲಿಗೆ ಕರೆಯಿಸಿಕೊಂಡು ಪರೀಕ್ಷಿಸಿ ಅವರಿಗೆ ತಕ್ಕ ಚಿಕಿತ್ಸೆ ಮಾಡುವರು.

ಹೀಗೆ ಮಕ್ಕಳ ದೇಹಾರೋಗ್ಯದ ವಿಚಾರವಾಗಿ ಇಷ್ಟು ಶ್ರದ್ಧೆಯಿಂದ ಕೆಲಸ ಮಾಡುತ್ತಿರುವ ಇವರು ವಿಶ್ವಾಸದಿಂದ ಮಕ್ಕಳ ಪುಸ್ತಕಕ್ಕೂ ತಮ್ಮ ಔದಾರ್ಯವನ್ನು ನೀಡಿದ್ದಾರೆ. ಇವರು ಆಜೀವ ಸದಸ್ಯರಾಗಿ ಮಕ್ಕಳ ಪುಸ್ತಕಕ್ಕೆ ಪರಮೋಪಕಾರ ಮಾಡಿದ್ದಾರೆ. ಇವರಿಗೆ ಶುಭವಾಗಲಿ, ಜಯವಾಗಲಿ, ಎಂದು ಮಕ್ಕಳ ಪುಸ್ತಕದ ಅಭಿಮಾನಿಗಳೆಲ್ಲರೂ ಹರಸಬೇಕು : ಹರಸುತ್ತಾರೆ : ಅಲ್ಲವೆ ?

— ಮಕ್ಕಳ ಪುಟ —

## ಮುದುಕನ ಬಾಳು

ಒಂದೂರಿನಲ್ಲಿ ಒಬ್ಬ ಮುದುಕ ಅವನಿಗೆ ಇಬ್ಬರು ಹೆಂಡತಿಯರು ಒಬ್ಬಳು ಮುದುಕಿ. ಇನ್ನೊಬ್ಬಳು ಯುವತಿ. ಮುದುಕಿಯ ತಲೆಯು ಬೆಳ್ಳಗಿತ್ತು. ಯುವತಿಯ ತಲೆಯು ಕರ್ರಗಿತ್ತು ಆ ಮುದುಕನ ತಲೆಯು ಬೆಳ್ಳನೆ ಮತ್ತು ಕರ್ರನೆ ಕೂದಲುಗಳಿಂದ ಮಿಶ್ರವಾಗಿತ್ತು

ಮುದುಕಿಯು ತನ್ನ ಗಂಡನ ಕರೀಕೂದಲನ್ನೆಲ್ಲಾ ತೆಗೆದು ಅವನ ತಲೆಯು ತನ್ನ ತಲೆಯ ಹಾಗೆ ಆಗುವಂತೆ ಮಾಡಬೇಕೆಂದು ಯೋಚಿಸಿಕೊಂಡಳು.

ಯುವತಿಯು ತನ್ನ ಗಂಡನು ಬಿಳೀಕೂದಲನ್ನೆಲ್ಲಾ ತೆಗೆದು ಅವನ ತಲೆಯು ತನ್ನ ತಲೆಯಂತೆ ಆಗುವಂತೆ ಮಾಡಬೇಕೆಂದು ಯೋಚಿಸಿಕೊಂಡಳು ಕೊನೆಗೆ ಅವರಿಬ್ಬರೂ ತಮ್ಮ ತಮ್ಮ ಯೋಚನೆಯಂತೆಯೇ ನೆರವೇರಿಸಿಬಿಟ್ಟರು ಮುದುಕನ ತಲೆ ನುಣ್ಣಗಾಯಿತು.

ವೆಂಕಟರಾವ್

## ಹಾವಾಡಿಗ

೧

ಬಾರೋ ಬೇಗ-ಸುಂದರ ನಾಗ
ಮೋಡೀನಿನ್ನಾ-ಮೋಹನ ರಾಗ
ಬುಟ್ಟೀ ಬಿಟ್ಟೂ ಬಾರೋ ಹಿಂಗೇ
ಪುಂಗೀ ಸಂಗಾ ಬೇಡೇ ನಿಂಗೇ ?
ಚಿಟ್ಟದ ನಾಗ-ಬಾರೋ ಬೇಗ

೨

ಆಡೀ ಪಾಡೀ ಕಾಸನು ಬೇಡಿ
ತೋರೋ ಜಾಣಾ ವೈಬಿನ್ನಾಣ
ನಿದ್ದೇ ಮಾರಿಯ ಹದ್ದೂ ಮೀರು
ಮುದ್ದೂ ಮುಖವ ಎದ್ದೂ ತೋರು
ಬಾರೋ ಬೇಗ-ಪಟ್ಟೆಯ ನಾಗ

೩

ಪಾಪಾ ಬಂದ ಏಳೋ ಕಂದ
ಅಕ್ಕಾ ತಂದಾ ಅಕ್ಕೀ ಚೆಂದ
ಬಟ್ಟೇ ಬರೇ ಕಾಡೀ ಬೇಡೋ
ನಾಟ್ಯಾ ಗೀಟ್ಯಾ ಮಾಡೀ ಆಡೋ
ಬಾರೋ ಬೇಗ ವಜ್ರದ ನಾಗ

೪

ಕಚ್ಚಾ ಬೇಡೋ ಕಡಿಯಾಬೇಡೋ
ಹೆಡೇ ನೀಡೋ-ಕೋಪಾ ಬೇಡೋ
ಅಜ್ಜಾ ಬಂದ ಅಜ್ಜೀ ಬಂತು
ಹಾಲೂ ತುಪ್ಪಾ ಸಕ್ಕರೆ ತಂತೂ
ಕೋಪಾ ನೀಗಿ-ಬಾರೋ ಬೇಗ

೫

ಚಿನ್ನಾ ಬೆಳ್ಳಿಯ-ನಾಗರ ತಂದು
ಅಡ್ಡಾ ಬಿದ್ದೂ ಬೇಡುತೆ ನಿಂದು
ನಾರೀ ರೆಲ್ಲಾ ಕರೆಯುವ ರಲ್ಲಾ!
ಬರೋ ದಿಲ್ಲಾ ಅಂತೀ ಅಲ್ಲಾ!
ಸುಬ್ಬರಾಯ-ಹಬ್ಬಕೆ ಬಾರೋ!

೬

ನಾಗಪ್ಪ ಬಂದ!-ನಾಗೇಂದ್ರ ಬಂದ!
ಮಕ್ಕಳೆ ಜೋಕೆ!-ಗಲಿಬಿಲಿ ಎಕೆ?
ಹೆಂಗಸರನ್ನು ಹೆದರಿಸಲೆಂದು
ಅತ್ತೇ ಮನೆಗೇ ಅಳಿಯನು ತಂದಾ
ರಬ್ಬರ್ ನಾಗ-ಬಂದೇ ಬಂದ !!

ಟಿ ಎಂ ಆರ್. ಸ್ವಾಮಿ

# ಬಹುಮಾನ ಪಡೆದವರು

(ಈಸಲ ಎಲ್ಲರಿಗೂ ಒಂದೊಂದು ಪುಸ್ತಕವನ್ನು ಬಹುಮಾನವಾಗಿ ಹಂಚಿದೆ. ಅಣ್ಣ)

೧ ಸಿ ಶ್ರೀನಿವಾಸನ್, ಬೆಂಗಳೂರು
೨ ಎಸ್ ಸರಸ್ವತೀಬಾಯಿ, ಬಳ್ಳಾರಿ
೩ ಎ. ಹೇಮಾವತಿಬಾಯಿ, ಬೆಂಗಳೂರು
೪ ಜಿ. ಪದ್ಮಾವತಮ್ಮ. ಬೆಂಗಳೂರು
೫ ಕೆ ವಿ. ಶ್ರೀನಿವಾಸಶೆಟ್ಟಿ ಚಿತ್ರದುರ್ಗ
೬ ಜಿ. ಎನ್, ಶ್ರೀನಿವಾಸಯ್ಯಂಗಾರ್, ಹಿರಿಯೂರು
೭ ಕೆ. ಸರ್ವಮಂಗಳಾ, ತುಮಕೂರು
೮ ಎ. ಕೃಷ್ಣಮೂರ್ತಿ, ಮೈಸೂರು
೯ ಜಿ. ಆರ್ ಶೇಷಾದ್ರಿ, ಮೈಸೂರು
೧೦ ಡಿ. ಆರ್. ಭಗವಾನಲು, ಕಡೂರು
೧೧ ಡಿ ಎಸ್ ಚಂದ್ರಶೇಖರ, ಬೆಂಗಳೂರು
೧೨ ಬಿ. ಆರ್ ಗುರುರಾವ್, ನರಸಾಪುರ
೧೩ ಎಚ್ ಮೀನಾಕ್ಷಮ್ಮ, ಚಿಕ್ಕಬಳ್ಳಾಪುರ
೧೪ ವಿ. ಸತ್ಯಮೂರ್ತಿ ಮೈಸೂರು
೧೫ ಎಸ್. ಎಚ್ ವೆಂಕಟರಾವ್ ನಂಜನಗೂಡು
೧೬ ಅಮೃತದೇವಿ ಹಿರೇಮಠ, ಧಾರವಾಡ
೧೭ ಎಲ್ ಎಸ್. ಮುನಿದಾಸಿ, ಲಕ್ಕೂರು
೧೮ ಕೆ. ಸತ್ಯವತಿದೇವಿ ಗುಬ್ಬಿ
೧೯ ಬಿ. ಎಸ್. ರಂಗನಾಥನ್, ಕೋಲಾರ.
೨೦ ಎಂ. ಪಿ. ರಾಮುಸ್ವಾಮಯ್ಯ. ಅರಸೀಕೆರೆ
೨೧ ಎ. ಶಿವರಾಮಯ್ಯ, ಚಿತ್ರದುರ್ಗ.
೨೨ ಬಿ. ಘಂಟಾಚಾರಿ, ಬೆಂಗಳೂರು
೨೩ ಎಚ್. ಎಸ್. ಸುಬ್ಬಣ್ಣ, ಮಂಡ್ಯ
೨೪ ಟಿ. ಎಸ್. ಶ್ರೀನಿವಾಸರಾವ್, ಬೆಂಗಳೂರು
೨೫ ಟಿ. ಎಂ. ಮುದ್ದಪ್ಪ, ಪರಶುರಾಂಪುರ
೨೬ ಎಚ್. ಸಿ ರಾಜಶೇಖರಮೂರ್ತಿ, ಹೊನ್ನವಳ್ಳಿ
೨೭ ಡಿ ಆರ್. ಜಗನ್ನಾಥರಾವ್, ಮಂಡ್ಯ
೨೮ ಎಂ ಮುತ್ತು, ಬೆಂಗಳೂರು ಸಿಟಿ
೨೯ ಜಿ ಎಸ್ ರಾಮಚಂದ್ರರಾವ್, ಸಾಗರ
೩೦ ಎಸ್. ಆರ್. ಲಲಿತ, ಮೈಸೂರು
೩೧ ವೈ. ಎಂ ಸುಂದರಮ್ಮ, ಬೆಂಗಳೂರು
೩೨ ಜೆ ಆರ್. ವಿಜಯ ಜಗಳೂರು
೩೩ ಎಚ್. ನಾಗಣ್ಣ, ಹೊಳವನಹಳ್ಳಿ
೩೪ ಎಸ್. ಕೆ ಎಸ್ ಶಾಸ್ತ್ರಿ, ಸರ್ಜಾಪುರ
೩೫ ಎ. ಆರ್. ಆನಂದರಾವ್, ಭದ್ರಾವತಿ



## ಮಿಸ್ ಫಿಲೋಮಿನಾ ತಂಬೂಶೆಟಿ

ಈಕೆಯು ನಮ್ಮ ಶ್ರೀಮನ್ಮಹಾರಾಜರ ಹುಜೂರು ಕಾರ್ಯದರ್ಶಿಗಳಾದ ರಾಜಸಭಾ ಭೂಷಣ ತಂಬೂಶೆಟ್ಟರವರ ಮಗಳು. ಈಕೆಯು ಲಂಡನ್ನಿಗೆ ಹೋಗಿ ಅಲ್ಲಿ ಪಿಟೀಲು ಬಾರಿಸುವುದನ್ನು ಕಲಿತು ಬಂದಿದ್ದಾರೆ.

ಕೆಲವು ದಿನಗಳ ಹಿಂದೆ ಇವರು ನಮ್ಮ ಮಹಾರಾಜರ ಮುಂದೆ ತಮ್ಮ ವಾದ್ಯವನ್ನು ಬಾರಿಸಿದರು. ಆಗ ಅರಮನೆಯ ಆರ್ಚಸ್ಟ್ರಾದವರು (ಎಂದರೆ ವಾದ್ಯ ಸಮೂಹ) ತಾವೂ ಅವರ ಜೊತೆಯಲ್ಲಿ ಬಾರಿಸಿದರು

ಇವರು ಪಿಟೀಲು ವಾದ್ಯದಲ್ಲಿ ಅತ್ಯುತ್ತಮವಾದ ಪಾಂಡಿತ್ಯವನ್ನು ಪಡೆದಿರುವರೆಂದು ದೇಶ ವಿದೇಶಗಳವರೂ ಹೊಗಳಿದ್ದಾರೆ.

---

# ಹ್ಯಾಮ್‌ಲೆಟ್ ಅಥವಾ ಡೇನ್‌ಮಾರ್ಕಿನ ಯುವರಾಜ.

---

ಡೇನ್‌ಮಾರ್ಕಿನಲ್ಲಿ ಹ್ಯಾಂಲೆಟ್ ಎಂಬ ರಾಜನು ಆಳುತ್ತಿದ್ದನು. ಗೆರ'ಟ್ರೂಡ' ಎಂದು ಆತನ ರಾಣಿಯ ಹೆಸರು. ದೊರೆಯು ಅಕಸ್ಮಾತ್ತಾಗಿ ಮೃತನಾದನು. ಆ ಮರಣದ ಶೋಕವು ಮರೆಯುವುದಕ್ಕಿಂತ ಮುಂಚೆಯೇ ರಾಣಿಯು ತನ್ನ ಮೈದುನನಾದ ಕ್ಲಾಡಿಯಸ್ ಎಂಬುವನನ್ನು ಮದುವೆಯಾದಳು. ಅವನು ವಿದ್ಯಾಬುದ್ಧಿಗಳಲ್ಲಾಗಲಿ ರೂಪಸೌಂದರ್ಯಗಳಲ್ಲಾಗಲಿ ಹ್ಯಾಂಲೆಟ್ಟನಿಗೆ ಸಮನಲ್ಲ ಅಷ್ಟೇ ಅಲ್ಲ, ಅವನು ಕುರೂಪಿ. ಅವಿವೇಕಿ, ಅಯೋಗ್ಯ. ಅದರಿಂದ ಜನರು ರಾಣಿಯನ್ನು ಅವಿವೇಕಿ, ಕಪಟಿ, ಎಂದು ಇನ್ನೂ ಏನೇನೋ ಅಂದರು ಮತ್ತೆ ಕೆಲವರು "ಕ್ಲಾಡಿಯಸ್‌ನು ರಾಣಿಯನ್ನೂ ಸಿಂಹಾಸನವನ್ನೂ ಹೊತ್ತುಹಾಕಬೇಕೆಂದು, ಯುವರಾಜ ಹ್ಯಾಂಲೆಟ್ಟನಿಗೆ ಮೋಸಮಾಡಬೇಕೆಂದು ತಾನೇ ದೊರೆಯನ್ನು ಕೊಂದನು." ಎಂದೂ ಆಡಿಕೊಂಡರು.

ಗೆಟ್ರೂಡಳು ಹಾಗೆ ನಡೆದುದು ಯುವರಾಜನಿಗೆ ಕೊಂಚವೂ ಸರಿಬೀಳಲಿಲ್ಲ. ಅವನು ತನ್ನ ತಾಯಿಯ ನಡತೆಗಾಗಿ ಬಹಳ ದುಃಖಿಸಿದನು. ತಾನು ಬಹಳವಾಗಿ ಪ್ರೀತಿಸುತ್ತಿದ್ದ ತಂದೆಯು ಥಟ್ಟನೆ ಮೃತನಾದುದು, ತಾಯಿಯು ಹೀಗೆ ಅಯೋಗ್ಯನನ್ನು ಮದುವೆಯಾದುದು, ಎರಡೂ ಸೇರಿ ಅವನಿಗೆ ತಡೆಯಲಾರದಷ್ಟು ವ್ಯಸನಕ್ಕೆ ಕಾರಣವಾದುವು. ಅವನಿಗೆ ಆಟಪಾಟಗಳಲ್ಲಿ ಇದ್ದ ಆಸಕ್ತಿಯು ಹಾರಿಹೋಯಿತು. ಪುಸ್ತಕಗಳು ಬೇಡವಾದುವು. ಅವನಿಗೆ ಎಲ್ಲಿ ಕುಳಿತರೂ ಎಲ್ಲಿ ನಿಂತರೂ ಇದೇ ಚಿಂತೆಯಾಗಿ ತಾನು ಬದುಕಿರುವುದು ತನಗೇ ಭಾರವಾಯಿತು. "ಈ ಪ್ರಪಂಚವೊಂದು ಕಳೆಬೆಳೆದ ಕೈತೋಟ. ಇಲ್ಲಿ ಒಳ್ಳೆಯ ಹೂವಿನ ಗಿಡಗಳು ಉಳಿಯುವುದಿಲ್ಲ; ಬೆಳೆಯುವುದಿಲ್ಲ. ಬೆಳೆಯುವುದೆಲ್ಲ ಕಳೆಗಳೇ!" ಎನ್ನಿಸಿತು ತನಗೆ ಸಿಂಹಾಸನವು ತಪ್ಪಿಹೋಗುವುದು ಎಂಬ ಭೀತಿಗಿಂತಲೂ ತನ್ನ ತಾಯಿಯ ನಡತೆಯಿಂದಾದ ವ್ಯಸನವೇ ಅವನಿಗೆ ಹೆಚ್ಚಾಯಿತು. ಅವನು ಬರು ಬರುತ್ತ ಮಂಕಾಗಿ ಹೋದನು

ಅವನ ತಾಯಿಯೂ ಅವಳ ಗಂಡನೂ ಅವನಿಗೆ ಸಂತೋಷವಾಗಲೆಂದು ಏನೇನೋ ಮಾಡಿದರು. ಹಬ್ಬವಾಗಲಿ ಹರಿದಿನವಾಗಲಿ ಅವನು ತನ್ನ ತಂದೆಯ ಮರಣಕ್ಕಾಗಿ ದುಃಖವನ್ನು ಸೂಚಿಸುವ ಕರಿಯ ಉಡುಪನ್ನೇ ಧರಿಸಿಕೊಂಡು ತಿರುಗುವನು

ಅವನಿಗೆ ಬರುಬರುತ್ತ ತಂದೆಯು ಥಟ್ಟನೆ ಮೃತನಾದುದೇಕೆ ಎಂಬುದನ್ನು ಕಂಡು ಹಿಡಿಯುವ ಯೋಚನೆಯು ಹುಟ್ಟಿತು ಕ್ಲಾಡಿಯಸ್ಸನು ತಮ್ಮ ಅಣ್ಣನು ಹಾವು ಕಡಿದು

ಸತ್ತುಹೋದನೆಂದು ಹೇಳಿದ್ದನು ಆದರೆ ಹ್ಯಾಂಲೆಟ್ಟನು ಅದನ್ನು ನಂಬಲಿಲ್ಲ. ಹಾವು ಈ ಕ್ಲಾಡಿಯಸ್ಸನೇ ಇರಬಹುದು. ಆತನ ರಾಜಕಿರೀಟವನ್ನು ಹಾರಿಸುವುದಕ್ಕೋಸ್ಕರ ಆತನನ್ನು ಕಡಿದ ಹಾವೇ ಈಗ ಆ ಕಿರೀಟವನ್ನು ಧರಿಸಿ ಸಿಂಹಾಸನದಲ್ಲಿ ಕುಳಿತಿದೆ" ಎಂದು ಅವನಿಗೆ ಸಣ್ಣನಂಬಿಕೆ. ಆದರೆ ತನ್ನದು ಸರಿಯೋ ತಪ್ಪೋ? ತನ್ನ ತಾಯಿಯೂ ಈ ದುಷ್ಕೃತ್ಯಕ್ಕೆ ಸಹಾಯಮಾಡಿರುವಳೋ ಏನೋ? ಅವನು ಮಾಡಿದುದು ಇವಳಿಗೂ ತಿಳಿದಿತ್ತೊ ತಿಳಿದೇ ಇರಲಿಲ್ಲವೋ ಎಂಬುದೇ ಅವನಿಗೆ ಭಾರಿಯ ಸಂಶಯ. ಅದನ್ನು ಕುರಿತು ಯೋಚಿಸುತ್ತಾ ಅವನಿಗೆ ಹುಚ್ಚು ಹಿಡಿದಂತಾಯಿತು.

ಈ ನಡುವೆ ಒಂದು ದೆವ್ವದ ಸುದ್ದಿಯು ಹ್ಯಾಂಲೆಟ್ಟನ ಕಿವಿಗೆ ಬಿತ್ತು. ಅರಮನೆಯ ಹೆಬ್ಬಾಗಿಲಿನಲ್ಲಿ ಮಧ್ಯರಾತ್ರಿಗೆ ಸರಿಯಾಗಿ ಎರಡು ಮೂರು ದಿನಗಳು ಒಂದು ರೂಪವು ಕಾಣಿಸಿಕೊಂಡಿದೆ. ನೋಡುವುದಕ್ಕೆ ಮೃತನಾದ ದೊರೆಯಂತೆಯೇ ಇದೆ. ಆತನು ಧರಿಸಿದ್ದ ಕವಚಾದಿಗಳಂತೆಯೇ ಇರುವ ಕವಚಾದಿಗಳನ್ನೇ ಧರಿಸಿದಂತಿದೆ. ಅದನ್ನು ಹಲವರು ನೋಡಿದ್ದಾರೆ. ಹ್ಯಾಂಲೆಟ್ಟನ ಪ್ರಾಣಸ್ನೇಹಿತ ಹೊರೇಷಿಯೋ ಕೂಡ ನೋಡಿದ್ದಾನೆ

ಅದರ ಮುಖವು ಕೂಡ ಕಾಣಿಸಿದೆ. ಅದರಲ್ಲಿ ಕೋಪಕ್ಕಿಂತಲೂ ದುಃಖವೇ ಹೆಚ್ಚಾಗಿದೆ. ಅದಕ್ಕೆ ಗಡ್ಡವು ಬೆಳೆದಿದೆ ಆ ಗಡ್ಡದಲ್ಲಿ ಹಿಂದಿನ ದೊರೆಗಿದ್ದಂತೆ ಬಿಳಿಯ ಕೂದಲೂ ಹೆಚ್ಚಾಗಿದೆ. ಅದನ್ನು ಕೆಲವರು ಮಾತನಾಡಿಸಿದರು. ಏನೋ ಮಾತನಾಡುವುದಕ್ಕೆ ಪ್ರಯತ್ನಪಟ್ಟಂತೆ ಕಂಡರೂ ಅದು ಏನೂ ಮಾತನಾಡಲಿಲ್ಲ. ಅಷ್ಟರೊಳಗಾಗಿ ಬೆಳಗಿನ ಝಾವದ ಕೋಳಿಯು ಕೂಗಿತು ಅದು ಅವಸರ ಅವಸರವಾಗಿ ಹೊರಟು ಹೋಯಿತು.

ಹ್ಯಾಂಲೆಟ್ಟನಿಗೆ ಈ ಕಥೆಯನ್ನು ಕೇಳಿ ಚೋದ್ಯವಾಯಿತು : ಅವನಿಗೆ ಅದು ಸುಳ್ಳು ಎನ್ನಿಸಲಿಲ್ಲ. ಆ ಪಿಶಾಚವು ತನ್ನ ತಂದೆಯ ಪ್ರೇತವಿರಬಹುದು ಎನ್ನಿಸಿತು. "ಆಗಲಿ ಕಾವಲು ಕಾಯುವೆನು. ಅದು ಬಂದರೆ ಮಾತನಾಡಿಸುವೆನು. ಅದು ಸುಮ್ಮ ಸುಮ್ಮನೆ ಬಂದೀತೆ? ಏನೋ ಹೇಳುವುದಕ್ಕೆ ಬಂದಿರಬೇಕು" ಎನ್ನಿಸಿ ಆ ರಾತ್ರಿ ತಾನೂ ಹೋಗಿ ಕಾವಲುಗಾರರ ಜೊತೆಯಲ್ಲಿ ನಿಂತನು.

ಸಂಜೆಯಾಯಿತು. ರಾತ್ರಿಯೂ ಆಯಿತು. ಯುವರಾಜನು ತನ್ನ ಮಿತ್ರರಾದ ಹೊರೇಷಿಯೋ ಮಾರ್ಸೆಲಸ್ ಇಬ್ಬರ ಜೊತೆಯಲ್ಲಿ ಹೋಗಿ ಆ ಪಿಶಾಚವು ಕಾಣಿಸಿಕೊಂಡ ಸ್ಥಳದಲ್ಲಿ ನಿಂತು ಅದರ ಬರವನ್ನೇ ಕಾಯ್ದನು. ಚಳಿ ಗಾಳಿ ಆದರೂ ಅವನಿಗೆ ಅಲ್ಲಿಂದ ಹೊರಟು ಹೋಗಲು ಮನಸ್ಸಾಗಲಿಲ್ಲ.

ಕಾಲಕ್ಕೆ ಸರಿಯಾಗಿ ಪಿಶಾಚಿಯು ಬಂದಿತು. ಅದನ್ನು ನೋಡಿ ಹ್ಯಾಂಲೆಟ್ಟನಿಗೆ ಏಕಕಾಲದಲ್ಲಿ ಭೀತಿಯೂ ಆಶ್ಚರ್ಯವೂ ಆದುವು. ಆ ಪಿಶಾಚವು ಒಳ್ಳೆಯದೋ ಕೆಟ್ಟದೋ ಎಂದು ಸಂಶಯಪಟ್ಟು ತನ್ನನ್ನು ಕಾಪಾಡೆಂದು ದೇವರನ್ನು ಪ್ರಾರ್ಥಿಸಬೇಕು ಎನ್ನಿಸಿತು. ಆದರೆ ಅದರ ಮೊಗದಲ್ಲಿದ್ದ ದೈನ್ಯವನ್ನೂ ಅದು ತನ್ನ ತಂದೆಯಂತೆಯೇ ಇರುವುದನ್ನೂ ಕಂಡು ಅವನಿಗೆ ಮರುಕ ಹುಟ್ಟಿತು. ಕೂಡಲೇ "ತಂದೆಯೇ! ನೀನೇಕೆ ನಿನ್ನ ಸಮಾಧಿಯನ್ನು ಬಿಟ್ಟು ಬಂದೆ? ಭೂಗರ್ಭದಿಂದ ಮತ್ತೆ ಈ ಭೂಲೋಕಕ್ಕೆ ನಿನ್ನನ್ನು ಕರೆದು ತಂದ ಕಾರಣವೇನು? ಏನು ಮಾಡಿದರೆ ನಿನಗೆ ತೃಪ್ತಿಯಾಗಿ ನೀನು ಹಿಂತಿರುಗುವೆ? ಹೇಳು" ಎಂದು ಮಾತನಾಡಿಸಿದನು.

ಪಿಶಾಚವು ಅವನ ಮುಖವನ್ನು ನೋಡಿ ಅವನೊಬ್ಬನೇ ತನ್ನ ಜೊತೆಯಲ್ಲಿ ಬರಬೇಕೆಂದು ಸನ್ನೆಮಾಡಿತು. ಆದರೆ ಅವನ ಗೆಳೆಯರಿಗೆ ಅದು ಅವನನ್ನು ಏನುಮಾಡುವುದೋ ಎಂದು ಹೆದರಿಕೆ "ಎಲ್ಲಿಗಾದರೂ ಕರೆದುಕೊಂಡು ಹೋಗಿ ಅವನಿಗೆ ಹುಚ್ಚು ಗಿಚ್ಚು ಹಿಡಿಸಿಬಿಟ್ಟರೆ"! ಎಂದು ಅವನು ಹೋಗಕೂಡದೆಂದು ಅವನನ್ನು ತಡೆದರು. ಆದರೆ ಹ್ಯಾಂಲೆಟ್ಟನು ಅವರ ಮಾತನ್ನು ಕೇಳಲಿಲ್ಲ. ಪ್ರಾಣಹೋದರೆ ಹೋಗಲಿ ಎಂದು ಅವರು ತಡೆದರೂ ನಿಲ್ಲದೆ ಅದರ ಹಿಂದೆ ಹೊರಟುಹೋದನು.

ಪಿಶಾಚವು ಅವನನ್ನು ನಿರ್ಜನವಾದ ಸ್ಥಳಕ್ಕೆ ಕರೆದೊಯ್ಯಿತು. ಅಲ್ಲಿ ಮಾತನಾಡಿ "ಅಯ್ಯಾ! ನಾನು ನಿನ್ನ ತಂದೆ. ನಿಮ್ಮ ಚಿಕ್ಕಪ್ಪನು ನನ್ನ ಸಿಂಹಾಸನವನ್ನೂ ಹೆಂಡಿತಿಯನ್ನೂ ಹಾರಿಸುವುದಕ್ಕಾಗಿ ನನ್ನನ್ನು ಕೊಂದನು. ನಾನು ಉದ್ಯಾನವನದಲ್ಲಿ ಎಂದಿನಂತೆ ವಿಶ್ರಾಂತಿಗಾಗಿ ಮಲಗಿದ್ದೆ, ಆ ಪಾಪಿಯು ಸದ್ದಾಗದಂತೆ ಬಂದು ನನ್ನ ಕಿವಿಯಲ್ಲಿ ವಿಷವನ್ನು ಹೊಯ್ದನು. ಅದು ಪಾದರಸದಂತೆ ಜಾಗ್ರತೆಯಾಗಿ ಮೈಗೆಲ್ಲ ವ್ಯಾಪಿಸಿ ರಕ್ತವನ್ನು ಕೆಡಿಸಿ, ಮೈಮೇಲೆ ತೊನ್ನುಕಾಣುವ ಹಾಗೆ ಮಾಡಿಬಿಟ್ಟಿತು ಹೀಗೆ ನಿದ್ದೆಯಲ್ಲಿ ಮೈಮರೆತಿದ್ದಾಗ ಸ್ವಂತ ತಮ್ಮನೇ ನನ್ನನ್ನು ಕೊಂದುಬಿಟ್ಟನು. ಹ್ಯಾಂಲೆಟ್! ವತ್ಸ! ನೀನು ಇದರ ಸೇಡು ತೀರಿಸಲೊಲ್ಲೆಯಾ? ತಂದೆಯನ್ನು ಕೊಂದವನನ್ನು ನೀನು ಕೊಲ್ಲದೆ ಬಿಡುವೆಯಾ? ನಿನ್ನ ತಾಯಿಯೂ ಇಷ್ಟು ಬೇಗ ನನ್ನನ್ನು ಮರೆತು ಆ ಘಾತುಕನನ್ನು ಕೂಡಿಕೊಂಡಳೆಂದು ನನ್ನ ಮನಸ್ಸು ಎಷ್ಟು ಪರಿತಪಿಸುವುದು ಬಲ್ಲೆಯಾ? ಆದರೆ, ಹ್ಯಾಂಲೆಟ್! ಒಂದು ನೆನೆಪಿರಲಿ. ಈ ಕೊಲೆಪಾತಕನನ್ನು ತೀರಿಸುವ ಪ್ರಯತ್ನದಲ್ಲಿ ನಿನ್ನ ತಾಯಿಗೆ ಅಪಾಯವನ್ನುಂಟುಮಾಡಬೇಡ. ಅವಳ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಆ ಪರಮೇಶ್ವರನೇ ವಿಧಿಸಿಕೊಳ್ಳಲಿ. ಅದು ನಮಗೆ ಬೇಡ" ಎಂದು ಕೇಳಿಕೊಂಡಿತು.

ಹ್ಯಾಂಲೆಟ್ಟನು "ಆಗಲಿ ನಿನ್ನ ಮಾತನ್ನು ನಡೆಸುವನು" ಎಂದು ವಾಗ್ದಾನ ಮಾಡಿದನು. ಪಿಶಾಚವು ಮಾಯವಾಯಿತು. ಅವನು ಅಲ್ಲಿಯೇ ಒಂದು ಗಳಿಗೆ ನಿಂತು



ಹ್ಯಾಂಲೆಟ್ಟನು ಪಿಶಾಚದ ಸುದ್ದಿಯನ್ನು ತನ್ನ ಗೆಳೆಯರಿಗೆ ಮಾತ್ರ ಹೇಳಿದನು.

"ಇನ್ನು ಮುಂದೆ ನಾನು ಬದುಕಿರುವುದು ಒಂದೇ ಒಂದು ಕೆಲಸಕ್ಕೆ! ಅದು ನನ್ನ ತಂದೆಯ ಆತ್ಮಕ್ಕೆ ಶಾಂತಿತರುವುದಕ್ಕೆ! ಆತನ ವೈರಿಯ ಮೇಲೆ ಸೇಡುತೀರಿಸುವುದಕ್ಕೆ!" ಎಂದು ಶಪಥಮಾಡಿಕೊಂಡನು. ಆ ದಿನ ನಡೆದುದನ್ನೆಲ್ಲ ಪ್ರಾಣಾಪ್ತರಾದ ಗೆಳೆಯರಿಗಲ್ಲದೆ ಇನ್ನಾರಿಗೂ ತಿಳಿಸಲಿಲ್ಲ.

ಹ್ಯಾಂಲೆಟ್ಟನು ಹೆಣ್ಣು ಮನಸ್ಸಿನವನು. ಅವನಿಗೆ ಆ ಪಿಶಾಚಿಯ ದರ್ಶನವಾದುದೇ ಮೊದಲು ಹೆಚ್ಚು ಕಡಿಮೆ ಹುಚ್ಚು ಹಿಡಿದಂತಾಯಿತು. ಚಿಕ್ಕಪ್ಪನು ತಾನು 'ದುರ್ಮಸಲತ್ತು' ನಡೆಸುತ್ತಿರುವನೆಂದು ಶಂಕಿಸಿಯಾನು ಎಂದು ಶಂಕಿಸಿದನು ಜೊತೆಗೆ ತನ್ನ ತಂದೆಗೆ ಮೃತ್ಯುವು ಹೇಗೆ ಬಂತೆಂಬುದು ತನಗೆ ತಿಳಿದಿದೆಯೆಂಬುದೂ ಅವನಿಗೆ ತಿಳಿಯಬಾರದೆಂದು ಅವನೂ ಪೂರಾ ಹುಚ್ಚನಂತೆಯೇ ಆಡುವುದಕ್ಕೆ ಆರಂಭಿಸಿದನು. ಹುಚ್ಚನಂತಿದ್ದರೆ ಯಾರೂ ತನ್ನನ್ನು ಗಮನಿಸುವುದಿಲ್ಲ ತನ್ನ ಗುಟ್ಟು ಯಾರಿಗೂ ತಿಳಿಯುವುದಿಲ್ಲ ಎಂದು ಹುಚ್ಚನ ಆಟವನ್ನು ಕಟ್ಟಿದನು.

ಅವನ ವೇಷ, ಭೂಷಣ, ಭಾಷೆ, ಎಲ್ಲವೂ ಹುಚ್ಚು ಹುಚ್ಚಾಯಿತು ಹುಚ್ಚನಿಗಿಂತಲೂ ಹುಚ್ಚಾಗಿರುವ ಅವನನ್ನು ನೋಡಿ ರಾಜರಾಣಿಯರು ಅವನಿಗೆ ಹುಚ್ಚು ಹಿಡಿದಿದೆಯೆಂದು ಮೋಸಹೋದರು ಅವರಿಗೆ ಪಿಶಾಚವು ಕಾಣಿಸಿಕೊಂಡು ಮಾತನಾಡಿದುದು ತಿಳಿಯದು. ತಂದೆಯ ಮರಣಕ್ಕಾಗಿ ಇಷ್ಟು ವ್ಯಥಿಸುವುದುಂಟೆ? ಎಂದು ಸಂಶಯ ಅದರಿಂದ "ಹ್ಯಾಂಲೆಟ್ಟನ ಹುಚ್ಚು ಪ್ರೇಮಮೂಲವಾದುದು; ಅವನಿಗೆ ಹೆಂಗುಸಿನ ಹುಚ್ಚು ಹಿಡಿದಿದೆ"ಯೆಂದುಕೊಂಡರು

ಅದಕ್ಕೂ ಕಾರಣವಿಲ್ಲದೆ ಇರಲಿಲ್ಲ. ಅವನಿಗೆ ಈ ಮನೋರೋಗವು ಹಿಡಿಯುವುದಕ್ಕೆ ಮೊದಲು ಅವನು ಒಫೇಲಿಯಾ ಎಂಬ ಯುವತಿಯನ್ನು ಮನಸಾರೆ ಪ್ರೀತಿಸಿದ್ದನು ಅವಳು ಆ ರಾಜ್ಯದ ಮಂತ್ರಿಯಾದ ಪೊಲೋನಿಯಸ್ಸನ ಮಗಳು ಅವಳಿಗೆ ಎಷ್ಟೋ ಪ್ರೇಮಪತ್ರಗಳನ್ನು ಬರೆದು, ತನ್ನ ಪ್ರೇಮವನ್ನು ಸೂಚಿಸಲು ಎಷ್ಟೋ? ಉಂಗುರಗಳನ್ನು ಕಳುಹಿಸಿದ್ದನು ಅವಳನ್ನು ಮದುವೆಯಾಗೆಂದು ಹಲವು ಸಲ ಪ್ರಾರ್ಥಿಸಿದ್ದನು ಅವಳೂ ಅವನಿಗೆ ಒಲಿದಿದ್ದಳು: ಅವಳಿಗೂ ಅವನ ಮೇಲೆ ಪ್ರೇಮವು ಇತ್ತು

ಆದರೆ ಮನೋವ್ಯಥೆಯು ಹಿಡಿದ ಮೇಲೆ ಅವನಿಗೆ ಒಫೇಲಿಯಾ ಕೂಡ ಬೇಕಾಗಲಿಲ್ಲ. ಅವಳನ್ನು ಅನೇಕ ವೇಳೆ ನಿರ್ದಯವಾಗಿ, ನಿಷ್ಠುರವಾಗಿ ಮಾತನಾಡಿಸಿ ಅವಳಿಗೂ ವ್ಯಥೆಯಾಗುವಂತೆ ಮಾಡಿದ್ದನು ಆದರೆ ಅವಳು, ಪಾಪ! ಒಳ್ಳೆಯವಳು!, "ಏನೋ ಮನಸ್ಸು ಸರಿಯಾಗಿಲ್ಲ. ಅದರಿಂದಲೇ ಮೊದಲಿನಂತಿಲ್ಲ ಮೊದಲಿನಂತೆ




ಪೊಲೋನಿಯಸ್ :—''ಮಹಾಸ್ವಾಮಿ ! ಅವನಿಗೆ ಹಿಡಿದಿರುವುದು ಹೆಣ್ಣಿನ ಹುಚ್ಚು
ನನ್ನ ಮಾತು ನಂಬಿ.

ವಿಶ್ವಾಸದಿಂದ ಮಾತನಾಡುವುದಿಲ್ಲ. ಅಯ್ಯೋ! ಪಾಪ! ಅಂತಹ ಘನವಂತ, ಬುದ್ಧಿವಂತ, ಅವನಿಗೆ ಹೀಗಾಗಬಹುದೇ? ಈಗ ಅವನ ಸ್ಥಿತಿಯು ಒಡೆದ ಕಂಚಿನ ಗಂಟೆಯು ಹಾಗೆ ಮನಸ್ಸಿಗೆ ದುಃಖಕರವಾಗಿದೆ" ಎಂದು ಸಂಕಟಪಟ್ಟುಕೊಳ್ಳುವಳು.

ಹ್ಯಾಂಲೆಟ್ಟನಿಗೆ ವೈರತೀರಿಸುವುದೆಂಬ ಕ್ರೂರಪ್ರತಿಜ್ಞೆಯೊಂದೇ ಕಣ್ಣೆದುರಿಗೆ ನಿಂತಿದ್ದರೂ ಒಫೇಲಿಯಳ ಸುಂದರಮೂರ್ತಿಯೂ ಆಗಾಗ ಕಣ್ಣೆದುರಿಗೆ ಬಂದುನಿಂತುಕೊಳ್ಳುವುದು. ಒಮ್ಮೊಮ್ಮೆ ಅವನಿಗೆ "ಅಯ್ಯೋ! ಆ ದಿವ್ಯಕನ್ಯಕೆಯ ವಿಚಾರದಲ್ಲಿ ನಾನು ಹೀಗೆ ರಾಕ್ಷಸನಂತೆ ವರ್ತಿಸಿದೆನಲ್ಲ" ಎಂದು ಬಹಳವಾಗಿ ವ್ಯಧೆಯಾಗುವುದು. ಅಂತಹದೊಂದು ಸಮಯದಲ್ಲಿ ತನ್ನ ಅತಿಶಯ ಪ್ರೇಮವನ್ನು ಸೂಚಿಸುವ ಪ್ರೇಮ ಪತ್ರವೊಂದನ್ನು ಅವಳಿಗೆ ಬರೆದನು. "ಒಫೇಲಿಯಾ! ನಕ್ಷತ್ರಗಳು ಬೆಂಕಿಯೆಂಬುದನ್ನು ಸೂರ್ಯನು ಚಲಿಸುವನೆಂಬುದನ್ನು ನಂಬದಿದ್ದರೂ ಸತ್ಯವನ್ನೂ ಅಬದ್ಧವೆಂದರೂ ನನ್ನ ಪ್ರೇಮವನ್ನು ಮಾತ್ರ ನಂಬು. ನನ್ನ ದಿವ್ಯಕನ್ಯಕೆಯೇ! ನನ್ನ ಹೃದಯದ ದೇವಿಯೇ! ಅತ್ಯಂತ ಸುಂದರಿಯಾದ ಒಫೇಲಿಯಾ! ನನ್ನ ಸಂಕಟವನ್ನು ಬಣ್ಣಿಸಲಾರೆ! ನನ್ನ ಮಾತನ್ನು ನಂಬು ಒಫೇಲಿಯಾ! ನಿನ್ನಲ್ಲಿ ನನಗೆ ಅತಿಶಯ ಪ್ರೇಮ!" ಎಂದು ಬರೆದಿದ್ದ ಆ ಕಾಗದವನ್ನು ಅವಳು ಓದುತ್ತಿರುವಾಗ ಅವಳ ತಂದೆಯು ಬಂದನು. ಅವನು ಅದನ್ನು ಕೇಳಿ ಈಸಿಕೊಂಡು ಅದನ್ನು ತೆಗೆದುಕೊಂಡುಹೋಗಿ ರಾಜರಾಣಿಯರಿಗೆ ತೋರಿಸಿದನು. ಅವರು ಆ ಕಾಗದವನ್ನು ನೋಡಿ "ಸರಿ! ಇವನಿಗೆ ಕಾಮೋನ್ಮಾದ" ವೆಂದು ಗೊತ್ತುಮಾಡಿಕೊಂಡರು. ರಾಣಿಗೆ "ಅವಳ ಸೌಂದರ್ಯಕ್ಕೆ ಮುಗ್ಧನಾಗಿ ಹುಚ್ಚು ಹಿಡಿದಿರುವ ಮಗನಿಗೆ ಅವಳನ್ನು ಮದುವೆಮಾಡಿದರೆ ಬುದ್ಧಿಯು ಸರಿಹೋಗಬಹುದು" ಎನ್ನಿಸಿ ಕೊಂಚ ಸಂತೋಷವಾಯಿತು

ಆದರೆ ಹ್ಯಾಂಲೆಟ್ಟನಿಗೆ ಹಿಡಿದಿದ್ದ ಹುಚ್ಚಿನ ರೀತಿಯು ಬೇರೆ! ಅವನು ನೋಡಿದ್ದ ಆ ಪಿಶಾಚಿಯು, ಅದು ಅವನಿಂದ ಮಾಡಿಸಿದ್ದ ಪ್ರತಿಜ್ಞೆಯು ಅವನಿಗೆ ಮರೆಯಲಿಲ್ಲ. ಗಳಿಗೆ ಗಳಿಗೆಗೂ ಅವನ ಪ್ರತಿಜ್ಞೆಯೇ ಅವನ ಕಿವಿಯಲ್ಲಿ ಮೊರೆಯುವುದು. ಒಂದು ಗಂಟೆಯಾಯಿತು ಎರಡಾಯಿತು ಒಂದು ದಿನವಾಯಿತು ಇನ್ನೂ ನಿನ್ನ ಪ್ರತಿಜ್ಞೆ ನೆರವೇರಲಿಲ್ಲ ಎಂದು ಅವನ ಮನವೇ ಅವನನ್ನು ನಿಂದಿಸುವುದು. ತಾಯಿಯು ಜೊತೆಯಲ್ಲಿಯೇ ಇರುತ್ತಿದ್ದಳಾಗಿ ಆ ಕೊಲೆಪಾತಕನನ್ನು ತೀರಿಸಲು ಅವಕಾಶವಾಗಲಿಲ್ಲ ಸಾಲದೆ ಅವನನ್ನ ಕಂಡರೆ ಹ್ಯಾಂಲೆಟ್ಟನಿಗೇ ಕ್ರೋಧವೇರುವಂತೆಯೂ ಆಯಿತು ಯುವರಾಜನ ಮೃದು ಹೃದಯವು ನರಹತ್ಯೆಯೆಂದರೆ ಹಿಂತೆಗೆಯುವುದು. ಜೊತೆಗೆ ಹುಚ್ಚನಂತಾಡುತ್ತಿದ್ದುದೂ, ಮನೋವ್ಯಧೆಯು ಬಲವಾಗಿ ಯಾವ ಕೆಲಸವನ್ನೂ ಹಿಡಿದು ಮಾಡಲಾರದಂತಹ ಅಸಾಮರ್ಥ್ಯವನ್ನು ಕಲ್ಪಿಸಿದುದೂ, ಸೇರಿ ಅವನು ಥಟ್ಟನೆಯೇ ದುಡುಕುವುದು ಅವನಿಗೆ ಅಸಾಧ್ಯವಾಯಿತು. ಇವೆಲ್ಲದರ ಜೊತೆಗೆ "ತಾನು ನೋಡಿದ ಪಿಶಾಚವು ತನ್ನ

ತಂದೆಯದೇ ಹೌದೋ ಅಲ್ಲವೋ ? ಒಂದು ವೇಳೆ ಕಾಮರೂಪಿಯಾದ ಸೈತಾನನು ಹೀಗೆ ತಂದೆಯಂತೆ ಬಂದು ತನ್ನ ಮನಸ್ಸಿನಲ್ಲಿ ಇಲ್ಲದ ದ್ವೇಷದ ಬೀಜವನ್ನು ನೆಟ್ಟಿರುವನೋ ಏನೊ?'' ಎಂದು ಹಲವು ಸಂಶಯಗಳು ತೋರಿ ''ಇರಲಿ ಇನ್ನೂ ಕೆಲವು ಬಲವಾದ ಕಾರಣಗಳು ಸಿಕ್ಕುವವರೆಗೂ ತಡೆಯೋಣ ಗಾಳಿಯ ಮಾತು ನಂಬಿಕೊಂಡು ಪಾತಕಿ ಯಾಗುವುದೇ ?'' ಎಂದುಕೊಂಡನು.

ಹೀಗೆ ಅವನು ಅಳೆದು ಸುರಿಯುತ್ತಿರುವಾಗ ಡೆನ್ಮಾರ್ಕಿನ ಆಸ್ಥಾನಕ್ಕೆ ಕೆಲವರು ನಾಟಕದವರು ಬಂದರು. ಅವರು ಅವನಿಗೆ ಪರಿಚಿತರಾದವರು. ಅವರಲ್ಲಿ ಒಬ್ಬನ ಮೇಲಂತೂ ಅವನಿಗೆ ಬಹಳ ವಿಶ್ವಾಸ ಅವನು ಬಲು ಚೆನ್ನಾಗಿ ಪಾತ್ರವನ್ನು ಕಟ್ಟು ವನು. ಅವನನ್ನು ಉಪಯೋಗಿಸಿಕೊಂಡು ಈ ರಾಜರಾಣಿಯರ ರಹಸ್ಯವನ್ನು ಭೇದಿಸ ಬೇಕೆಂಬ ಆಶೆಯು ಹ್ಯಾಂಲೆಟ್ಟನಿಗೆ ಹುಟ್ಟಿತು. ಹಿಂದೆ ಯಾವನೋ ಒಬ್ಬ ಘಾತಕನು ನಾಟಕವನ್ನು ನೋಡುವುದಕ್ಕೆ ಬಂದಿದ್ದು ಆ ನಾಟಕದಲ್ಲಿ ನಡೆದ ಕೊಲೆಯನ್ನು ಕಂಡು ಅವನ ಮನಸ್ಸು ಕಲಕಿ ಹೋಗಿ ತನ್ನ ತಪ್ಪನ್ನು ಒಪ್ಪಿಕೊಂಡನು ಎಂಬ ಕಥೆಯನ್ನು ಅವನು ಕೇಳಿದ್ದನು. ''ಇಲ್ಲಿಯೂ ಏಕೆ ಹೀಗೆಯೇ ಆಗಬಾರದು ? ಇದೇ ಸರಿ '' ಎಂದು ಕೊಂಡು ಒಂದು ನಾಟಕವನ್ನು ಬರೆದು ಅದನ್ನು ಅವರಿಂದ ರಾಜರಾಣಿಯವರ ಎದುರಿ ನಲ್ಲಿ ಆಡಿಸುವುದಾಗಿ ಗೊತ್ತುಮಾಡಿಕೊಂಡನು.

ಆ ನಾಟಕಕ್ಕೆ ಒಂದು ಕಥೆಯನ್ನು ಕಲ್ಪಿಸಿದನು. '' ವಿಯನ್ನ ನಗರದಲ್ಲಿ ಗೊಂಜಾಗೋ ಎಂಬ ಒಬ್ಬ ರಾಜ ಅವನಿಗೆ ಬ್ಯಾಪ್ಟಿಸ್ಟ ಎಂಬ ರಾಣಿ. ಲೂಸಿಯಾನಸ' ಎಂಬ ಸಮೀಪಬಂಧು ವೊಬ್ಬನು ಉದ್ಯಾನವನದಲ್ಲಿ ರಾಜನನ್ನು ವಿಷಪ್ರಯೋಗದಿಂದ ಕೊಲ್ಲುತ್ತಾನೆ. ಅದಾದ ಕೆಲವು ದಿನಗಳಲ್ಲಿ ಗೊಂಜಾಗೋ ಹೆಂಡಿತಿಯೂ ಅವನ ರಾಜ್ಯವೂ ಅವನ ಪಾಲಾಗುತ್ತಾರೆ '' ಎಂಬುದೇ ಕಥೆ

ನಾಟಕವನ್ನು ಹ್ಯಾಂಲೆಟ್ಟನು ತಾನೇ ನಿಂತು ಅಭ್ಯಾಸಮಾಡಿಸಿದನು ಎಲ್ಲವೂ ಸಿದ್ಧವಾದ ಮೇಲೆ ರಾಜರಾಣಿಯರನ್ನು ಕರೆದುಕೊಂಡು ಬಂದು ಅವರ ಸಮ್ಮುಖದಲ್ಲಿ ಆಟವಾಡಿಸಿದನು ನಾಟಕವು ಆರಂಭವಾಯಿತು. ಗೊಂಜಾಗೋ ಅವನ ಹಂಡಿತಿ ಇಬ್ಬರೂ ಮಾತನಾಡುತ್ತ ರಂಗಭೂಮಿಗೆ ಬಂದರು ಹೆಂಡಿತಿಯು '' ನಾಥ ! ನಾನು ನಿನ್ನನ್ನು ಎಷ್ಟು ಪ್ರೀತಿಸುವೆನೆಂಬುದನ್ನು ನೀನೂ ಬಲ್ಲೆ '' ಎಂದು ಆರಂಭಿಸಿದಳು ಗಂಡನು '' ಪ್ರಿಯೆ ! ನಾನು ಬಹಳ ಕಾಲ ಈ ಲೋಕದಲ್ಲಿರುವಂತಿಲ್ಲ. ನಾನು ಹೋದ ಮೇಲೆ ನೀನೊಬ್ಬ ಗಂಡನನ್ನು ಮಾಡಿಕೊಂಡು ಈ ಲೋಕದಲ್ಲಿ ಸುಖವಾಗಿರು'' ಎಂದನು. ಹೆಂಡಿತಿಯು '' ಅಯ್ಯೊ ! ನಾನಂತಹ ದ್ರೋಹಿಯೆ ! ನಾನು ಇನ್ನೊಬ್ಬನನ್ನು ಮಾಡಿ ಕೊಳ್ಳಲೆ ? ಎಲ್ಲಾದರೂ ಉಂಟೆ ? ಎರಡನೆಯ ಗಂಡನನ್ನು ಮಾಡಿಕೊಳ್ಳುವವಳು ಎಂಥ

ಇಬ್ಬರು ರಾಯಭಾರಿಗಳೊಡನೆ ಹ್ಯಾಂಲೆಟ್ಟನು ಯಾರಿಗೂ ತಿಳಿಯದಂತೆ ಹಡಗಿನಲ್ಲಿ ಹೊರಟನು ಆ ರಾಯಭಾರಿಗಳಿಗೆ ರಾಜನು ಇಂಗ್ಲೆಂಡಿನ ರಾಜನಿಗೆ ಪತ್ರಗಳನ್ನು ಕೊಟ್ಟಿದ್ದನು ಯುವರಾಜನಿಗೆ ಇದರಲ್ಲಿಯೂ ಏನೋ ಮೋಸವಿರಬೇಕೆಂದು ಸಂಶಯವು ಹುಟ್ಟಿ, ರಾಯಭಾರಿಗಳಿಗೆ ತಿಳಿಯದಂತೆ ಅವುಗಳನ್ನು ಭೇದಿಸಿನೋಡಿದನು ಅದರಲ್ಲಿ ಹ್ಯಾಂಲೆಟ್ಟನನ್ನು ಗುಟ್ಟಾಗಿ ಸಂಹರಿಸಬೇಕೆಂದು ಬರೆದಿತ್ತು. ಹ್ಯಾಂಲೆಟ್ಟನು ಅದರಲ್ಲಿ ಬರೆದಿದ್ದ ತನ್ನ ಹೆಸರನ್ನು ಅಳಿಸಿ ಆ ರಾಯಭಾರಿಗಳ ಹೆಸರನ್ನೇ ಬರೆದು ಅಲ್ಲಯೇ ಇಟ್ಟು ಬಂದನು ಇಷ್ಟರಲ್ಲಿ ಹಡಗಿಗೆ ಕಡಲುಕಳ್ಳರು ಬಿದ್ದರು. ಪರಾಕ್ರಮಿಯಾದ ಯುವರಾಜನು ಆ ಕಳ್ಳರೊಡನೆ ಹೋರಾಡುತ್ತ ಅವರನ್ನು ಅಟ್ಟಿಕೊಂಡು ಅವರ ಹಡಗಿಗೆ ನುಗ್ಗಿದನು. ಡೆನ್ಮಾರ್ಕಿನ ಹಡಗಿನವರು ಸೋತು, ಓಡಿಹೋದರು.

ಕಡಲುಗಳ್ಳರಿಗೆ ಹ್ಯಾಂಲೆಟ್ಟನಲ್ಲಿ ಗೌರವ ಹುಟ್ಟಿತು. ಮುಂದಕ್ಕೆ ತಮಗೆ ಅವನಿಂದ ಅನುಕೂಲವಾಗುವ ಸಂಭವವುಂಟು ಎಂದು ಅವನನ್ನು ಅವರು ಬಹಳ ಮರ್ಯಾದೆಯಿಂದ ಕಂಡುಕೊಂಡಿದ್ದು ಕರೆತಂದು ಅವನ ರಾಜ್ಯದಲ್ಲಿ ಬಿಟ್ಟರು.

ಯುವರಾಜನು ಅರಮನೆಗೆ ಬರುವ ವೇಳೆಗೆ ಅಲ್ಲಿ ಇನ್ನೂ ಒಂದು ಅನರ್ಥವು ನಡೆದು ಹೋಗಿತ್ತು. ಅವನ ಪ್ರಾಣಪ್ರಿಯೆಯಾಗಿದ್ದ ಆ ದಿವ್ಯಸುಂದರಿ ಒಫೇಲಿಯಳು ದುರ್ಮರಣಕ್ಕೆ ಗುರಿಯಾಗಿದ್ದಳು. ತನ್ನ ತಂದೆಯು ತನ್ನನ್ನು ಅತಿಶಯವಾಗಿ ಪ್ರೀತಿಸಿ ಮದುವೆಮಾಡಿಕೊಳ್ಳುವುದಕ್ಕೆ ಸಿದ್ಧನಾಗಿದ್ದವನ ಕೈಯಿಂದಲೇ ಹತನಾದುದು ಅವಳ ಮನಸ್ಸಿಗೆ ಬಹುವ್ಯಥೆಯನ್ನು ಉಂಟುಮಾಡಿತು. ಅದೇ ಕಾರಣವಾಗಿ ಅವಳಿಗೆ ಹುಚ್ಚೂ ಹಿಡಿದುಹೋಯಿತು. ಪ್ರೇಮಗೀತ ಮರಣಗೀತಗಳನ್ನು ಹಾಡಿಕೊಳ್ಳುತ್ತ ದಾರಿಯಲ್ಲಿ ತನಗೆ ಸಿಕ್ಕಿದವರಿಗೆಲ್ಲ ಹೂವು ಕೊಟ್ಟು ಇದನ್ನು ನಮ್ಮ ತಂದೆಯ ಸಮಾಧಿಗೆ ಅರ್ಚನೆ ಮಾಡಿ ಎಂದು ಹೇಳುತ್ತ ಅರ್ಥವಿಲ್ಲದ ಮಾತುಗಳನ್ನಾಡಿಕೊಳ್ಳುತ್ತ ತಿರುಗುತ್ತಿದ್ದಳು. ಒಂದು ದಿನ ಎಲ್ಲೆಲ್ಲಿಂದಲೋ ಕೊಯ್ದು ತಂದ ಹೂಗಳನ್ನು ಸೊಪ್ಪುಸೆದೆಗಳನ್ನು ಕಟ್ಟಿ ಹಾರಮಾಡಿದಳು. ಆ ಹಾರವನ್ನು ಒಂದು ಹಳ್ಳದ ಮಗ್ಗುಲಲ್ಲಿ ಬೆಳೆದಿದ್ದ ಒಂದು ವಿಲ್ಲೊ ಮರಕ್ಕೆ (ವಿಲ್ಲೊ ಎಂಬುದು ಒಂದು ಜಾತಿ) ತಗುಲಿ ಹಾಕಬೇಕೆಂದು ಹತ್ತಿದಳಂತೆ. ಇವಳು ಹತ್ತಿನಿಂತಿದ್ದ ಸಣ್ಣಕೊಂಬೆಯು ಇವಳ ಭಾರವನ್ನು ತಡೆಯಲಾರದೆ ಮುರಿದುಬಿತ್ತು. ಅದರೊಡನೆ ಇವಳೂ ಕೆಳಗಿನ ಹಳ್ಳದಲ್ಲಿ ಬಿದ್ದು ನೀರಲ್ಲಿ ಮುಳುಗಿ ಸತ್ತುಹೋದಳು ನೀರಲ್ಲಿ ಬಿದ್ದಕೂಡಲೇ ಮೇಲಕ್ಕೆ ಬಂದರೂ ಅವಳು ಅಲ್ಲಿಂದ ಹೊರಕ್ಕೆ ಬರುವ ಪ್ರಯತ್ನವನ್ನೇ ಮಾಡದೆ ಅಲ್ಲಿಯೇ ಹಾಡು ಹೇಳುವುದಕ್ಕೆ ಆರಂಭಿಸಿದಳಂತೆ! ಆಗ ಅವಳ ಬಟ್ಟೆಗಳೆಲ್ಲ ನೀರು ಕುಡಿದು ಭಾರವಾಗಿ ಅವಳನ್ನು ಮುಳುಗಿಸಿದುವಂತೆ! ಹ್ಯಾಂಲೆಟ್ಟನು ಬರುವ ವೇಳೆಗೆ ಅವಳ ಶವವನ್ನು ಸಮಾಧಿಮಾಡುವುದಕ್ಕೆ



ಲಯರ್ಟೆಸ್ಸನೂ ಹ್ಯಾಂಲೆಟ್ಟನೂ ಖಡ್ಗಯುದ್ಧ ಮಾಡುತ್ತಿರುವಾಗ ರಾಣಿಯು ವಿಷಹಾಕಿದ್ದ ಪಾನಕವನ್ನು ಕುಡಿದು ಮೃತಳಾದಳು.

ಎಲ್ಲವೂ ಸಿದ್ಧವಾಗಿದೆ. ಅವಳ ಅಣ್ಣ ಲಯರ್ಟಿಸ್‌ನು ತಂಗಿಯ ದೇಹವನ್ನು ಗೋರಿಯಲ್ಲಿಡುವುದಕ್ಕೆ ನಿಂತಿದ್ದಾನೆ.

ಹ್ಯಾಂಲೆಟ್ಟನಿಗೆ ಅದೊಂದೂ ಅರ್ಥವಾಗಲಿಲ್ಲ ತಾನೇಕೆ ಆ ವಿಷಾದ ಸಮಯದಲ್ಲ ಕಾಣಿಸಿಕೊಳ್ಳುವುದು ಎಂದು ದೂರದಲ್ಲಿಯೇ ನಿಂತಿದ್ದನು. ರಾಣಿಯು ಬಂದು "ಹೂವಿನಂತಿದ್ದವಳು ನೀನು ನಿನಗೆ ಇದೋ ಹೂಗಳು. ನೀನು ನನಗೆ ಸೊಸೆಯಾಗುವೆ, ನಿನ್ನ ಮಲಗುವ ಮಂಚವನ್ನು ಆಸ್ಥೆಯಿಂದ ಅಲಂಕರಿಸುವೆನೆಂದು ಕೊಂಡಿದ್ದೆ. ಈಗ ನಿನ್ನ ಸಮಾಧಿಯ ಹಳ್ಳಕ್ಕೆ ಹೂವು ಹಾಸುವ ಯೋಗವಿತ್ತು" ಎಂದು ಕಂಬನಿಗರೆಯುತ್ತಾ ಹೂಗಳನ್ನು ಹಳ್ಳಕ್ಕೆ ಹಾಕಿದಳು. ಆ ವೇಳೆಗೆ ಅವಳ ಅಣ್ಣನು ಬಂದು "ತಂಗಿ! ನಿನ್ನ ಸಮಾಧಿಯ ಮೇಲೆ ವಯ್ ಲೆಟ್ (ಒಂದು ಸುವಾಸನೆಯ ಹೂ)ಗಳು ಬೆಳೆಯಲಿ ಎಂದು ಹೇಳುತ್ತಾ ಇದ್ದ ಒಬ್ಬ ತಂಗಿಯನ್ನು ಕಳೆದುಕೊಂಡ ದುಃಖದಲ್ಲಿ ದಿಕ್ಕುತೋರದೆ ಬುದ್ಧಿಗೆಟ್ಟು ತಾನೂ ಅವಳ ದೇಹದೊಡನೆ ಮಲಗಿಬಿಡುವೆನು. ನನಗೂ ಸಮಾಧಿಯಾಗಲಿ ಎಂದು ಗೋರಿಯೊಳಕ್ಕೆ ಇಳಿದು ಬಿಟ್ಟನು. ಅದುವರೆಗೂ ಎಲ್ಲವನ್ನು ಸಹಿಸಿಕೊಂಡಿದ್ದ ಹ್ಯಾಂಲೆಟ್ಟನಿಗೆ ಆ ಹಿಂದಿನ ಪ್ರೇಮವೆಲ್ಲ ಮರುಕೊಳಿಸಿ, ಲಯರ್ಟಿಸ್ಸನಿಗಿಂತಲೂ ಹುಚ್ಚನಾಗಿ ಅವನೂ ಸಮಾಧಿಗೆ ಧುಮುಕಿದನು.

ಅಲ್ಲಿದ್ದ ಲಯಾರ್ಟಿಸ್ಸನಿಗೆ ಇವನು ಹ್ಯಾಂಲೆಟ್ಟ ಎಂದು ಗೊತ್ತಾದ ಕೂಡಲೇ "ನೀಚ! ನಮ್ಮ ತಂದೆಯನ್ನು ಕೊಂದೆ! ನನ್ನ ತಂಗಿಯನ್ನು ಬಲಿಗೊಂಡೆ!" ಎಂದು ಕನಲಿ ಅವನ ಕತ್ತು ಹಿಡಿದು ಹಿಸುಕಿಬಿಟ್ಟನು. ಅಷ್ಟರಲ್ಲಿ ಅಲ್ಲಿದ್ದವರು ಅವರಿವರು ಬಂದು ಬಿಡಿಸಿಕೊಂಡರು ಇಬ್ಬರನ್ನು ಸಮಾಧಾನಮಾಡಿದರು

ದೊರೆಯು ಇದನ್ನು ತಿಳಿದು ಹ್ಯಾಂಲೆಟ್ಟನನ್ನು ಮುಗಿಸುವ ಉಪಾಯವಿದೆ ಇಲ್ಲಿ ಎಂದು ಯೋಚಿಸಿದನು ಲಯರ್ಟಿಸ್ಸನ್ನು ರೇಗಿಸಿ, ನೀನು ಹೋಗಿ ವಿನೋದಕ್ಕಾಗಿ ಕಾಳಗಕ್ಕೆ ಕರೆದಂತೆ ಹ್ಯಾಂಲೆಟ್ಟನನ್ನು ಕಾಳಗಕ್ಕೆ ಕರೆ, " ಎಂದು ಹೇಳಿಕೊಟ್ಟನು. ಹ್ಯಾಂಲೆಟ್ಟನೂ ಒಪ್ಪಿಕೊಂಡನು. ಗೊತ್ತಾದ ದಿನ ದೊರೆಯು ಲಯರ್ಟಿಸ್ಸನಿಗೆ ವಿಷವನ್ನು ಸವರಿರುವ ಖಡ್ಗವೊಂದನ್ನು ಕೊಟ್ಟು " ಈ ಆಯುಧದಿಂದ ನೀನು ಹ್ಯಾಂಲೆಟ್ಟನನ್ನು ತೀರಿಸಿಬಿಡು ನಿನ್ನ ತಂದೆಯನ್ನು ಕೊಂದು ನಿನ್ನ ತಂಗಿಯ ಸಾವಿಗೆ ಕಾರಣನಾದ ಆ ಪಾಪಿಯು ಈ ದಿನ ತೀರಿಹೋಗಲಿ" ಎಂದು ಹೇಳಿಕೊಟ್ಟನು

ಹ್ಯಾಂಲೆಟ್ಟನು ಲಯರ್ಟಿಸ್ಸನ ಮೇಲೆ ಯಾವ ಸಂಶಯವನ್ನೂ ಇಟ್ಟುಕೊಂಡಿರಲಿಲ್ಲವಾಗಿ ಅವನು ಕೃತ್ರಿಮ ಯುದ್ಧದ ನಿಯಮದಂತೆ ಹರಿತವಿಲ್ಲದ ಮೊಂಡುಕತ್ತಿಯನ್ನು ತಂದಿದ್ದನು. ಇಬ್ಬರೂ ವಿನೋದಕ್ಕಾಗಿ ಹೋರಾಡುತ್ತ ಇರುವಾಗ, ಲಯರ್ಟಿಸ್ಸನು

ಮೊದಮೊದಲು ಸೋತವನಂತೆ ನಟಿಸುತ್ತಲಿದ್ದನು ಈ ವಿನೋದ ಯುದ್ಧವನ್ನು ನೋಡುವುದಕ್ಕೆಂದು ಬಂದಿದ್ದ ಅರಸನೂ ಅರಸಿತಿಯೂ ಹ್ಯಾಂಲೆಟ್ಟನಿಗೆ ಗೆಲುವಾಗುತ್ತಿರುವುದನ್ನು ನೋಡಿ ಬಹಳ ಸಂತೋಷಪಟ್ಟವರಂತೆ ನಟಿಸಿದರು. ದೊರೆಯು ಇನ್ನೂ ಒಂದು ಹಜ್ಜೆ ಮುಂದಿಟ್ಟು "ಹ್ಯಾಂಲೆಟ್ಟನಿಗೆ ಜಯವಾಗಲಿ" ಎಂದು ಕುಡಿಯುತ್ತ "ಹ್ಯಾಂಲೆಟ್ಟನು ಗೆಲ್ಲುತ್ತಾನೆ" ಎಂದು ಕೈಕಟ್ಟುತ್ತಾ ಕುಣಿದಾಡಿದನು.

ಈ ನಡುವೆ ಲಯರ್ಟೀಸ್ಸನು ತನ್ನ ಹರಿತವಾದ ಆಯುಧದಿಂದ ಕೊಟ್ಟ ತಿವಿತವು ಹ್ಯಾಂಲೆಟ್ಟನಿಗೆ ಮರ್ಮಚ್ಛೇದಿಯಾಯಿತು. ಅದರಿಂದ ರೇಗಿದ ಅವನು ಮೇಲೆ ಬಿದ್ದು ಇವನ ಆಯುಧವನ್ನೂ ಕಿತ್ತುಕೊಂಡು ಅದರಿಂದ ಅವನನ್ನೇ ತಿವಿದನು. ಅವನಿಗೆ ತೀವ್ರವಾಗಿ ಅಪಾಯಕರವಾದ ಘಾಯವಾಯಿತು

ಆ ದುಷ್ಟದೊರೆಯು ಹ್ಯಾಂಲೆಟ್ಟನೇನಾದರೂ ಗೆದ್ದು ಉಳಿದು ಬಂದರೆ ಇರಲಿ ಎಂದು ಕುಡಿಯುವ ಪಾನಕಕ್ಕೆ ವಿಷವನ್ನು ಹಾಕಿಸಿ ಇಟ್ಟಿದ್ದನು ರಾಣಿಯು ಅದನ್ನು ಕುಡಿದುಬಿಟ್ಟಳು. ಅದರಿಂದ ಅವಳಿಗೆ ಕಷ್ಟವಾಗಿ 'ಅಯ್ಯೋ ! ವಿಷ ! ವಿಷ !" ಎಂದು ಕೂಗಿಕೊಂಡಳು. ಕೂಗುತ್ತಿದ್ದ ಹಾಗೆಯೇ ಅವಳ ಜೀವವು ದೇಹವನ್ನು ಬಿಟ್ಟಿತು.

ಏನೋ ಮೋಸವಿದೆಯೆಂದು ಹ್ಯಾಂಲೆಟ್ಟನು ಬಾಗಿಲುಗಳನ್ನೆಲ್ಲ ಮುಚ್ಚಿಸಿದನು. ಲಯರ್ಟೀಸ್ಸನು ತಾನು ಸಾಯುವ ಕಾಲಬಂದಿತೆಂದು ಕಂಡು ತನ್ನ ತಪ್ಪನ್ನೂ ಮೋಸವನ್ನೂ ತಾನು ಮೋಸ ಹೋದುದನ್ನು ಹೇಳಿಬಿಟ್ಟನು. "ಹ್ಯಾಂಲೆಟ್ ! ಎಚ್ಚರಿಕೆ ನನ್ನ ಕತ್ತಿಗೆ ವಿಷವನ್ನು ಪರಿಹಾರ ಮಾಡುವ ಔಷಧವೇ ಇಲ್ಲ. ಈ ಮೋಸವನ್ನು ಮಾಡು ಎಂದು ನನಗೆ ಹೇಳಿದವನು ದೊರೆ ಎಂದು ಹೇಳಿ ಪ್ರಾಣಬಿಟ್ಟನು. ಹ್ಯಾಂಲೆಟ್ಟನಿಗೂ ತನಗೂ ಕೊನೆಯ ಕಾಲವು ಬಂದಿದೆಯೆಂದು ಗೊತ್ತಾಯಿತು. ಕತ್ತಿಯನ್ನು ನೋಡಿ ಅದರ ಕೊನೆಯಲ್ಲಿ ಇನ್ನೂ ಅಷ್ಟು ವಿರುವುದನ್ನು ಕಂಡು ತಟ್ಟನೆ ಮೇಲೆ ಬಿದ್ದು ಆ ದುಷ್ಟನನ್ನೂ ಸಂಹರಿಸಿದನು

ಹ್ಯಾಂಲೆಟ್ಟನ ದ್ವೇಷವು ತೀರಿತು: ಅವನು ತಂದೆಗೆ ಕೊಟ್ಟಿದ್ದ ವಾಗ್ದಾನವು ನೆರವೇರಿತು. ಆದರೇನು ಹ್ಯಾಂಲೆಟ್ಟನಿಗೆ ವಿಷವು ಏರುತ್ತ ಬಂದಿತು ಆಗ ಸಮೀಪದಲ್ಲಿದ್ದ ತನ್ನ ಸ್ನೇಹಿತ ಹೊರೇಷಿಯೊನನ್ನು ಕರೆದು "ಮಿತ್ರ ! ನನ್ನ ಕಥೆಯನ್ನು ಲೋಕಕ್ಕೆಲ್ಲ ತಿಳಿಸು" ಎಂದು ಹೇಳಿ ಪ್ರಾಣಬಿಟ್ಟನು ತಾನು ಸಾಯಬೇಕೆಂದಿದ್ದ ಹೊರೇಷಿಯೋನು ಹ್ಯಾಂಲೆಟ್ಟನಿಗೆ ಮಾಡಿದ್ದ ವಾಗ್ದಾನವನ್ನು ನೆರವೇರಿಸಲೆಂದು ಬದುಕಿದ್ದು, ಅದನ್ನು ಉಳಿಸಿಕೊಂಡನು.

---

# ಕಿಂಗ್ ಲಿಯರ್.

ಬ್ರಿಟನ್ನಿನ ಅರಸನಾದ ಲಿಯರ್‌ನಿಗೆ ಗಾನರಿಲ್, ರೀಗನ್, ಕಾರ್ಡಿಲಿಯ ಎಂದು ಮೂವರು ಹೆಣ್ಣುಮಕ್ಕಳು. ಮೊದಲಿನ ಇಬ್ಬರಿಗೆ ಮದುವೆಯಾಗಿತ್ತು. ಮೂರನೆಯವಳಿಗೆ ಇನ್ನೂ ಆಗಿರಲಿಲ್ಲ. ಫ್ರಾನ್ಸಿನ ಅರಸನೂ ಬರ್ಗಂಡಿಯ ಪಾಳೆಯಗಾರನೂ ಇಬ್ಬರೂ ಅವಳ ಕೈಹಿಡಿಯಬೇಕೆದು ಆಶೆಯುಳ್ಳವರಾಗಿದ್ದರು.

ಲಿಯರ್ ದೊರೆಗೆ ವಯಸ್ಸು ಹೆಚ್ಚಾಗಿ ರಾಜ್ಯಭಾರವನ್ನು ವಹಿಸುವುದು ಕಷ್ಟವಾಯಿತು. ಅದರಿಂದ ತನ್ನ ರಾಜ್ಯವನ್ನು ಮಕ್ಕಳಿಗೆ ಹಂಚಿಕೊಟ್ಟು ಹೆಸರಿಗೆ ಮಾತ್ರ ತಾನು ದೊರೆಯಾಗಿರಬೇಕು ಎಂದುಕೊಂಡನು ಈ ಉದ್ದೇಶದಿಂದ ಒಂದು ದಿನ ಮೂವರು ಹೆಣ್ಣುಮಕ್ಕಳನ್ನು ತನ್ನ ಸಭೆಗೆ ಕರೆಯಿಸಿಕೊಂಡನು. ದೊರೆಗೆ ತನ್ನ ಮೇಲೆ ಹೆಚ್ಚು ಪ್ರೀತಿಯಿಟ್ಟುಕೊಂಡಿರುವ ಮಗಳಿಗೆ ಹೆಚ್ಚು ರಾಜ್ಯವನ್ನು ಕೊಡಬೇಕೆಂಬ ಹುಚ್ಚು ಅದರಿಂದ ತನ್ನ ಮೇಲೆ ಅವರಿಗೆ ಎಷ್ಟು ಪ್ರೀತಿಯೆಂಬುದನ್ನು ಅವರ ಬಾಯಿಂದಲೇ ಕೇಳಬೇಕೆಂದುಕೊಂಡು, ಆ ಮಕ್ಕಳನ್ನೇ ಕೇಳಿದನು ಮೊದಲನೆಯವಳು ಬಹಳ ಥಳುಕಿನವಳು. ಅವಳು "ತಂದೆಯೇ! ನಿನ್ನ ಮೇಲೆ ನನಗಿರುವ ಪ್ರೀತಿಯನ್ನು ನನ್ನ ಬಾಯಿಂದ ಹೇಳಲಾರೆ. ನಿನಗೋಸ್ಕರವಾಗಿ ಬೇಕಾದರೆ ನನ್ನ ಕಣ್ಣು, ನನ್ನ ಮನೆ ನನ್ನ ಬಾಗಿಲು, ಅಷ್ಟೇನು ನನ್ನ ಜೀವವನ್ನೇ ಬೇಕಾದರೂ ಕೊಟ್ಟುಬಿಡುವೆನು" ಎಂದಳು. ಅದನ್ನು ಕೇಳಿ ಅರಸನಿಗೆ ಬಹುಸಂತೋಷವಾಯಿತು ತನ್ನ ರಾಜ್ಯದಲ್ಲಿ ಫಲವತ್ತಾಗಿ ಸಮೃದ್ಧವಾಗಿ ಕಾಡು, ಹೊಲ, ತೋಟ, ಹಳ್ಳಿಗಳಿಂದಲೂ ಕೆರೆಕಟ್ಟೆ ಹೊಳೆ ಕಾಲುವೆಗಳಿಂದಲೂ ಮೆರೆಯುತ್ತಿದ್ದ ಒದು ಭಾಗವನ್ನು ಅವಳಿಗೂ ಅವಳ ಗಂಡನಿಗೂ ಬಳುವಳಿಯಾಗಿ ಕೊಟ್ಟನು

ಅನಂತರ ಎರಡನೆಯವಳ ಸರದಿಯು ಬಂತು ತನ್ನ ಅಕ್ಕನ ಮಾತಿಗೆ ತಂದೆಯು ಮರುಳಾದುದನ್ನು ಕಂಡವಳು ಅವಳು. ಕೇಳಬೇಕೆ? ಅವಳೂ ಚಕ್ಕಂದವಾಗಿ" ತಂದೆಯೇ ನಾನು ಹೇಳಬೇಕೆಂದಿದ್ದುದನ್ನು ನಮ್ಮ ಅಕ್ಕನೇ ಹೇಳಿಬಿಟ್ಟಳು. ಆದರೂ ನನ್ನ ಮನಸ್ಸಿನಲ್ಲಿರುವದರಲ್ಲಿ ಅವಳು ಪೂರೈಸಲಿಲ್ಲ ನನಗೆ ತಾವೊಬ್ಬರಿದ್ದರೆ ಸಾಕು" ಎಂದಳು ದೊರೆಗೆ ಅವಳ ಮಾತೂ ಒಪ್ಪಿತು. ಅವಳಿಗೂ ಅವಳ ಅಕ್ಕನಿಗೆ ಕೊಟ್ಟಂತೆ ಒಂದು ಸಮೃದ್ಧವಾದ ಭಾಗವನ್ನು ಕೊಟ್ಟನು.

ಮೂರನೆಯುವಳಾದ ಕಾರ್ಡಿಲಿಯಾ ಸರದಿಯೂ ಬಂತು. ಅವಳಿಗೇ ತಂದೆಯ ಮೇಲೆ ದಿಟವಾದ ಪ್ರೇಮವಿದ್ದುದು. ಗಾನ್ರಿಲ್, ರೀಗನ್ ಇಬ್ಬರೂ ತಂದೆಗೆ ಸುಳ್ಳು ಹೇಳಿದ್ದರು. ಆ ಮುದಿದೊರೆಯು ಅವರಿಬ್ಬರೂ ನಿಜ ಹೇಳಿದರೆಂದು ನಂಬಿ ಮೋಸ ಹೋದನು. ಇದಿಷ್ಟೂ ಕಿರಿಯುವಳಿಗೆ ಗೊತ್ತು. "ಅವರಂತೆ ನಾನೂ ತಂದೆಗೆ ಮೋಸ ಮಾಡಬಾರದು. ಮನಸ್ಸಿನಲ್ಲಿ ಪ್ರೇಮವಿದ್ದರೆ ಬಾಯಲ್ಲಿ ಹೇಳುವುದೆಂತು? ಅದರಿಂದ ನಾನು ಸುಮ್ಮನಿರಬೇಕು" ಎಂದುಕೊಂಡಳು. ತಂದೆಯು ಕಿರಿಯ ಮಗಳೆಂಬ ವಿಶ್ವಾಸದಿಂದ "ಮಗಳೇ! ಇಗೋ ಆ ಇಬ್ಬರು ಮಕ್ಕಳಿಗೆ ಕೊಟ್ಟಿರುವುದಕ್ಕಿಂತಲೂ ಉತ್ತಮವಾದ ಭಾಗವನ್ನು ನಿನಗಾಗಿ ಇಟ್ಟಿರುವೆನು ಇದನ್ನು ಪಡೆದುಕೊಳ್ಳಲು ನೀನು ಏನೆನ್ನು ಹೇಳುವೆ?" ಎಂದು ಕೇಳಿದನು. ಅವಳು ಗಂಭೀರವಾಗಿ "ನಾನು ಏನೂ ಹೇಳುವುದಿಲ್ಲ" ಎಂದಳು

ದೊರೆಗೆ ಆಶ್ಚರ್ಯವಾಯಿತು. "ನೀನು ಏನೂ ಹೇಳದಿದ್ದರೆ ನಿನಗೆ ಏನೂ ಇಲ್ಲದೆ ಹೋದೀತು" ಎಂದು ಹೆದರಿಸಿದನು. ಅವಳು "ತಂದೆಯೇ! ನನ್ನ ಹೃದಯ ದಲ್ಲಿ ತುಂಬಿರುವುದನ್ನು ಬಾಯಲ್ಲಿ ಆಡಿತೋರಿಸುವುದು ಎಂತು? ನೀನು ತಂದೆ, ನಾನು ಮಗಳು. ತಂದೆ ಮಕ್ಕಳಲ್ಲಿ ಎಷ್ಟು ಪ್ರೇಮವಿರಬೇಕೋ ಅಷ್ಟೂ ನನ್ನಲ್ಲಿದೆ. ಇಷ್ಟು ಹೆಚ್ಚಿಲ್ಲ ಇಷ್ಟು ಕಡಿಮೆಯಿಲ್ಲ" ಎಂದಳು. ತಂದೆಯು ಮತ್ತೆಯೂ ಎಚ್ಚರಿಕೆ ಕೊಟ್ಟನು. ಆದರೂ ಅವಳು "ತಂದೆಯೇ! ಹೆತ್ತು, ಸಾಕಿ, ಸಲಹಿದ ನಿನ್ನ ಮೇಲೆ ನನಗೆ ಪ್ರೀತಿ ವಿಶ್ವಾಸ ಗೌರವಗಳೆಲ್ಲ ಇವೆ. ಆದರೆ ನಮ್ಮ ಅಕ್ಕಂದಿರಂತೆ ನಾನು ನಿನ್ನಲ್ಲಿ ಇಲ್ಲದುದನ್ನೆಲ್ಲ ಹೇಳಲಾರೆ. ನಾನು ಅವರಂತೆ ನಿನ್ನನ್ನೇ ಸಂಪೂರ್ಣವಾಗಿ ಪ್ರೀತಿಸಿದರೆ, ಹೇಗೆ? ನಾನು ಮದುವೆಯಾಗಿ ಗಂಡನೊಡನೆ ಬಾಳುವುದೆಂತು? ನನ್ನ ಹೃದಯದಲ್ಲಿ ನಿನಗಿರುವಂತೆ ಆತನಿಗೂ ಒಂದು ಭಾಗವಿರಬೇಕಲ್ಲವೆ?" ಎಂದಳು ದೊರೆಗೆ ಅವಳ ಮಾತನ್ನು ಕೇಳಿ ಅಸಮಾಧಾನವಾಯಿತು. "ಇವಳ ಜಂಬವನ್ನು ನೋಡಿದೆಯಾ?" ಎನ್ನಿಸಿತು. ಕೂಡಲೇ ಕೋಪವೂ ಬಂತು ಅರಸನಾಗಿ ರಾಜ್ಯವಾಳಿದವನು ವಯಸ್ಸಾದ ಮುದುಕ, ಜೊತೆಗೆ ತನ್ನ ಪ್ರಾಣಕ್ಕೆ ಪ್ರಾಣವೆಂದುಕೊಂಡಿದ್ದ ಮಗಳು ಹೀಗೆ ಮಾಡಿ ತನಗೆ ಅವಮಾನ ಮಾಡಿದಳೆಂಬ ದುಃಖ, ಎಲ್ಲವೂ ಸೇರಿ ಅವಳಿಗೆ ಕೊಡಬೇಕೆಂದಿದ್ದ ರಾಜ್ಯವನ್ನು ಉಳಿದ ಹೆಣ್ಣು ಮಕ್ಕಳಿಗೇ ಕೊಟ್ಟುಬಿಟ್ಟನು. ರಾಜ್ಯವನ್ನು ಇಬ್ಬರು ಮಕ್ಕಳಿಗೂ ಹಂಚಿಕೊಟ್ಟು ತಾನು ಬದುಕಿರುವವರೆಗೂ ಹೆಸರಿಗೆ ದೊರೆಯಾಗಿರುವೆನೆಂದು ತಾನೂ ತನ್ನ ಪರಿವಾರದ ನೂರು ಜನ ಯೋದ್ಧರೂ ಒಂದೊಂದು ತಿಂಗಳು ಒಬ್ಬೊಬ್ಬ ಮಗಳ ಮನೆಯಲ್ಲಿರುವೆನೆಂದೂ ಗೊತ್ತುಮಾಡಿಕೊಂಡನು.

ದೊರೆಯು ಹೀಗೆ ಮಾಡಿದುದು ರಾಜನ ಆಪ್ತನಾದ ಕೆಂಟ್ ಪಾಳೆಯಗಾರನಿಗೆ ಸರಿಬೀಳಲಿಲ್ಲ. ಅವನು ರಾಜನಲ್ಲಿ ಬಹಳ ಭಕ್ತಿವಿಶ್ವಾಸಗಳನ್ನು ಇಟ್ಟುಕೊಂಡಿದ್ದವನು

ಜೊತೆಗೆ ಆ ರಾಜಪುತ್ರಿಯರಿಬ್ಬರೂ ಆಡಿದ ಮಾತುಗಳು ಶುದ್ಧ ಸುಳ್ಳು ಎಂಬುದನ್ನು ಸಂಪೂರ್ಣವಾಗಿ ಬಲ್ಲವನು. ಅವನಿಗೆ ದೊರೆಯು ಹುಚ್ಚು ಹುಚ್ಚಾಗಿ ರಾಜ್ಯವನ್ನು ಹಂಚಿದುದನ್ನು ಕಂಡು ಆಶ್ಚರ್ಯವಾಯಿತು ಕೂಡಲೇ ಅವನು "ದೊರೆಯೇ! ನನ್ನ ಅರಸನೆಂದು ನಿನ್ನನ್ನು ಓಲೈಸಿದ್ದೇನೆ. ನನ್ನ ತಂದೆಯನ್ನು ಪ್ರೀತಿಸಿದಂತೆ ಪ್ರೀತಿಸಿದ್ದೇನೆ. ನನ್ನ ಒಡೆಯನೆಂದು ಸೇವಿಸಿದ್ದೇನೆ." ಎಂದು ಹೇಳಲು ಹೊರಟನು ಲಿಯರಿಗೆ ಅವನು ಹೇಳುವುದು ಏನು ಎಂಬುದು ಗೊತ್ತು. ಅದರಿಂದ ಕೂಡಲೇ "ಇನ್ನು ಯಾರೂ ಮಾತನಾಡಕೂಡದು" ಎಂದನು ಆದರೆ ಕೆಂಟನ ರಾಜಭಕ್ತಿಯು ಅವನನ್ನು ಸುಮ್ಮನಿರಿಸದು ಮತ್ತೆ "ಪ್ರಭುವೆ! ಅಧಿಕಾರವು ಮುಖಸ್ತುತಿಗೆ ಸೋತಾಗ ಕರ್ತವ್ಯವು ಬಾಯಿ ಮುಚ್ಚಿಕೊಂಡಿರುವುದೆ? ಅಧಿಕಾರಿಗಳು ಅವಿವೇಕಕ್ಕೆ ಅವಕಾಶ ಕೊಟ್ಟಾಗ ಗೌರವವು ಸ್ಪಷ್ಟವಾಗಿ ನುಡಿಯುವುದು ದಯಮಾಡಿ ನಿನ್ನ ಅಪ್ಪಣೆಯನ್ನು ತಿರುಗಿಸು ದುಡುಕಬೇಡ. ನನ್ನ ಜೀವದಾಣೆ, ನಿನ್ನ ಕಿರಿಯ ಮಗಳ ಪ್ರೀತಿಯು ಅವರ ಪ್ರೀತಿಗಿಂತ ಕಡಿಮೆಯೆಂದುಕೊಳ್ಳಬೇಡ" ಎಂದು ಕೇಳಿಕೊಂಡನು.

ಲಿಯರನು ಒಪ್ಪಲಿಲ್ಲ. "ನೀನು ಉಳಿಯಬೇಕೆಂದಿದ್ದರೆ ಸುಮ್ಮನಿರು" ಎಂದು ಗದರಿಸಿದನು. ಅದಕ್ಕೆ ಒರಟು ಸ್ವಭಾವದ ಆ ಕೆಂಟನು "ಒಡೆಯಾ! ಈ ಜೀವವನ್ನು ನಿನಗಾಗಿ ಮೀಸಲು ಕಟ್ಟಿದ್ದೇನೆ. ನಿನ್ನ ಶತ್ರುಗಳನ್ನು ತುಳಿಯುವುದಕ್ಕೆ ಎಂದು ಮುಡಿಪು ಕಟ್ಟಿದ್ದೇನೆ. ನಿನ್ನ ಕ್ಷೇಮಕ್ಕಾಗಿ ಮಾತನಾಡಬೇಕಾಗಿದೆ. ಈಗ ಹೇಗೆ ಸುಮ್ಮನಿರಲಿ?" ಎಂದನು

ಅರಸನಿಗೆ ರೇಗಿಹೋಯಿತು. ಅಲ್ಲಿಂದ ಹೊರಟುಹೋಗೆಂದರೂ ಅವನು ಕೇಳಲಿಲ್ಲ. ದೊರೆಯ ಕೋಪವು ಮಿತಿಮೀರಿ ಅವನನ್ನು ಕಡಿದು ಹಾಕುವುದಕ್ಕೆ ಕತ್ತಿಯನ್ನೂ ಎಳೆಯುವಂತಾಯಿತು "ನಮ್ಮ ಪ್ರತಿಜ್ಞೆಯನ್ನು ಭಂಗಪಡಿಸಬೇಕೆಂದು ಯತ್ನಿಸಿದ ಅಪರಾಧಕ್ಕಾಗಿ, ನಮ್ಮ ಅಧಿಕಾರವನ್ನು ಪ್ರತಿಭಟಿಸಿದ ತಪ್ಪಿಗಾಗಿ, ನೀನು ನಮ್ಮ ರಾಜ್ಯವನ್ನು ಬಿಟ್ಟುಹೋಗತಕ್ಕದು ನಿನಗೆ ಐದು ದಿನಗಳ ಅವಧಿ ಆರನೆಯ ದಿನ ನೀನು ರಾಜ್ಯಭ್ರಷ್ಟನಾಗಬೇಕು. ಇಲ್ಲಿಂದ ಹತ್ತನೆಯ ದಿನದಿಂದ ಆಚೆಗೆ ನೀನು ಇಲ್ಲಿದ್ದರೆ ನಿನಗೆ ಕೂಡಲೇ ವಧೆಯಾಗುವುದು" ಎಂದು ಕಠೋರವಾಗಿ ಆಜ್ಞೆ ಮಾಡಿದನು, ಕೆಂಟನು ಬೇಸರಪಟ್ಟು ಹೊರಟುಹೋದನು

ಅನಂತರ ದೊರೆಯು ಫ್ರಾನ್ಸಿನ ದೊರೆಯನ್ನೂ ಬರ್ಗಂಡಿಯ ಪಾಳೆಯಗಾರನನ್ನೂ ಕರೆಸಿದನು. "ಇದೋ! ನಮ್ಮ ಮಗಳು ನಮ್ಮ ಪ್ರೇಮದಿಂದ ಅವಳನ್ನು ದೂರ ಮಾಡಿದ್ದೇವೆ ನಾವು ಅವಳಿಗೆ ಏನೂ ಕೊಡುವುದಿಲ್ಲ. ಅವಳಿಗೆ ನಾವು ಕೊಡುವುದು ನಮ್ಮ ಕೋಪಪೊಂದನ್ನೇ! ಬೇಕಾದವರು ಅವಳನ್ನು ಮಾಡಿಕೊಳ್ಳಿ" ಎಂದನು



ಕೆಂಟ್ :- ದೊರೆಯು ಹೀಗೆ ಅವಿವೇಕ ಮಾಡಬಹುದೇ?

ಬರ್ಗಂಡಿಯು ''ಪ್ರಭುವೆ! ಇಂತಹವಳನ್ನು ಮಾಡಿಕೊಳ್ಳುವಷ್ಟು ಹುಚ್ಚನು ನಾನಲ್ಲ'' ಎಂದನು.

ಫ್ರಾನ್ಸಿನ ದೊರೆಗೆ ಈ ವಿಚಿತ್ರವನ್ನು ಕಂಡು ಆಶ್ಚರ್ಯವಾಯಿತು. ''ಒಂದು ಗಳಿಗೆ ಮುಂಚೆ ತಂದೆಯ ಮೋಹದ ಮಗಳಾಗಿದ್ದವಳು ಈಗ ಹೀಗಾಗುವುದಕ್ಕೆ ಏನು ಅಪರಾಧ ಮಾಡಿದ್ದಾಳು? ಬೆಟ್ಟದಂತಹ ವಾತ್ಸಲ್ಯವು ಮಾಯವಾಗಲು ಕಾರಣವೇನು?'' ಎಂದು ಬೆರಗಾದನು.

ಕಾರ್ಡಿಲಿಯಳೂ ಕೂಡ ತಂದೆಯನ್ನು ಕುರಿತು ''ನಾನು ಬೆಣ್ಣೆಯಂತಹ ಮರುಳು ಮಾತುಗಳನ್ನು ಆಡಲಿಲ್ಲವೆಂದು ನನ್ನ ಮೇಲೆ ಕೋಪವೆ? ಅಥವಾ ನಾನು ದುಷ್ಕಾರ್ಯ, ಘಾತುಕತನ, ದ್ರೋಹ ಮೊದಲಾದುವುಗಳನ್ನು ಮಾಡಿದೆನೆಂದು ನನ್ನನ್ನು ತಳ್ಳುತ್ತಿರುವೆಯಾ? ಹೃದಯದ ಪ್ರೇಮವನ್ನು ಬಾಯಿಯು ಬುಡುಬುಡಿಕೆಯಂತೆ ನುಡಿಯಲಿಲ್ಲವೆಂದು ನನ್ನನ್ನು ನೂಕುವುದು ಸರಿಯೇ?'' ಎಂದು ಕೇಳಿದಳು

ಲಿಯರನಿಗೆ ಅದೂ ಸಹಿಸಲಿಲ್ಲ ''ನನ್ನನ್ನು ಮೆಚ್ಚಿಸುವಂತೆ ಮಾತನಾಡಲಾರದ ನೀನು ಹುಟ್ಟದೆಯೇ ಹೋಗಿದ್ದರೆ ಚೆನ್ನಾಗಿತ್ತು'' ಎಂದು ಆರ್ಭಟಿಸಿದನು.

ಫ್ರಾನ್ಸಿಗೆ ಅರ್ಥವಾಯಿತು. ಇದೇ ಇವಳ ಅಪರಾಧವೇ? ಎಂದುಕೊಂಡು ''ಕನ್ಯಾಮಣಿ! ನಿನಗೆ ಬಳುವಳಿಯಿಲ್ಲದಿದ್ದರೂ ನೀನು ಭಾಗ್ಯವಂತೆ. ಎಲ್ಲರೂ ನಿನ್ನನ್ನು ಬಿಟ್ಟದ್ದರೂ ನೀನು ಶ್ರೇಷ್ಠಳು. ಎಲೆ ಗುಣವತಿ! ನಿನ್ನ ಕೈಹಿಡಿಯುವ ಭಾಗ್ಯವು ನನ್ನದಾಗಲಿ. ನಿನ್ನಂಥವಳು ನನ್ನ ಮಡದಿಯಾದುದು ದೈವಾನುಗ್ರಹ ಬಾ! ನಮ್ಮ ರಾಜ್ಯದ ರಾಣಿಯಾಗು'' ಎಂದು ಅವಳನ್ನು ಅಂಗೀಕರಿಸಿ ಕರೆದುಕೊಂಡು ಹೋದನು

o o o o

ದೊರೆಯು ತನ್ನ ಪರಿವಾರದೊಡನೆ ಗಾನ್ರಿಲ್ಲಳ ಅರಮನೆಗೆ ಹೋದನು. ಅಲ್ಲಿ ಒಂದು ತಿಂಗಳು ಮುಗಿಯುವುದರೊಳಗಾಗಿ ಮಗಳಿಗೆ ಬೇಸರವಾಗಿ ಹೋಯಿತು. ಅಧಿಕಾರವನ್ನು ರಾಜ್ಯವನ್ನೂ ತಮಗೆ ಒಪ್ಪಿಸಿಬಿಟ್ಟು ಬಿಕಾರಿಯಾದ ರಾಜನನ್ನು ಮಗಳು ಬಿಕಾರಿಯಂತೆಯೇ ಕಂಡಳು ರಾಜನ ಕಡೆಯವರು ಎದ್ದುದೂ ಕುಳಿತುದೂ ಎಲ್ಲ ತಪ್ಪು ಎನ್ನುವಂತಾಯಿತು. ' ಛೇ! ಪ್ರತಿಯೊಂದಕ್ಕೂ ಬಾಯಿ ಹಾಕಿಕೊಂಡುಬರುವ ಈ ಮುದಿಗೊಡ್ಡೇನು?'' ಎಂದು ಗೊಣಗಿಕೊಳ್ಳುವಳು ಅವಳು. ಕೊನೆಗೆ ತಂದೆಯ ಕೈಯಲ್ಲಿ ಮಾತನ್ನೂ ಬಿಟ್ಟುಬಿಡಬೇಕೆಂದು ಗೊತ್ತುಮಾಡಿಕೊಂಡಳು. ಆಳುಗಳನ್ನು ಕರೆದು ''ಇನ್ನು ಮೇಲೆ ನೀವು ಯಾರೂ ನಮ್ಮ ತಂದೆಯು ಹೇಳಿದ ಕೆಲಸವನ್ನು ಮಾಡ

ಬೇಕಾಗಿಲ್ಲ. ಬೇಕಾಗಿದ್ದರೆ ಇಲ್ಲಿರಲಿ, ಬೇಡವಾದರೆ ಹೊರಟುಹೋಗಲಿ.'' ಎಂದು ಅಪ್ಪಣೆ ಮಾಡಿದಳು.

ಲಿಯರನು ಬೇಟೆಗೆಂದು ಹೋಗಿದ್ದವನು ಹಿಂತಿರುಗಿ ಬಂದನು. ಆ ವೇಳೆಗೆ ಸರಿಯಾಗಿ ಕೆಂಟನು ವೇಷಾಂತರ ಧರಿಸಿ ಬಂದು ಕಾಣಿಸಿಕೊಂಡನು. ದೊರೆಗೆ ಗುರುತು ಸಿಕ್ಕಲಿಲ್ಲ ಆದರೂ ಅವನನ್ನು ವಿಚಾರಿಸಿ ಸೇರಿಸಿಕೊಂಡನು. ಇವರು ಹೀಗೆ ಮಾತ ನಾಡುತ್ತಿರುವಾಗ ಗಾನರಿಲ್ಲಳ ಮನೆವಾರ್ತೆ (ಮನೆಯ ವಿಚಾರಗಳನ್ನು ನೋಡಿಕೊಳ್ಳು ವವ) ಆಸ'ವಾಲ್'ಡನು ಅತ್ತಕಡೆ ಬಂದವನು ಅರಸನನ್ನು ಎಂದಿನಂತೆ ಮರ್ಯಾದೆ ಯಾಗಿ ಮಾತನಾಡಿಸುವುದಕ್ಕೆ ಪ್ರತಿಯಾಗಿ ಏನೋ ನೆಪನಾಡಿಕೊಂಡು ಹೊರಟು ಹೋದನು. ಅರಸನು ಹೇಳಿಕಳುಹಿಸಿದರೂ ಬರಲಿಲ್ಲ ಅಷ್ಟೇ ಅಲ್ಲ ಏನೋ ಕೆಲ ಸವಿದೆಯೆ ದೂ ಹೇಳಿ ತಪ್ಪಿಸಿಕೊಂಡನು

ಆ ವೇಳೆಗಾಗಲೇ ಲಿಯರನಿಗೆ ತನ್ನ ಮಗಳೂ ಅವಳ ಪರಿವಾರದವರೂ ತನ್ನ ಮೇಲೆ ಉದಾಸೀನವಾಗಿರುವರು ಎಂದು ಅನುಮಾನ ಬಂದಿತ್ತು. ಅದಕ್ಕೆ ಪ್ರತ್ಯಕ್ಷ ವಾಗಿ ಒಂದು ಉದಾಹರಣೆಯೂ ಸಿಕ್ಕಿತು. ಅದರಿಂದ ಅರಸಿನ ಮನಸ್ಸಿಗೆ ಬಲು ನೋವಾಯಿತು. ಆ ಸ್ಥಿತಿಯಲ್ಲಿರುವಾಗ ಆಸ'ವಾಲ್'ಡನು ಬಂದನು ಅರಸನಿಗೆ ಬಂದಿದ್ದ ಕೋಪಕ್ಕೆ ಅವನು ಇನ್ನಷ್ಟು ಪುಟವಿಕ್ಕುವಂತೆ ಅಮರ್ಯಾದೆಯಾಗಿ ಮಾತ ನಾಡಿದನು ಕೆಂಟನಿಗೆ ಅದು ಸಹಿಸಲಿಲ್ಲ ''ಅರಸನ ಬಳಿ ಮಾತನಾಡುವಾಗ ಮರ್ಯಾದೆ ತಪ್ಪುವದು'' ಎಂದು ಅವನಿಗೆ 'ಲಾತು' ಹೊಡೆದು ಹೊರಕ್ಕೆ ತಳ್ಳಿಬಿಟ್ಟನು ಆ ವೇಳೆಗೆ ಲಿಯರಿನ ವಿದೂಷಕನೂ ಬಂದನು ಅವನೂ ಕೆಂಟನ ಹಾಗೆ ಅರಸಿನಲ್ಲಿ ಬಹಳ ಭಕ್ತಿಯುಳ್ಳವನು ಮತ್ತು ಅರಸನು ಹಿರಿಯ ಮಕ್ಕಳ ಸವಿಮಾತಿಗೆ ಮೋಸ ಹೋದನೆಂದು ಕೊರಗಿ ಆ ಸಂಕಟವನ್ನು ತಡೆಯದೆ ಎದುರೆದುರಿಗೇ ಆಡುತ್ತಿದ್ದವನು. ಜೊತೆಗೆ ವಿದೂಷಕನು ಏನು ಬೇಕಾದರೂ ಆಡಬಹುದೆಂದು ವಾಡಿಕೆಯುಷ್ಟೆ ! ಅದರಿಂದ ಇತರರು ಆಡುವುದಕ್ಕೆ ಹಿಂತೆಗೆಯುತ್ತಿದ್ದಂತಹ ಮಾತನ್ನೂ ಕೂಡ ಅವನು ಆಡುತ್ತಿದ್ದನು

ಅವನು ದೊರೆಯನ್ನು ''ಮಾವಾ'' ಎಂದು ಕೂಗುವನು ''ಮಾವಾ ! ಇನ್ನೇನು ಎಲ್ಲವೂ ಹೋಯಿತು. ಇದನ್ನಾದರೂ ಇಟ್ಟುಕೋ'' ಎಂದು ತನ್ನ ಟೋಪಿ ಯನ್ನು ಕೊಟ್ಟನು.

ಹೀಗೆ ಅರಸನು ಮಾತನಾಡುತ್ತಿರುವಾಗ ಗಾನರಿಲ್ಲಳು ಬಂದಳು ಬರುತ್ತಿದ್ದ ಹಾಗೆಯೇ ಮುಖದ ಗಂಟು ನೋಡುವುದಕ್ಕೆ ಅಸಾಧ್ಯವಾಗಿತ್ತು. ಅರಸನು ''ಏನಮ್ಮಾ ! ಈಚೆಗೆ ಮುಖದ ಗಂಟು ಬಲವಾಗುತ್ತಿದೆಯಲ್ಲ'' ಎಂದು ಕೇಳಿದನು ವಿದೂಷಕನು ''ಒಂದು ಕಾಲದಲ್ಲಿ ಅರಸನು ಯಾರ ಹುಬ್ಬುಗಂಟಿಗೂ ಹೆದರಬೇಕಾಗಿರ

ಲಿಲ್ಲ. ಆದರೆ ಪಾಪ ! ಈಗ ಕಾಳು ಸುಲಿದುಕೊಂಡ ಕಾಯಿನ ಸಿಪ್ಪೆಯಂತಾಗಿರುವಾಗ !" ಎಂದನು.

ಗಾರ್ರಿಲ್ಲಳು ಅದನ್ನೇ ಕಾರಣವಾಗಿ ಮಾಡಿಕೊಂಡು " ತಂದೆಯೇ ! ನೋಡಿದೆಯಾ ? ತಲೆಗೆ ತಟ್ಟೆಯಾಗಿ ಹರಟುವ ಈ ವಿದೂಷಕನೂ ನಿನ್ನ ಇತರ ಪರಿವಾರದ ಪುಂಡುಗಾರರೂ ಸೇರಿ ಹಗಲು ರಾತ್ರಿಯೆನ್ನದೆ ಅರಮನೆಯನ್ನು ಮೀನಿನ ಸಂತೆಯನ್ನು ಮಾಡಿರುವರು ಬಲ್ಲೆಯಾ ? ನಾನು ಇದೆಲ್ಲವನ್ನೂ ನಿನಗೆ ತಿಳಿಸಿ ಇದನ್ನು ತಪ್ಪಿಸಬೇಕೆಂದಿದ್ದೆ ಅಷ್ಟರೊಳಗೆ ಏನೋ ಅನಾಹುತವೇ ಆಗಿಹೋಗುವಂತಿದೆ ನೀನೂ ಕೂಡ ಈ ದುಷ್ಟರು ಮಾಡುವ ಕೆಲಸವನ್ನು ಒಪ್ಪಿಕೊಂಡಿರುವಂತಿದೆ. ಹೀಗಾದರೆ ನಾವು ಸುಮ್ಮನಿರುವುದೆಂತು ? " ಎಂದು ಗದರಿಸಿಕೊಂಡಳು

ವಿದೂಷಕನು, ತನ್ನ ಹೊಟ್ಟೆಯುರಿಯನ್ನು ತಾಳಿಕೊಳ್ಳಲಾರದೆ, ಅವಳು ತನ್ನನ್ನು ಚಾಟಿಯಿಂದ ಹೊಡೆಯಿಸುವಳು ಕೋಗಿಲೆ ಎಂಬುದನ್ನೂ ಗಮನಿಸದೆ, " ಮಾವಾ ಮಾವಾ ! ತಂದು ಸಾಕಿದ ತಪ್ಪಿಗೆ ತನ್ನನ್ನು ಕಾಗೆಯು ತಲೆಕತ್ತರಿಸಿ ಹಾಕಿತಂತೆ ! ಹಾಗಾಯಿತು " ಎಂದನು ಅರಸನು ಮಗಳ ಮಾತನ್ನು ನಂಬಲಾರದೆ ಹೋದನು. ಅವನಿಗೆ ಭ್ರಾಂತಿಯಾಯಿತು ಮಾತನಾಡುತ್ತಿರುವಳು ತನ್ನ ಮಗಳೇನೆ ? ಎಂದು ಸಂದೇಹವಾಯಿತು

ಮಗಳು ಇನ್ನೂ ರೇಗಿದಳು : " ಸಾಕು! ತಂದೆಯೇ! ನೀನು ಬಹಳ ಬದಲಾಯಿಸಿ ಹೋಗಿರುವೆ ದಯಪಿಟ್ಟು ನಾನು ಹೇಳುವಂತೆ ಕೇಳು. ನಿನಗೆ ವಯಸ್ಸಾಯಿತು. ವಯಸ್ಸಿಗ ಗೌರವ ತರುವಂತಹ ಕಾರ್ಯಗಳನ್ನೇ ನೀನು ಮಾಡಬೇಕು ಈ ನೂರು ಜನರ ಪರಿವಾರವೇಕೆ? ಅಲ್ಲದೆ ಅವರು ವಟಂಗರು. ಅಂಕೆ ಸಂಕೆಯಿಲ್ಲದವರು ನೀನೇನೆಂದು ಕೊಳ್ಳುವೆಯೋ ಎಂಬ ಯೋಚನೆಯಿಲ್ಲದಿದ್ದರೆ ಇವರನ್ನೆಲ್ಲ ಒಂದು ಗಳಿಗೆ ಇಲ್ಲಿ ಇಟ್ಟಿರುತ್ತಿರಲಿಲ್ಲ ಅದರಿಂದ ಇವರ ಸಂಖ್ಯೆಯನ್ನು ಆದಷ್ಟು ಕಡಿಮೆಮಾಡು" ಎಂದಳು

ಅರಸನಿಗೆ ರೇಗಿಹೋಯಿತು ಮನಸ್ವಿಯಾಗಿ ಅವಳನ್ನು ನಿಂದಿಸಿ "ನಿನ್ನ ಹೊಟ್ಟೆಯಲ್ಲಿ ಮಕ್ಕಳೇ ಆಗದೆ ನೀನು ಬಂಜೆಯಾಗಿಹೋಗು. ಒಂದು ವೇಳೆ ಆದರೂ ಅದೊಂದು ವಿಕಾರ ಜಂತುವಾಗಿ ನಿನ್ನ ಪಾಲಿನ ಶನಿಯಾಗಲಿ' ಎಂದು ನಾನಾ ವಿಧವಾಗಿ ನಿಂದಿಸಿ ಅಲ್ಲಿಂದ ಮತ್ತೊಬ್ಬ ಮಗಳ ಮನೆಗೆ ಹೊರಟುಬಿಟ್ಟನು

ಗಂಡನು ಅಡ್ಡ ಬರಲು ಆ ಮಾಯಗಾತಿಯು ತಡೆದು ಬಿಟ್ಟು "ನೂರು ಜನದ ಪರಿವಾರವಂತೆ ! ವಯಸ್ಸಾಗಿ ಆತನಿಗೆ ಅರಿವು ಮರುಳಾಗಿದೆ ಈ ಮರುಳುತನದಲ್ಲಿ




ಕೆಂಟ್ :—(ಆಸ್‌ವಾಲ್ಡನಿಗೆ) ನಾಯಿ ! ಇನ್ನು ಮೇಲಾದರೂ ದೊಡ್ಡವರಲ್ಲಿ
ಮರ್ಯಾದೆಯಾಗಿ ನಡೆ

ಮಾಡುವ ಅವಿವೇಕವನ್ನೆಲ್ಲ ಜೀರ್ಣಿಸಿಕೊಳ್ಳುವುದಕ್ಕೆ ಈ ಪರಿವಾರ. ಹೋಗಲಿ. ರೀಗ ನ್ನಳೂ ಅಲ್ಲಿ ಅವನನ್ನು ಸೇರಿಸಿದಂತೆ ಮಾಡುತ್ತೇನೆ. ನನ್ನ ಕೈ ತೋರಿಸುತ್ತೇನೆ'' ಎಂದು ನಡೆದುದು ನಡೆಯ ದಿದ್ದುದು ಎಲ್ಲವನ್ನು ಒಂದು ಕಾಗದದಲ್ಲಿ ಬರೆದು ತಂಗಿಗೆ ಕಳುಹಿಸಿದಳು.

ಲಿಯರನು ಇನ್ನೊಬ್ಬ ಮಗಳ ಅರಮನೆಗೆ ಬಂದು, ತಾನು ಬರುತ್ತಿರುವುದನ್ನು ಮಗಳಿಗೆ ತಿಳುಹಿಸಲು ಕೆಂಟನನ್ನು ಕಳುಹಿಸಿದನು. ಕೆಂಟನು ಅರಮನೆಯ ಬಾಗಿಲಿಗೆ ಬರುವ ವೇಳೆಗೆ ಗಾನೆರಿಲ್ಲನ ಪತ್ರವನ್ನು ತೆಗೆದುಕೊಂಡು ಆಸ್‌ವಾಲ್ಡನು ಬಂದನು. ತನ್ನ ಅರಸನಿಗೆ ಅಪಮಾನ ಮಾಡಿದ್ದನೆಂಬ ಕೋಪದಿಂದ ಕೆಂಟನು ಅವನನ್ನು ಹೀನಾ ಮಾನವಾಗಿ ಬಯ್ದು ಅವನ ಮೇಲೆ ಬಿದ್ದು ಹೊಡೆದನು ಆ ಗಲಭೆಯಿಂದ ಅರಮನೆ ಯವರೆಲ್ಲ ಹೊರಗೆ ಬಂದರು ಕೆಂಟನ ಗುರ್ತು ಯಾರಿಗೂ ತಿಳಿಯಲಿಲ್ಲ ಅವನೊಬ್ಬ ಯಾರೋ ಸಾಮಾನ್ಯ ದೂತನೆಂದುಕೊಂಡು, ಅವನನ್ನು ಕೊಳಕ್ಕೆ ಹಾಕಿಸಿಬಿಟ್ಟರು ಆ ವೇಳೆಗೆ ಅರಸನು ಅಲ್ಲಿಗೆ ಬಂದು ತನ್ನ ದೂತನಿಗೆ ಆಗಿರುವ ಅಪಮಾನವನ್ನು ಕಣ್ಣಾರೆ ಕಂಡನು ಅಷ್ಟು ಗಾತ್ರಿಗೆ ಆ ರೀಗನ್‌ಳು ಅಕ್ಕನ ಕಾಗದವನ್ನು ಓದಿದ್ದಳು ಅದರಿಂದ ಅವಳ ಮನಸ್ಸು ಬದಲಾಯಿಸಿ ಹೋಯಿತು ಅವಳೂ ಅವಳ ಗಂಡನೂ ದೊರೆಯನ್ನು ಕಂಡು ಎದುರುಗೊಳ್ಳುವುದಕ್ಕೆ ಬರಲಿಲ್ಲ.

ದೊರೆಯು ಎಷ್ಟೋ ಹೊತ್ತು ಕಾದಿದ್ದ ಮೇಲೆ ಮಗಳೂ ಅಳಿಯನು ಬಂದರು. ತಂದೆಯು ಹಿರಿಯ ಮಗಳು ತನಗೆ ಅಪಚಾರ ಮಾಡಿದಳೆಂದು ಕಿರಿಯ ಮಗಳಿಗೆ ಹೇಳಿ ಕೊಂಡನು. ಅವಳು '' ತಂದೆಯೇ ! ದೂರುವುದು ತರವಲ್ಲ ಅವಳು ಮಾಡಿದುದೇ ಸರಿ, ನಿನಗೆ ತಿಳಿಯದು.'' ಎಂದಳು. ದೊರೆಗೆ ಕೋಪಬಂತು ಆಗ ಮಗಳು '' ತಂದೆಯೇ ! ನಿನಗೆ ವಯಸ್ಸಾಯಿತು. ನೀನು ಸ್ವತಂತ್ರನಾಗಿರುವ ಕಾಲವಾಗಿ ಹೋಯಿತು. ನಿನಗಿಂತಲೂ ತಿಳಿದವರು ಹೇಳಿದ ಹಾಗೆ ಕೇಳಿಕೊಂಡಿರುವುದು ನಿನಗೆ ತಕ್ಕುದು. ಅದರಿಂದ ನೀನು ನಾನು ಹೇಳಿದ ಹಾಗೆ ಕೇಳು, ಅಲ್ಲಿಗೆ ಹೋಗಿ ನಾನು ಮಾಡಿದುದು ತಪ್ಪು ಎಂದು ಹೇಳಿ ಅಲ್ಲಿರು'' ಎಂದಳು.

ಆ ಮಾತನ್ನು ಕೇಳಿ ಲಿಯರನಿಗೆ ಹುಚ್ಚು ಹಿಡಿದಂತಾಯಿತು. ''ಅವಳ ಕಾಲಿಗೆ ಬಿದ್ದು ತಪ್ಪಾಯಿತು ಎನ್ನುವುದೇ? ಅದರ ಬದಲು ಇವಳ ಕಾಲೇ ಹಿಡಿದುಕೊಳ್ಳೋಣ'' ವೆಂದು ಅವಳ ಮುಂದೆ ಕಾಲೂರಿ ನಿಂತು '' ಮಗಳೇ ! ನಾನು ಮುದುಕ ! ವಯಸ್ಸಾ ಯಿತು ನಿಜ ! ನಾನು ನಿನ್ನನ್ನು ಕೇಳಿಕೊಳ್ಳುವನು ನನ್ನ ಹೊಟ್ಟೆ ಬಟ್ಟೆಗೆ ಕೊಟ್ಟು ಕೊಂಡು ನನ್ನನ್ನು ಕಾಪಾಡು'' ಎಂದು ಬೇಡಿಕೊಂಡನು

ಆ ದುಷ್ಟಳ ಮನಸ್ಸು ಕರಗಲಿಲ್ಲ. "ಈ ತಂತ್ರಗಳೆಲ್ಲ ಸಾಕು. ನೀನು ನಿನ್ನ ಹಿರಿಯ ಮಗಳ ಬಳಿಗೇ ಹೋಗು" ಎಂದುಬಿಟ್ಟಳು.

ಲಿಯರನು ಮತ್ತೆಯೂ ಪ್ರಾರ್ಥಿಸಿದನು. "ರೀಗನ್ ಹೇಗೆ ನಾನು ಹೋಗಲಿ. ಅವಳು ನನ್ನ ಪರಿವಾರದಲ್ಲಿ ಅರ್ಧವನ್ನು ಕಡಿಮೆ ಮಾಡೆನ್ನುವಳು. ನನ್ನ ಮೇಲೆ ಸಿಡಿ ಮಿಡಿಗುಟ್ಟುವಳು. ನನ್ನನ್ನು ನಿಂದಿಸುವಳು" ಎಂದು ಮುಂತಾಗಿ ಹೇಳಿಕೊಂಡರೂ ಅವಳು ಕೇಳಲಿಲ್ಲ. "ಈಗ ನೀನು ಅವಳನ್ನು ಶಪಿಸುತ್ತಿರುವಂತೆ ನನ್ನನ್ನು ಶಪಿಸುವೆ ಯಲ್ಲವೆ?" ಎನ್ನುತ್ತಿರುವಂತೆಯೇ ಅವಳ ಅಕ್ಕನೂ ಬಂದಳು

ತಂಗಿಯು ಅಕನ್ನನ್ನು ಬಹಳ ವಿಶ್ವಾಸದಿಂದ ಬರಮಾಡಿಕೊಂಡಳು. ಲಿಯರ ನಿಗೆ ಅದಷ್ಟರಿಂದಲೇ ಎಲ್ಲವೂ ವ್ಯಕ್ತವಾಗಿ ಹೋಯಿತು ಕೊನೆಗೆ ರೀಗನ್‌ಳು ಸ್ಪಷ್ಟ ವಾಗಿ "ತಂದೆಯೇ! ನೀನು ನಮ್ಮ ಅಕ್ಕನು ಕೇಳಿದಂತೆ ನಿನ್ನ ಅರ್ಧ ಪರಿವಾರದೊಡನೆ ಈಗ ಅವಳ ಜೊತೆಯಲ್ಲಿ ಹೋಗು. ಇನ್ನು ಯಾವಾಗಲಾದರೂ ಇಲ್ಲಿಗೆ ಬರುವೆಯಂತೆ! ಈಗ ನಾನು ಮನೆಯನ್ನು ಬಿಟ್ಟು ಎಲ್ಲಿಗೋ ಹೊರಡಬೇಕಾಗಿದೆ. ಈಗ ನೀನಿಲ್ಲಿರುವುದು ಸಾಧ್ಯವಿಲ್ಲ" ಎಂದುಬಿಟ್ಟಳು.

ತಿರುಗಿಯೂ ಲಿಯರನು "ನಾನು ಏನೂ ಕೊಡದಿರುವ ಆ ಫ್ರಾನ್ಸಿನ ಬಳಿ ಗಾದರೂ ಹೋದೇನು ಕಾಡುಗಳಲ್ಲಿಯಾದರೂ ಅಲೆದೇನು ಗಾನರಿಲ್ಲಳ ಮನೆಗೆ ಹೋಗು ವುದಿಲ್ಲ. ದೇಹದಲ್ಲಿ ಹುಟ್ಟಿದ ಹುಣ್ಣಿನಂತೆ ರೋಗದಂತೆ ನನಗೆ ದುಃಖವನ್ನು ಉಂಟು ಮಾಡಲು ಹುಟ್ಟಿದವಳು ಅವಳು" ಎಂದನು.

ಕೊನೆಗೆ ಅಕ್ಕತಂಗಿಯರಿಬ್ಬರೂ ಒಂದಾಗಿ "ನಿನಗೆ, ಐವತ್ತು ಜನರಿರಲಿ ಇಪ್ಪ ತ್ತೈದು ಜನರು ತಾನೇ ಯೇಕೆ ಬೇಕು? ನಿನಗೆ ಬೇಕಾದ ಕೆಲಸವನ್ನು ನಮ್ಮವರು ಯಾರೂ ಮಾಡುವುದಿಲ್ಲವೆ? ನಿನ್ನ ಅಪ್ಪಣೆಯನ್ನು ಮೀರದಂತೆ ನೋಡಿಕೊಳ್ಳಲು ನಾವಿ ರುವಾಗ ನಿನಗೆ ಹತ್ತು ಜನ ಐದು ಜನ ತಾನೇ ಏಕೆ?" ಎಂದುಬಿಟ್ಟರು.

ಲಿಯರನು ಅರಸಾಗಿ ಬಾಳಿದವನು. ಇನ್ನೊಬ್ಬರ ಮೇಲೆ ಅಧಿಕಾರ ನಡೆಸಿದವನು ಅವನು ಹಾಗೆ ಇನ್ನೊಬ್ಬರ ಕೈಯ ಮಗುವಾಗಿ ಬಾಳುವುದು ಸಾಧ್ಯವೆ? ಅಲ್ಲಿಂದ ಹೊರಟು ಬಿಟ್ಟನು. ಆ ದುರ್ಗದ ಹೊರಗೆ ಬಿರುಗಾಳಿ ಮಳೆಗಳು ಎದ್ದಿವೆ ತಲೆ ಮರೆಸಿಕೊಂಡು ನಿಲ್ಲುವುದಕ್ಕೂ ಒಂದು ಮೆಳೆ ಇಲ್ಲ ಹಾಗಿದ್ದರೂ ಆ ಕ್ರೂರಿಗಳಾದ ಮಕ್ಕಳ ಯಿರುವುದಕ್ಕಿಂತಲೂ ಕಾಡಿನಲ್ಲಿ ಗಾಳಿ ಮಳೆಗಳಲ್ಲಿ ಅಲೆಯುವುದೇ ಉತ್ತಮವೆಂದು ಬಂದುಬಿಟ್ಟನು ಆ ಹ ಳು ಮಕ್ಕಳು ಎಳ್ಳಷ್ಟು ಕರುಣವಿಲ್ಲದೆ "ಹೋದರೆ ಹೋಗಲಿ ವಿವೇಕವಿಲ್ಲದ ಮೇಲೆ ಆಗುವುದೇ ಹೀಗೆ!" ಎಂದು ಬಾಗಿಲು ಮುಚ್ಚಿಕೊಂಡರು

ಆ ಭಯಂಕರವಾದ ಬಿರುಗಾಳಿಯಲ್ಲಿ ಮೃಗಗಳೂ ಗವಿಗಳನ್ನು ಬಿಟ್ಟು ಬರಲು ಹೆದರುವುವು ಹೀಗಿದ್ದರೂ ಅರಸನು ಅದೊಂದನ್ನೂ ಲೆಕ್ಕಿಸದೆ ಹೊರಟುಬಿಟ್ಟನು. ಕೆಂಟನೂ ವಿದೂಷಕನೂ ಅವನ ಜೊತೆಯಲ್ಲಿ ಇದ್ದು ಆ ಕಾಳಿ ಮಳೆಗಳ ಹೊಡೆತವನ್ನೆಲ್ಲ ಅನುಭವಿಸಿದರು. ಲಿಯರನಿಗೆ ಮಕ್ಕಳ ವಿಚಾರವು ನೆನಪಾಗಿ ಒಂದುಗಳಿಗೆ ಮೈ ಮರೆತು ಹೆಚ್ಚು ಬಂದಂತಾಗುವುದು ಕೆಂಟನು ಆ ಅರಸನು ಹಾಗೆ ಒದ್ದಾಡುತ್ತಿರುವುದನ್ನು ನೋಡಲಾರದೆ ಅಲ್ಲಲ್ಲಿ ಹುಡುಕಿ ಒಂದು ಗವಿಯನ್ನು ಹಿಡಿದು, ಅದರಲ್ಲಿ ಅರಸನನ್ನು ಇಡಬೇಕೆಂದು ಎಷ್ಟು ಪ್ರಯತ್ನಮಾಡಿದರೂ ಆತನೊಪ್ಪಲಿಲ್ಲ. ಹೊರಗೆ ರೇಗುತ್ತಿರುವ ಗಾಳಿ ಮಳೆಗಳ ಜೊತೆಗೆ ಅವನ ಒಳಗಿದ್ದ ರೇಗೂ ಸೇರಿ ಅವನಿಗೆ ಹುಚ್ಚೇ ಹಿಡಿದುಹೋಯಿತು

ಕೆಂಟನು ಕಂಡುಹಿಡಿದ ಗವಿಯೊಳಕ್ಕೆ ಅರಸನು ತಾನು ಹೋಗದೆ ವಿದೂಷಕನನ್ನು ಕಳುಹಿಸಿದನು ಅವನಿಗೆ ಮುಂಚೆ ಒಬ್ಬ ಹುಚ್ಚನಲ್ಲಿಗೆ ಬಂದು ಸೇರಿಕೊಂಡಿದ್ದನು ಅವನೂ ಪಾಪ! ಇತರರ ಮೋಸದಿಂದ ಮನೆಬಾಗಿಲುಬಿಟ್ಟು ಬಂದಿದ್ದವನು. ಅವನೊಂದು ಪಿಶಾಚವೆಂದುಕೊಂಡು ವಿದೂಷಕನು ಮೊದಲು ಹೆದರಿದನು ಕೆಂಟನು ಅವನನ್ನು ಈಚೆಗೆ ಕರೆದು ಮಾತನಾಡಿಸಲು ಅವನು ಹುಚ್ಚನೆಂದು ತಿಳಿಯಿತು. ದೊರೆಗೆ ಅವನನ್ನು ಕಂಡು “ಅವನೂ ತನ್ನಂತೆಯೇ ಎಲ್ಲವನ್ನೂ ತನ್ನ ಮಕ್ಕಳಿಗೆ ಹಂಚಿಕೊಟ್ಟಿರಬಹುದೇನೋ?” ಎನ್ನಿಸಿತು ಇತರರು ಅವನು ಹುಚ್ಚನು, ಅವನಿಗೆ ಮಕ್ಕಳೇ ಇಲ್ಲ ಎಂದರೂ ಅರಸನು ಕೇಳನು “ಉಂಟೆ? ಲೋಕದಲ್ಲಿ ಕೃತಘ್ನರಾದ ಚಂಡಾಲರಾದ ಮಕ್ಕಳಲ್ಲದೆ ಇನ್ನು ಯಾರು ತಾನೇ ಇಂತಹ ಹುಚ್ಚು ಹಿಡಿಸಬಲ್ಲರು?” ಎಂದು ಹೇಳುತ್ತ ಅವನನ್ನು ಹತ್ತಿರ ಇಟ್ಟುಕೊಂಡನು

ಅವನು ಗ್ಲೌಸೆಸ್ಟರ್ ಎಂಬ ಪಾಳೆಯಗಾರನ ಮಗನು ಅವನ ತಂದೆಗೆ ಒಬ್ಬ ಹೆಂಡಿತಿ. ಒಬ್ಬ ಸೂಳೆ ಆ ಸೂಳೆಯ ಮಗನು ತಂದೆಯ ಆಸ್ತಿಯನ್ನೆಲ್ಲ ಅಪಹರಿಸಬೇಕೆಂದು ಪಿತೂರಿಮಾಡಿ ತಂದೆಗೆ ಅವನ ಮೇಲೆ ಇಲ್ಲದ ಚಾಡಿಗಳನ್ನು ಹೇಳಿ ಕೋಪ ಬರುವಂತೆ ಮಾಡಿ ಓಡಿಸಿಬಿಟ್ಟಿದ್ದನು ಅವನು ತನ್ನ ನಿಜರೂಪದಲ್ಲಿ ಯಾರಾದರೂ ಕಂಡರೆ ತನ್ನ ತಂದೆಗೆ ತಿಳಿಸಿಬಿಟ್ಟಾರೆಂದು ಹೆದರಿ ಹೀಗೆ ಹುಚ್ಚನಂತೆ ವೇಷಕಟ್ಟಿಕೊಂಡಿದ್ದನು. ಅವನ ಹೆಸರು ಎಡ್ಗರ್

ಇತ್ತ ಮಕ್ಕಳು ನಿರ್ದಾಕ್ಷಿಣ್ಯವಾಗಿ ತಂದೆಯನ್ನು ಓಡಿಸಿದುದು ಗ್ಲೌಸೆಸ್ಟರ ಪಾಳೆಯಗಾರನಿಗೆ ಸರಿಬೀಳಲಿಲ್ಲ ಅರಸನನ್ನು ಕರೆದ ಕೊಂಡು ಹೋಗಿ ಮನೆಯಲ್ಲಿರಿಸಿಕೊಳ್ಳಬೇಕೆಂದು ಅವನಿಗೆ ಆಸೆ ಆದರೆ ಆ ಕಟುಕಿಯರು ಅವನ ಮನೆಯನ್ನು ಆಕ್ರಮಿಸಿಕೊಂಡು “ಎಚ್ಚರಿಕೆ! ಅರಸನನ್ನು ಕರೆತಂದರೆ ನಮ್ಮ ದ್ವೇಷವನ್ನು ಸಾಯುವವರೆಗೂ



ಎಡ್ಗರನು ಎಡ್ಮಂಡನನ್ನು ತೀರಿಸಿದನು

ಕಟ್ಟಿಕೊಳ್ಳಬೇಕಾಗುವುದು" ಎಂದು ಅಂಜಿಸಿ ಅವನನ್ನು ತಡೆದರು. ಆದರೂ ಅವನಿಗೆ ಮನಸ್ಸು ತಡೆಯದೆ ಅವನು ಆ ಕತ್ತಲಿನಲ್ಲಿ ತಾನೇ ದೀವಟಿಗೆಯನ್ನು ಹಿಡಿದುಕೊಂಡು ಬಂದು ಅವನನ್ನು ಕರೆದುಕೊಂಡು ಹೋಗಿ ತನ್ನ ಅರಮನೆಯ ಬಳಿಯ ಒಂದು ಮುರುಕು ಗುಡಿಸಲಲ್ಲಿಳಿಸಿದನು.

ಇತ್ತ ಆತನ ಎಡ್ಮಂಡ್ ಎಂಬ (ಸೂಳೆಯ) ಮಗನು ತಂದೆಯು ಏನು ಮಾಡುವನೆಂಬುದನ್ನು ಆತನಿಂದಲೇ ತಿಳಿದು ಅದನ್ನು ರೀಗನ್ನಳ ಗಂಡನಿಗೆ ತಿಳಿಸಿದನು ತನ್ನ ತಂದೆ ಗ್ಲಾಸೆಸ್ಟರಿನು ದೊರೆಗೆ ಆತನ ಮಕ್ಕಳು ಮಾಡಿದ ದ್ರೋಹಗಳನ್ನೆಲ್ಲ ಕಾರ್ಡಿಯಳ ಗಂಡನಾದ ಫ್ರಾನ್ಸಿನ ದೊರೆಗೆ ತಿಳಿಸಿ ಆತನ ಸಹಾಯವನ್ನು ಅಪೇಕ್ಷಿಸಿದ್ದನು ಅದಕ್ಕೆ ಆತನು ತಾನು ಸೈನ್ಯ ಸಮೇತವಾಗಿ ಶೀಘ್ರವಾಗಿ ಬರುವುದಾಗಿ ಬರೆದಿದ್ದನು ಆ ಕಾಗದವನ್ನು ತೆಗೆದುಕೊಂಡುಹೋಗಿ ಎಡ್ಮಂಡನು ರೀಗನ್ಳಿಗೂ ಅವಳ ಗಂಡನಿಗೂ ತೋರಿಸಿದನು ಇದೆಲ್ಲವನ್ನೂ ತಿಳಿದ ಅವರು ಲಿಯರನನ್ನೂ ಗ್ಲಾಸೆಸ್ಟರನನ್ನೂ ಹಿಡಿದು ಕೊಲ್ಲಿಸಬೇಕೆಂದು ಸಿದ್ಧರಾದರು ಆ ವೇಳೆಗೆ ಸರಿಯಾಗಿ ಗ್ಲಾಸೆಸ್ಟರನ ಸಹಾಯದಿಂದ ಅರಸನು ತನ್ನ ಪರಿವಾರದೊಡನೆ ಡೋವರಿಗೆ ಹೊರಟು ಹೋದನೆಂದು ತಿಳಿಯಿತು ಗಾನ್‌ರಿಲ್ಲಳೂ ಎಡ್ಮಂಡ್‌ನೂ ಆಸ್ವಾಲ್ಡನೂ ಅವರ ಬೆನ್ನಟ್ಟಿ ಹೊರಟರು. ಇತ್ತ ರೀಗನ್ನಳೂ ಅವಳ ಗಂಡನೂ ಗ್ಲಾಸೆಸ್ಟರನನ್ನು ಹಿಡಿದು ತರಿಸಿ, ತಾವೇ ಅವನ ಕಣ್ಣುಗಳನ್ನು ಕಿತ್ತುಹಾಕಿ, ಅವನನ್ನು ಅರಮನೆಯಿಂದ ಹೊರಕ್ಕೆ ತಳ್ಳಿಸಿದರು.

ಗ್ಲಾಸೆಸ್ಟರನು ಕಾರ್ಡಿಲಿಯಗಳಿಗೆ ಬರೆದ ಪತ್ರವು ವ್ಯರ್ಥವಾಗಲಿಲ್ಲ. ಅವಳು ತಂದೆಯ ದುಃಸ್ಥಿತಿಯನ್ನು ಓದಿ ಕಂಬನಿ ದುಂಬಿಮರುಗಿದಳು. ಅವಳೂ ಅವಳ ಗಂಡನೂ ತಮ್ಮ ಸೈನ್ಯದೊಡನೆ ಬ್ರಿಟನ್ನಿಗೆ ಬಂದರು.

ಅಷ್ಟರಲ್ಲಿ ಇಲ್ಲಿ ರೀಗನ್ನಳ ಗಂಡ ಕಾರ್ನವಾಲನು ಗ್ಲಾಸೆಸ್ಟರಿನ ಕಣ್ಣುಕೀಳುವಾಗ ರೇಗಿ ಮೇಲೆಬಿದ್ದ ಆಳಿನ ಹೊಡೆತಕ್ಕೆ ಬಲಿಯಾಗಿ ಹೋದನು. ಗಾನ್‌ರಿಲ್ಲಳ ಗಂಡ ಆಲ್ಬನಿಯು ಹೆಂಡಿತಿ ನಾದನಿಯರು ತಮ್ಮ ತಂದೆಗೆ ಮಾಡಿದ ತಿರಸ್ಕಾರ ಅವಮಾನಗಳನ್ನು ಕುರಿತು ಕೇಳಿ ಚೆನ್ನಾಗಿ ಛೀಮಾರಿ ಹಾಕಿದನು. ಆದರೂ ಶತ್ರುಸೈನ್ಯವು ಬಂದಿರುವಾಗ ಯುದ್ಧಮಾಡದಿರುವುದೆಂತು? ಅದರಿಂದ ಶತ್ರುಗಳನ್ನು ಕಟ್ಟಿಕೊಂಡು ಯುದ್ಧಕ್ಕೆ ಹೊರಟನು.

ಕಾರ್ಡಿಲಿಯಳ ಗಂಡನು ಅವಸರದ ರಾಜಕಾರ್ಯಕ್ಕಾಗಿ ಹಿಂತಿರುಗಿದನು. ಅವಳೇ ಸೈನ್ಯವನ್ನು ನಡೆಸಬೇಕಾಗಿ ಬಂತು ಅವಳು ಯುದ್ಧಕ್ಕಿಂತ ಮುಂಚೆಯೇ ತನ್ನ ಕಡೆಯವರನ್ನು ಕಳುಹಿಸಿ ತಂದೆಯನ್ನು ಹುಡುಕಿಸಿ ಕರೆಸಿಕೊಂಡಳು ಆತನಿಗೆ ಬೇಕಾದ ಹಾಗೆ ಔಷಧ ಉಪಚಾರಗಳನ್ನು ನಡೆಸಿದಳು ಆತನಿಗೆ ಕೊಂಚ ಅನುಕೂಲವಾಯಿತು



ಆಲ್ಬನಿ :—ಇವನ್ನೆಲ್ಲ ನೋಡುವುದಕ್ಕೆ ನಾವು ಉಳಿದೆವೆ ?

ಅಷ್ಟರಲ್ಲಿ ಈ ಅಕ್ಕತಂಗಿಯರಲ್ಲಿ ಇನ್ನೊಂದು ನಾಟಕವು ನಡೆದುಹೋಯಿತು. ಗ್ಲಾಸೆಸ್ಟರನು ದೊರೆಯ ಕಡೆಯೆಂದು ಚಾಡಿಹೇಳಿ ಅವನ ಕಣ್ಣುಗಳನ್ನು ಕೀಳಿಸಿದ ಎಡ್ಮಂಡನು ಒಳ್ಳೆಯ ರೂಪವಂತನು. ಅವನನ್ನು ಮದುವೆಯಾಗಬೇಕೆಂದು ಅಕ್ಕತಂಗಿಯರಿಬ್ಬರಿಗೂ ಆಸೆಯಾಯಿತು ಅತ್ತ ಅಕ್ಕನಾದ ಗಾನೆರಿಲ್ಲಳು "ನೀನು ನನ್ನ ಗಂಡನನ್ನು ಕೊಂದುಬಿಡು. ನಾನೂ ನೀನೂ ಮದುವೆಮಾಡಿಕೊಂಡು ಸುಖವಾಗಿರೋಣ" ಎಂದು ಗುಟ್ಟಾಗಿ ಅವನಿಗೆ ಕಾಗದ ಬರೆದಳು ಅದು ರೀಗನ್ನಳ ಕೈಗೆಬಿತ್ತು ಅವಳದನ್ನು ಒಡೆದು ನೋಡಿದಳು. ಅವಳ ಹೊಟ್ಟೆಯುರಿದುಹೋಯಿತು ಅವಳು ಕೂಡಲೇ ಅವನಿಗೆ "ನನ್ನನ್ನು ಮದುವೆಯಾಗು. ನನ್ನ ಗಂಡನೂ ಸತ್ತುಹೋಗಿರುವನು" ಎಂದು ಹೇಳಿದಳು ಹೀಗೆ ಇಬ್ಬರೂ ಆಸೆಯಿಟ್ಟುಕೊಂಡಿರುವುದು ಇಬ್ಬರಿಗೂ ತಿಳಿದುಹೋಗಿ ಅತ್ತಕಡೆ ಯುದ್ಧವಾಗುತ್ತಿರುವಾಗ ಇತ್ತಕಡೆ ಅಕ್ಕನು ತಂಗಿಗೆ ವಿಷಹಾಕಿದಳು ವಿಷವು ಚೆನ್ನಾಗಿಯೇ ಕೆಲಸಮಾಡಿತು.

ಯುದ್ಧದಲ್ಲಿ ಬ್ರಿಟನ್ನಿನ ಸೈನ್ಯಕ್ಕೇ ಜಯವಾಯಿತು ಫ್ರಾನ್ಸಿನವರು ತಮ್ಮ ರಾಣಿಗೋಸ್ಕರವಾಗಿ ಪಟ್ಟ ಶ್ರಮವೆಲ್ಲವೂ ವ್ಯರ್ಥವಾಗಿ ಕಾರ್ಡಿಲಿಯಳೂ ಲಿಯರನೂ ಶತ್ರುಗಳ ಕೈಗೆ ಸಿಕ್ಕಿಹೋದರು ಗನೆರಿಲ್ಲಳೂ ಎಡ್ಮಂಡನೂ ಅವರಿಬ್ಬರೂ ಬದುಕಿರುವವರೆಗೂ ತಮಗೆ ರಾಜ್ಯವು ಸ್ಥಿರವಲ್ಲವೆಂದು ಅವರಿಬ್ಬರನ್ನೂ ಗುಟ್ಟಾಗಿ ಕೊಲ್ಲಿಸಲು ಪ್ರಯತ್ನಮಾಡಿದರು. ಎಡ್ಮಂಡನು ತನ್ನಂತೆಯೇ ನೀಚನಾದ ಒಬ್ಬ ಸೈನ್ಯಾಧಿಕಾರಿಯನ್ನು ಕರೆಯಿಸಿ "ನೀನು ಕಾರ್ಡಿಲಿಯಳನ್ನು ಸೆರೆಮನೆಯಲ್ಲಿ ನೇಣುಹಾಕಿಬಿಡು. ತಾನಾಗಿ ನೇಣುಹಾಕಿಕೊಂಡಳೆಂದು ಕೂಗಿಬಿಡು ಇಷ್ಟುಮಾಡಿಬಂದರೆ ಬೇಕಾದ್ದು ಕೊಡುವೆನು" ಎಂದು ಆಶೆ ತೋರಿಸಿದನು.

ಯುದ್ಧದಲ್ಲಿ ಗೆದ್ದವೆಂಬ ಸಂತೋಷವು ತಮ್ಮದಾಗುತ್ತಿರುವಾಗಲೇ ಅಕ್ಕತಂಗಿಯರಿಗೆ ವಿಪತ್ತು ಒದಗಿತು ಗಾನೆರಿಲ್ಲಳು ಬರೆದಿದ್ದ ಕಾಗದವು ಅವಳ ಗಂಡನ ಕೈಸೇರಿತು. ಗಂಡನು ಅವಳಿಗೆ ಅದನ್ನು ತೋರಿಸಿ ಏನು ಹೇಳುವೆಯೆಂದನು ಅವಳು ಆ ಅವಮಾನವನ್ನು ತಾಳಲಾರದೆ ತಾನಾಗಿ ಕತ್ತಿಯಿಂದ ಇರಿದುಕೊಂಡು ಸತ್ತಳು. ರೀಗನ್ನಳು ಅಕ್ಕನು ಪ್ರಯೋಗಿಸಿದ್ದ ವಿಷಕ್ಕೆ ಬಲಿಯಾದಳು. ಗ್ಲಾಸೆಸ್ಟರನ ಮಗನಾದ ಎಡ್ಗರನು ಎಡ್ಮಂಡನನ್ನು ಯುದ್ಧಕ್ಕೆ ಕರೆದು ಅವನೊಡನೆ ಹೋರಾಡಿ ಅವನನ್ನು ತೀರಿಸಿ ತನ್ನ ಸೇಡು ತೀರಿಸಿಕೊಂಡನು ಹೀಗೆ ಇಲ್ಲಿ ದುಷ್ಟರೆಲ್ಲರೂ ಹತರಾಗಿ ಹೋದರು ಎನ್ನುವ ವೇಳೆಗೆ ಅಲ್ಲಿಂದ ಲಿಯರನು ತನ್ನ ಮಗಳು ಕಾರ್ಡಿಲಿಯು ಸತ್ತುಹೋದಳೆಂದು ಅತಿಯಾಗಿ ದುಃಖಪಡುತ್ತಾ ಅವಳ ಶವವನ್ನು ತಾನೇ ತಬ್ಬಿಕೊಂಡು ಹೊತ್ತು ಅಲ್ಲಿಗೆ ತಂದನು

ಇತ್ತ ಆ ವೇಳೆಗೆ ಆ ಇಬ್ಬರು ಚಂಡಾಲಿನಿಯರೂ ಸತ್ತರೆಂದು ಅವರ ಶವಗಳನ್ನೂ ಅಲ್ಲಿಗೆ ತಂದರು. ಲಿಯರಿನ ಮೊದಲನೆಯ ಅಳಿಯನಾದ ಆಲ್ಬನಿಯ ಸರದಾರನು ಅದೆಲ್ಲವನ್ನೂ ಕಂಡು ಬೇಸರಪಟ್ಟುಹೋದನು. ಅದುವರೆಗೂ ಲಿಯರಿನ ಬಳಿ ವೇಷಾಂತರದಿಂದ ಇದ್ದ ಕೆಂಟನು ತನ್ನ ನಿಜಸ್ವರೂಪದಿಂದ ಕಾಣಿಸಿಕೊಂಡನು. ಆದರೆ ಅವನೂ ತನ್ನ ದೊರೆಯು ವ್ಯಸನದಿಂದ ತಾನೂ ಬಹಳ ಕಾಲ ಉಳಿಯುವುದು ಅಸಂಭವವೆಂದು ಹೊರಟುಹೋದನು.

ಆ ದುಷ್ಟೆಯರ ಅನ್ಯಾಯವನ್ನೂ ಆ ಮುದುಕರ ದುಃಖವನ್ನೂ ನೋಡಿಕೊಂಡಿರಲು ಆಲ್ಬನಿಯ ಸರದಾರನೂ ಗ್ಲೌಸೆಸ್ಟರನ ಮಗ ಎಡ್ಗರನೂ ಉಳಿದರು ಸತ್ಯವೇನೋ ಜಯಿಸಿತು. ಆದರೆ ಅದು ದುಷ್ಟರನ್ನು ಬಲಿಗೊಳ್ಳುವುದಕ್ಕಿಂತ ಮುಂಚೆ ಅನರ್ಥಗಳೇನೋ ಬಹುವಾಗಿ ನಡೆದುಹೋದುವು.



# ಜೂಲಿಯಸ್ ಸೀಜರ್

ರೋಂ ರಾಜ್ಯದಲ್ಲಿ ರಾಜನಿರಲಿಲ್ಲ ರೋಂ ನಗರವಾಸಿಗಳಲ್ಲಿ ಪ್ರಮುಖರಾದವರು ಸೇರಿ, ಒಂದು ಸಭೆಮಾಡಿಕೊಂಡಿದ್ದರು. ಅವರು ರಾಜನಿಗೆ ಬದಲಾಗಿ ರಾಜನಂತೆ ದೇಶವನ್ನೆಲ್ಲ ಆಳುತ್ತಿದ್ದರು.

ಸೀಜರನು ಪರಾಕ್ರಮಶಾಲಿ. ದೇಶಕ್ಕೆ ಕೀರ್ತಿಯನ್ನೂ ರಾಜ್ಯವನ್ನೂ ಗಳಿಸಿಕೊಂಡು ಬಂದ ರಣಧೀರನೆಂದು ಆ ನಗರದ ಜನರು ಆತನಿಗೆ ಒಲಿದರು ಅವರು ಅವನನ್ನೇ ರಾಜನನ್ನು ಮಾಡುವರೋ ಏನೋ ಎಂದು ಕೆಲವರು ಸಂದೇಹಗೊಂಡರು. ಅದಕ್ಕೆ ಕಾರಣವೂ ಇತ್ತು ಸೀಜರಿಗೆ ಅದು ಗೊತ್ತೂ ಇತ್ತು. ಆ ನಗರದ ಮುಖಂಡರಲ್ಲಿ ಕೆಲವರಿಗೆ ಸೀಜರನು ದೊರೆಯಾಗುವುದು ಸಮ್ಮತವಿರಲಿಲ್ಲ. ಅದರಿಂದ ಅವರೆಲ್ಲ ಒಳಗೊಳಗೆ ಸೇರಿ ಒಂದು ಪಿತೂರಿಯನ್ನು ನಡೆಸಿದರು

ಹಲವರು ಆ ಒಳಸಂಚಿಗೆ ಸೇರಿದ್ದರೂ, ಅವರಿಗೆ ಜನಗಳ ಭೀತಿಹೆಚ್ಚು. ಅದರಿಂದ ಜನರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದವನೊಬ್ಬನನ್ನು ಹಿಡಿದು ತಮ್ಮ ಜೊತೆಗೆ ಸೇರಿಸಿಕೊಂಡರೆ ತಮ್ಮ ಕೆಲಸವು ಸುಲಭವಾಗುವುದೆಂದು ಅವರು ಯೋಚಿಸಿದರು. ಆ ನಗರದಲ್ಲಿ ಬ್ರೂಟಸ್ ಎಂಬೊಬ್ಬ ದೊಡ್ಡಮನುಷ್ಯ. ಸತ್ಯವಂತನೆಂದು ಆತನನ್ನು ಆ ಪಟ್ಟಣದವರು ಬಹುವಾಗಿ ಗೌರವಿಸುತ್ತಿದ್ದರು ಜೊತೆಗೆ, ಅವನ ಪೂರ್ವಿಕನಾದ ಮತ್ತೊಬ್ಬ ಬ್ರೂಟಸ್ಸನು ಹಿಂದೆ ದೇಶದ್ರೋಹಿಯಾಗಿದ್ದ ಒಬ್ಬ ದೊರೆಯನ್ನು ಹೊಡೆದು ಓಡಿಸಿ ದೇಶಕ್ಕೆ ಉಪಕಾರ ಮಾಡಿದ್ದನಂತೆ! ಅದೂ ಸೇರಿ, ಬ್ರೂಟಸ್ಸನಿಗೆ ಗೌರವವು ಬಹಳವಾಗಿತ್ತು. ರಾಜ್ಯವಾಳುವ ಸಭೆಯುವರು ಮಾತ್ರವಲ್ಲದೆ ಸಾಮಾನ್ಯರು ಕೂಡ ಆತನನ್ನು ಬಹಳವಾಗಿ ಗೌರವಿಸುತ್ತಿದ್ದರು.

ಒಳಸಂಚು ನಡೆಸುತ್ತಿದ್ದವರಲ್ಲಿ ಕ್ಯಾಸಿಯುಸ್ ಎಂಬುವನು ಮುಖಂಡ. ಅವನಿಗೂ ಸೀಜರನಿಗೂ ಸರಿಬೀಳದು ಸೀಜರನು "ಕ್ಯಾಸಿಯೋ ಒಣಕಲ ಯಾವಾಗಲೂ ಅಳುಮೊರೆ ಮಾಡಿಕೊಂಡೇ ಇರುತ್ತಾನೆ. ಅಂತಹವರು ಯಾರಿಗೂ ಒಳ್ಳೆಯದು ಮಾಡುವುದಿಲ್ಲ ಸಾಮಾನ್ಯವಾಗಿ ಕೆಟ್ಟದ್ದೇ ಮಾಡುತ್ತಾರೆ ಅಂತಹವರನ್ನು ನಂಬಬಾರದು ನನ್ನ ಸುತ್ತಲೂ ನಮ್ಮ ಆಂಟನಿಯಂತಹವರು ಇರಲಿ. ಆಂಟನಿಯ ಹಾಗೆ ನಗುನಗುತ್ತ ಗುಂಡಗೆ ದಪ್ಪ ದಪ್ಪವಾಗಿ ಪ್ರಸನ್ನವಾಗಿರುವವರು ಯಾವಾಗಲೂ ಇತರರಿಗೆ ಕೆಡಕು

ಮಾಡುವುದಿಲ್ಲ'' ಎಂದು ಹೇಳುತ್ತಿದ್ದನು. ಕ್ಯಾಸಿಯಸ್‌ನು '' ಸೀಜರನು ಪ್ರಬಲನಾಗುತ್ತಿದ್ದಾನೆ. ನಮ್ಮೆಲ್ಲರನ್ನೂ ಮೆಟ್ಟಿ ತಾನು ರಾಜ್ಯವನ್ನು ಆಕ್ರಮಿಸಿಕೊಳ್ಳುತ್ತಾನೆ. ಅದನ್ನು ತಪ್ಪಿಸದೆ ಇದ್ದರೆ, ನಮಗೆ ಮಹಾವಿಪತ್ತು ಬರುತ್ತದೆ. ಹುಟ್ಟುವಾಗ ಸ್ವತಂತ್ರವಾಗಿ ಹುಟ್ಟಿದ ನಾವು ಈಗ ಇವನಿಗೆ ಗುಲಾಮರಾಗಬೇಕಾಗುತ್ತದೆ'' ಎಂದು ಗೊಣಗಿಕೊಳುತ್ತಿದ್ದನು

ಕ್ಯಾಸಿಯಸ್ಸನು ಬ್ರೂಟಸ್ಸಿನೊಡನೆ ಮಾತನಾಡಲು ಸಮಯವನ್ನು ಕಾದಿದ್ದನು. ರೋಂ ನಗರದಲ್ಲಿ ಒಂದು ಹಬ್ಬವಾಯಿತು. ಆದಿನ ಎಲ್ಲರೂ ಸಂಭ್ರಮ ಉತ್ಸಾಹಗಳಿಂದ ಊರ ಹೊರಗಿನ ಬಯಲಲ್ಲಿ ಸೇರಿದ್ದರು ಆಟಗಳು ಆಗುತ್ತಿದ್ದುವು ಜನರು ಬಹಳ ಸಂಭ್ರಮದಿಂದ ಸೀಜರಿಗೆ ಜಯವಾಗಲಿ ಎಂದು ಕೂಗುತ್ತಿದ್ದರು ಕ್ಯಾಸಿಯಸ್ಸನು ಆಗ ಬ್ರೂಟಸ್ಸನನ್ನು ಹಿಡಿದು '' ಬ್ರೂಟಸ್ ! ನೋಡಿದೆಯೋ ! ಸೀಜರನು ದೊರೆಯಾಗುವನು. ಈ ಮಂಕುಜನರು ಅವನ ದೊರೆತನಕ್ಕೆ ಒಪ್ಪಿಕೊಳ್ಳುವರು. ಹಾಗಾದ ಮೇಲೆ ನಾವು ಬದುಕಿದ್ದರೆ ತಾನೇ ಲಾಭವೇನು? ಸೀಜರನೂ ನಮ್ಮ ಹಾಗೆಯೇ ಅಲ್ಲವೇನು? ಒಂದು ದಿನ ಇದೇ ಸೀಜರನು ಟೈಬರ ನದಿಯು ತುಂಬಿ ಹರಿಯುತ್ತಿದ್ದಾಗ ಕ್ಯಾಸಿಯಸ್! ಬರುವೆಯಾ, ಆ ದಡಕ್ಕೆ ಈಜಿಕೊಂಡು ಹೋಗಿ ಬರೋಣ ಧೈರ್ಯವಿದೆಯೇ? ಎಂದ ಬ್ರೂಟಸ್! ಆಗ ನಾನು ಉಡುತ (Uniform)ವನ್ನು ಧರಿಸಿದ್ದೆ ಆದರೂ ಆದುದಾಗಲೆಂದು ಹಾಗೆಯೇ ನದಿಗೆ ಧುಮುಕಿದೆ. ಅವನೂ ಜೊತೆಯಲ್ಲಿ ಹಾರಿದ. ಅಷ್ಟುದೂರ ಈಜುವುದರೊಳಗಾಗಿ ಅವನಿಗೆ ಕೈಕಾಲು ಸೋತು ಹೋಗಿ, ಕ್ಯಾಸಿಯಸ್, ನನ್ನನ್ನು ಉಳಿಸು ಮುಳುಗಿ ಹೋಗುತ್ತಿದ್ದೇನೆ ಎಂದು ಕೂಗಿಕೊಂಡ ಆಗ ನಾನು ಅವನನ್ನು ಹೊತ್ತುಕೊಂಡು ಹೋಗಿ ದಡಕ್ಕೆ ಹಾಕಿದೆ ಇಂತಹ ಇವನು ಈಗ ಜನರ ಕಣ್ಣಿನಲ್ಲಿ ಒಬ್ಬ ದೇವರಾಗಿ ಹೋಗಿದ್ದಾನೆ ಈಗ ಅವನು ಬಂದು ಮಾತನಾಡಿದರೆ ಸಾಕು, ಅದನ್ನು ಬರೆದಿಡುತ್ತಾರೆ ಅವನನ್ನು ಉಳಿಸಿದ ಕ್ಯಾಸಿಯಸ್‌ನನ್ನು ಕೇಳುವವರೇ ಇಲ್ಲ. ಇದಕ್ಕೆ ಏನು ಹೇಳುವುದು?" ಎಂದು ಸಿಟ್ಟುಸಿರುಗರೆದನು

ಬ್ರೂಟಸ್ಸನು '' ಹೌದು ಹೌದು. ಈ ಹುಚ್ಚು ಜನರು ಸೀಜರನ ಮೇಲೆ ಬಹಳ ಮೋಹವಿಟ್ಟುಕೊಂಡಿದ್ದಾರೆ. ಇದರಿಂದ ಏನೇನು ಅನರ್ಥವಾಗುವುದೋ?'' ಎಂದು ಶಂಕಿಸಿದನು

ಕ್ಯಾಸಿಯಸ್‌ನು '' ಬ್ರೂಟಸ್! ಮುಖ್ಯವಾಗಿ ರೋಮ್ ಜನರು ಕೆಟ್ಟುಹೋದರು ಈ ನಗರದಲ್ಲಿ ಹಿಂದಿನಂತೆ ಮಹಾಪುರುಷರು ಹುಟ್ಟುತ್ತಿಲ್ಲ ಈಗಿನವರಿಗೆ ಮಾನ ಗೀನ ಬೇಕಿಲ್ಲ ಸೀಜರನು ತ್ರಿವಿಕ್ರಮನಂತೆ ಭೂಮಿಯನ್ನೆಲ್ಲ ಆಕ್ರಮಿಸಿ ನಿಂತಿದ್ದರೆ, ನಾವು ವಾಮನರ ಹಾಗೆ ಅವನ ಕಾಲು ಕೆಳಗೆ ನುಸಿದುಕೊಂಡು ತಿರುಗ ಬೇಕಾ

ಗಿದೆ ಅವನ ಅದೃಷ್ಟ ಅದು ! ನಮ್ಮ ಅದೃಷ್ಟ ಇದು ಎನ್ನುವೆಯೇನೋ ? ನನಗೆ ಅದರಲ್ಲಿ ನಂಬಿಕೆಯಿಲ್ಲ. ನಮ್ಮ ಅದೃಷ್ಟ ನಮ್ಮ ಕೈಯಲ್ಲಿದೆ ಬ್ರೂಟಸ್ ! ಆ ಅದೃಷ್ಟವನ್ನು ಕಟ್ಟುವುದೂ ಕೀಳುವುದೂ ನಕ್ಷತ್ರಗಳಲ್ಲ ನಮ್ಮ ಪ್ರಯತ್ನಗಳು ಸೀಜರನೂ ನಮ್ಮ ಹಾಗೇ ಮನುಷ್ಯ ! ನಾವು ಕೈಲಾಗದೆ ಬಿಟ್ಟಿರುವುದರಿಂದ ಅವನು ಹೀಗೆ ವೃತ್ರಾಸುರನಂತೆ ಬೆಳೆದಿದ್ದಾನೆ'' ಎಂದನು

ಬ್ರೂಟಸ್ಸನು "ಇರಲಿ, ಕ್ಯಾಸಿಯುಸ್ಸ್! ಈ ವಿಚಾರ ಈಗ್ಗೆ ಇಲ್ಲಿಗೆ ಇರಲಿ. ಮುಂದೊಮ್ಮೆ ಸೇರಿ ಮಾತನಾಡಿ ಏನಾದರೂ ಮಾಡೋಣ" ಎಂದು ಹೋದನು.

ಒಂದು ದಿನ ರಾತ್ರಿ ರೋಂ ನಗರದಲ್ಲಿ ಗುಡುಗು ಸಿಡಿಲುಗಳಿಂದ ಕೂಡಿದ ಮಳೆಯು ಹೊಯ್ಯಿತು ಜನಗಳಿರಲಿ, ಮೃಗಗಳೂ ಕೂಡ ಈಚೆಗೆ ಬರುವುದಕ್ಕೆ ಹೆದರುವಂತಹ ಆ ರಾತ್ರಿಯಲ್ಲಿ ಕ್ಯಾಸಿಯುಸ್ಸನು ತನ್ನ ಪಿತೂರಿಯನ್ನು ಮುಂದುವರಿಸಿದನು. ತನಗೆ ಬೇಕಾದವರ ಕೈಯ್ಯಿಂದ ಹಲವು ಕಾಗದಗಳನ್ನು ಬರೆಸಿ ಕಳುಹಿಸಿದನು. ಬ್ರೂಟಸ್ಸನು ಕುಳಿತುಕೊಳ್ಳುವ ಕುರ್ಚಿಯಲ್ಲಿ ಒಂದು ಕಾಗದ, ಕಿಟಕಿಯಲ್ಲಿ ಕಾಗದ, ಮೇಜಿನಲ್ಲಿ ಕಾಗದ, ಊಟದ ಮನೆಯಲ್ಲಿ ಕಾಗದ, ಮಲಗುವ ಮನೆಯಲ್ಲಿ ಕಾಗದ, ಹೀಗಾಗುತ್ತ ಬಂದಿತು. ಸತ್ಯವಂತನಾದ ಬ್ರೂಟಸ್ಸನು ಇವೆಲ್ಲವನ್ನೂ ಜನರು ಸ್ವಂತವಾಗಿ ತನ್ನ ಸಹಾಯವನ್ನು ಕೋರಿ ಬರೆಯುತ್ತಿರುವರೆಂದುಕೊಂಡನು. ಯಾವ ಕಾಗದವನ್ನು ನೋಡಿದರೂ, " ಬ್ರೂಟಸ್ ! ದೇಶಕ್ಕೆ ಸಂಭವಿಸಿರುವ ಈ ವಿಪತ್ತನ್ನು ಪರಿಹರಿಸಲೊಲ್ಲೆಯಾ ? ಇನ್ನಾರಿಂದಲೂ ಸಾಧ್ಯವಿಲ್ಲದ ಕಾರ್ಯವನ್ನು ನೀನು ಸಾಧಿಸಲೊಲ್ಲೆಯಾ" ಎಂದೇ ಇದೆ

ಕೊನೆಗೆ ಬ್ರೂಟಸ್ಸನಿಗೂ ಈ ಯೋಚನೆಯು ಹಿಡಿಯಿತು ಏನಾದರೂ ಮಾಡಬೇಕು ಎನ್ನಿಸಿತು. ಆ ಯೋಚನೆಯಲ್ಲಿ ಬಾಯಿಗೆ ಅನ್ನ, ಕಣ್ಣಿಗೆ ನಿದ್ದೆ ಕೂಡ ಬೇಡವಾಗಿ ಹೋಯ್ತು ಹೆಂಡತಿಯಲ್ಲಿ ಬಹಳ ವಿಶ್ವಾಸವಿಟ್ಟುಕೊಂಡಿದ್ದ ಬ್ರೂಟಸ್ಸನಿಗೆ ಹೆಂಡತಿಯೊಡನೆ ಮಾತನಾಡುವುದಕ್ಕೂ ಅವಕಾಶವಿಲ್ಲವಾಯಿತು

ಬ್ರೂಟಸ್ಸನಿಗೆ ಅದೇ ಚಿಂತೆಯಾಗಿ ಹೋಯಿತು. "ಸೀಜರನೇನೋ ಈಗ ಒಳ್ಳೆಯವನೇ ಆಗಿರುವನು ಆದರವನು ದೊರೆಯಾದ ಮೇಲೂ ಹೀಗೆಯೇ ಇರುವನೆ ? ಎಲ್ಲಿ ಬಂತು ? ಜನರು ಏಣಿಯನ್ನು ಹಿಡಿದು ಮೇಲಕ್ಕೆ ಹತ್ತುವರು ಆದರೆ, ಮತ್ತೆ ಅವರು ಆ ಏಣಿಯನ್ನು ನೋಡಲಾದರೂ ನೋಡುವರೆ ? ಅಧಿಕಾರವು ಬಂದರೆ, ಅದರ ಜೊತೆಯಲ್ಲಿಯೇ ಅವನಿಗೆ ಕೇಡು ಮಾಡುವ ಸಾಮರ್ಥ್ಯವೂ ಬರುವುದು ಈಗ ಸೀಜರನು ಹಾವಿನ ಮೊಟ್ಟೆಯಂತೆ ನಿರ್ದುಷ್ಟನಾಗಿದ್ದಾನೆ ಆದರೆ ಮೊಟ್ಟೆಯೊಡೆದು



ಕ್ಯಾಸಿಯಸ್ :—ಬ್ರೂಟಸ್ ಆ ಸೀಜರನು ಈಗ ಎಷ್ಟು ಬಲಿತಿರುವನು ನೋಡಿದಿಯಾ?

ಮರಿಯು ಈಚೆಗೆ ಬಂದು ಬೆಳೆಯುವುದಕ್ಕೆ ಅವಕಾಶಕೊಟ್ಟರೆ, ಅದರಿಂದ ಬೇಕಾದಷ್ಟು ಅನರ್ಥವಾಗುವುದು. ಅದರಿಂದ, ಅಷ್ಟಕ್ಕೆ ಅವಕಾಶವಿಲ್ಲದಂತೆ ಈಗಲೇ ಮುಗಿಸಿ ಬಿಡಬೇಕು" ಎಂದುಕೊಳ್ಳುವನು

ಮತ್ತೆ ಆ ಕಾಗದಗಳು ಬರುವುವು. ಅದೇ ಅರ್ಥದ ಕಾಗದಗಳು, "ಬ್ರೂಟಸ' ಏಕೆ ಮೌನವಾಗಿರುವೆ? ಏಕೆ ಕೈಯೆತ್ತದೆ ಕುಳಿತಿರುವೆ? ಈ ಅನ್ಯಾಯವನ್ನು ತಪ್ಪಿಸಲೊಲ್ಲೆಯಾ?" ಇದೇ ಅರ್ಥದ ಕಾಗದಗಳು ಕೊನೆಗೆ ಬ್ರೂಟಸ್ಸನು ಮನಸ್ಸು ಮಾಡಿದನು. "ರೋಂ ನಗರವೇ! ಅಂಜದಿರು. ಆ ಚಿಂತೆ ನನಗಿರಲಿ" ಎಂದು ಮನಸ್ಸು ಗಟ್ಟಿಮಾಡಿದನು.

ಒಂದು ದಿನ ರಾತ್ರಿ ಪಿತೂರಿಗಾರರು ಬ್ರೂಟಸ'ನನ್ನು ಹುಡುಕಿಕೊಂಡು ಬಂದರು. ಅವರು ಬರುವ ವೇಳೆಗೆ ಬ್ರೂಟಸ್ಸನು ಸಿದ್ಧವಾಗಿ ಹೋಗಿದ್ದನು. ಕ್ಯಾಸಿಯಸ್ಸನೊಡನೆ ಬಂದ ಅವರೆಲ್ಲರೂ ಬ್ರೂಟಸ್ಸಿನಿಂದ ಪ್ರಮಾಣಮಾಡಿಸಬೇಕೆಂದುಕೊಂಡಿದ್ದರು. ಆದರೆ ಆತನು ಒಪ್ಪಲಿಲ್ಲ. "ಪ್ರಮಾಣವೇತಕ್ಕೆ? ನಾವು ಅನುಭವಿಸಬೇಕಾಗಿರುವ ಅಪಮಾನವು ನಮ್ಮ ಎದೆಯನ್ನು ಗಟ್ಟಿಮಾಡಿ, ನಮ್ಮ ಕೈಯಿಂದ ಈ ಕಾರ್ಯವನ್ನು ಮಾಡಿಸದೆ ಹೋದರೆ ಪ್ರಮಾಣವು ಮಾಡಿಸೀತೆ? ಯಾವನಾದರೊಬ್ಬನು ದೊರೆಯಾಗಿ ಎಲ್ಲರನ್ನೂ ತುಳಿದು ಸ್ವೇಚ್ಛೆಯಾಗಿ ರಾಜ್ಯವನ್ನು ಆಳುವನೆಂಬ ದಿಗಿಲು ನಮ್ಮನ್ನು ರೇಗಿಸದಿದ್ದರೆ, ಈ ಯೋಚನೆಯೇ ಹೇಡಿಗಳನ್ನು ಶೂರರನ್ನಾಗಿ ಮಾಡದಿದ್ದರೆ, ಹೆಣ್ಣೆದೆಯನ್ನೂ ಬೆಸೆದು ಉಕ್ಕಿನ ಅಲುಗನ್ನು ಮಾಡುವ ಶಕ್ತಿಯು ಇದಕ್ಕೇ ಇಲ್ಲದಿದ್ದರೆ, ನಮ್ಮ ಪ್ರಮಾಣವೇಕೆ? ನಾವು ರೋಮನ್ನರು ನಾವು ಆಡಿದ ಮಾತಿಗೆ ತಪ್ಪಿದರೆ, ನಮ್ಮ ದೇಹದಲ್ಲಿರುವ ರಕ್ತದ ಬಿಂದು ಬಿಂದುವೂ ರೇಗಿ, ನಮ್ಮ ಮೇಲೆ ಬಿದ್ದಾವು" ಎಂದನು.

ಕೊನೆಗೆ ಎಲ್ಲರೂ ಸೇರಿ ಮರುದಿನ ಸಭೆಯಲ್ಲಿ ಸೀಜರನನ್ನು ವಧಿಸತಕ್ಕದೆಂದು ಗೊತ್ತುಮಾಡಿಕೊಂಡರು. "ಸೀಜರನ ಜೊತೆಯಲ್ಲಿ ಅವನ ಮಿತ್ರ ಆಂಟನಿಯನ್ನು ವಧಿಸಬೇಕು. ಇಲ್ಲವಾದರೆ ಅವನು ಮುಂದೆ ನಮಗೆ ಏಳು ಕೆರೆಯ ನೀರನ್ನು ಕುಡಿಸುವನು" ಎಂದು ಕ್ಯಾಸಿಯಸ್'ನು ಸಲಹೆಕೊಟ್ಟನು. ಆದರೆ ಬ್ರೂಟಸ್ಸನು ಒಪ್ಪಲಿಲ್ಲ. "ನಾವು ಕೊಲೆಪಾತಕರಲ್ಲ, ದೇಶೋದ್ಧಾರಕರು ನಮಗೆ ಸೀಜರನನ್ನು ವಧಿಸದೆ ಹೋದರೆ ಯತ್ನವಿಲ್ಲವೆಂದು ಈಗ ನಾವು ಹೀಗೆ ಮಾಡಬೇಕಾಗಿದೆ ಅಲ್ಲದೆ, ಸೀಜರನು ಹೋದ ಮೇಲೆ ಆಂಟನಿಯೇನು ಮಾಡಿಯಾನು? ಅಬ್ಬಬ್ಬಾ ಎಂದರೆ, ಮೂಲೆಯಲ್ಲಿ ಕುಳಿತು ಅತ್ತತ್ತು ಪ್ರಾಣಬಿಟ್ಟಾನು" ಎಂದು ಹೇಳಿ ಬ್ರೂಟಸ್ಸನು ಅಡ್ಡಬಂದನು.

ಎಲ್ಲರೂ ಬ್ರೂಟಸ್ಸನು ಹೇಳಿದಂತೆಯೇ ಆಗಲಿ ಎಂದರು.

ಮರುದಿನ ಬೆಳಗಾಯ್ತು. ಆ ಹಿಂದಿನ ರಾತ್ರಿ, ಗುಡುಗು ಸಿಡಿಲು ಮಿಂಚು ಮಳೆಗಳು ರೋಂ ನಗರವನ್ನು ನಡುಗಿಸಿಬಿಟ್ಟಿದ್ದುವು. ಅಲ್ಲಲ್ಲಿ ಸಮಾಧಿಗಳು ಬಾಯಿಬಿಟ್ಟು ಪ್ರೇತಗಳೆದ್ದು ಈಚೆಗೆ ಬಂದು ವಿಕಾರಸ್ವರದಿಂದ ಕೂಗಿ ಜನರನ್ನು ಅಂಜಿಸಿದುವು. ಆಕಾಶದಲ್ಲಿ ಮೋಡಗಳ ನಡುವೆ ಜ್ವಾಲಾಮಯರಾದ ಸೈನಿಕರು ವ್ಯೂಹಗಳನ್ನು ರಚಿಸಿಕೊಂಡು ಯುದ್ಧಮಾಡುತ್ತಿರುವಂತೆ ಕಾಣಿಸಿತು ರಕ್ತದ ಮಳೆಯಾಯಿತು. ಸೀಜರನ ಹೆಂಡಿತಿಗೆ ಸೀಜರನ ವಿಗ್ರಹಕ್ಕೆ ನೂರಾರು ತೂತು ಬಿದ್ದು ರಕ್ತವು ಹೊರಚಿಮ್ಮಿದಂತೆಯೂ, ದೊಡ್ಡಮನುಷ್ಯರು ಹಲವರು ಬಂದು ಆ ರಕ್ತಕಾರಂಜಿಯಲ್ಲಿ ಕೈತೊಳೆದುಕೊಂಡಂತೆಯೂ ಕನಸಾಗಿ, ಆಕೆಯು ಮೂರುಸಲ ಕೂಗಿಕೊಂಡಳು.

ಇಂತಹ ವಿಪರೀತಗಳಿಂದ ಸೀಜರನ ಹೆಂಡಿತಿಗೆ ಹೆದರಿಕೆಯಾಗಿ, ಆಕೆಯು "ಸೀಜರ್! ಈ ದಿನ ನೀನು ಸಭೆಗೆ ಹೋಗಬೇಡ' ಎಂದು ಬೇಡಿಕೊಂಡಳು ಸೀಜರನು "ಶಕುನಗಳು ನನಗೆ ಮಾತ್ರವೇನು? ಪ್ರಪಂಚಕ್ಕೇ ಆಗಿವೆ. ಮಡದಿ! ನೀನರಿಯೆ. ವಿಪತ್ತೂ ನಾನೂ ಇಬ್ಬರು ಒಂದೇ ಸಿಂಹದ ಹೊಟ್ಟೆಯಲ್ಲಿ ಹುಟ್ಟಿದವರು ನಾನು ಅಣ್ಣ, ಅದು ತಮ್ಮ. ಅದರಿಂದ ವಿಪತ್ತು ನನಗೆ ಹೆದರುವುದು" ಎಂದು ಸಮಾಧಾನ ಮಾಡಿದನು. ಆದರೂ ಆಕೆಯು "ದೇವ! ತಿರುಕರು ಸತ್ತಾಗ, ಧೂಮಕೇತು ಕಾಣುವುದಿಲ್ಲ. ದೊರೆಗಳ ಸಾವು ಸಮೀಪಿಸಿದಾಗ ಆಕಾಶವೆಲ್ಲ ಬೆಂಕಿಯನ್ನು ಕಾರುವುದು" ಎಂದು ಮತ್ತೆಯೂ ಹೇಳಿಕೊಂಡಳು.

ಆಕೆಯ ಪ್ರಾರ್ಥನೆಯನ್ನು ಮನ್ನಿಸಿ ಸೀಜರನು ಆ ದಿನ ಮನೆಯಲ್ಲಿಯೇ ಇರಬೇಕೆಂದು ಕೊಂಡನು ರಾಜ ಸಭೆಗೆ ಬರುವುದಿಲ್ಲವೆಂದು ಹೇಳಿಬಿಡೆಂದು ಒಬ್ಬನಿಗೆ ಅಪ್ಪಣೆಯನ್ನೂ ಮಾಡಿದನು ಆದರೆ, ಆ ಅಪ್ಪಣೆಯನ್ನು ಪಡೆದವನೂ ಪಿತೂರಿಗಾರರಲ್ಲಿ ಒಬ್ಬನು. ಇನ್ನು ತಮ್ಮ ಕಾರ್ಯವು ಕೆಟ್ಟಿತೆಂದು ಅವನು "ಸೀಜರ್! ನಿನ್ನ ಹೆಂಡಿತಿಯ ಸ್ವಪ್ನವು ಶುಭ್ರವಾದುದು. ದೇಶಕ್ಕೆ ನೀನು ಅನೇಕ ವಿಧವಾಗಿ ಹೊಸ ಚೇತನವನ್ನು ಕೊಡುವೆಯೆಂದು ಅದರ ಅರ್ಥ. ಜೊತೆಗೆ ಈ ದಿನ ನಿನಗೆ ಕಿರೀಟವನ್ನು ಒಪ್ಪಿಸಿ ರಾಜನನ್ನು ಮಾಡಬೇಕೆಂದು ಸಭೆಯವರು ಹವಣಿಸಿಕೊಂಡಿದ್ದಾರೆ. ನೀನು ಈ ದಿನ ಸಭೆಗೆ ಬರದೆ ಹೋದರೆ ಹೇಗೆ?" ಎಂದು ಅವನಿಗೆ ಏನೇನೋ ಹೇಳಿ ಅವನನ್ನು ಹೊರಡಿಸಿದನು

ಆ ಹೊತ್ತಿಗೆ ಸರಿಯಾಗಿ ಬ್ರೂಟಸ್ ಮೊದಲಾದವರೆಲ್ಲ ಬಂದರು. ಅವರು ಬಂದ ಮೇಲಂತೂ ಸೀಜರನ ನಿರ್ಧಾರವು ಬದಲಾಯಿಸಿ ಹೋಯಿತು ಸಭೆಗೆಂದು ಶೃಂಗಾರವಾಗಿ ಹೊರಟನು ತಲೆಯು ಬೀಳುವ ಕಡೆಗೆ ಕಾಲೆಳೆದುಕೊಂಡು ಹೋಗಲೇಬೇಕಲ್ಲ?

ಸೀಜರನು ಸಭಾಮಂದಿರಕ್ಕೆ ಬಂದನು. ಅವನ ಹಿಂದೆಯೇ ಪಿತೂರಿಗಾರರೂ ಬಂದರು. ದಾರಿಯಲ್ಲಿ ಯಾವನೋ ಒಬ್ಬ ಜೋಯಿಸನು ಬಂದು ಸೀಜರನಿಗೆ ಒಂದು

ಪತ್ರವನ್ನು ಕೊಟ್ಟನು. ಅದರಲ್ಲಿ ಪಿತೂರಿಯ ವಿಚಾರವೆಲ್ಲ ಬರೆದಿದ್ದಿತು ಆದರೆ ಆ ಪತ್ರವನ್ನು ಸೀಜರನು ಓದಲಿಲ್ಲ.

ಸೀಜರನು ಸಭೆಗೆ ಪ್ರವೇಶಿಸಿದನು. ಇನ್ನು ಮುಂದಿನ ಕೆಲಸವು ಆರಂಭವಾಗುವುದಕ್ಕೆ ಮುಂಚೆ ಎಂದಿನಂತೆ, "ಯಾರಾದರೂ ಅಹವಾಲು ಹೇಳಿಕೊಳ್ಳುವವರಿದ್ದಾರೆಯೋ?" ಎಂದು ಕೇಳಿದನು. ಆಗ ಪಿತೂರಿಗಾರರ ಕಡೆಯವನೊಬ್ಬನು ಬಂದು "ಸೀಜರ' ನನ್ನ ಸೋದರನನ್ನು ರಾಜ್ಯಭ್ರಷ್ಟನನ್ನು ಮಾಡಿದ್ದೀಯೆ? ದಯವಿಟ್ಟು ಅವನ ಅಪರಾಧವನ್ನು ಮನ್ನಿಸು; ಅವನನ್ನು ಬರಮಾಡಿಕೊಡು" ಎಂದು ಕಾಲು ಹಿಡಿದುಕೊಂಡನು.

ಸೀಜರನು 'ನಾನು ಈ ಮರುಳು ಮಾತುಗಳಿಗೆ ಸೋಲುವವನಲ್ಲ. ಶಿಕ್ಷೆಯನ್ನು ವಿಧಿಸಿದಾಗ ಎಷ್ಟು ಸ್ಥಿರವಾಗಿದ್ದೆನೋ ಈಗಲೂ ಅಷ್ಟೇ ಸ್ಥಿರವಾಗಿರುವೆನು" ಎಂದನು. ಅವನು "ಅಯ್ಯೋ! ಇಷ್ಟು ದೊಡ್ಡ ಸಭೆಯಲ್ಲಿ ನನಗಾಗಿ ಸೀಜರನನ್ನು ಪ್ರಾರ್ಥಿಸುವವರು ಯಾರೂ ಇಲ್ಲವೇ?" ಎಂದನು ಪಿತೂರಿಗಾರರೆಲ್ಲರೂ ಒಬ್ಬೊಬ್ಬರಾಗಿ ಸೀಜರನನ್ನು ಪ್ರಾರ್ಥಿಸಿದರು. ಸೀಜರನು 'ಆಕಾಶದ ತುಂಬ ನಕ್ಷತ್ರಗಳಿವೆ. ಎಲ್ಲವೂ ಬೆಳಗುತ್ತವೆ. ಆದರೆ ಧ್ರುವ ನಕ್ಷತ್ರವು ಮಾತ್ರ ಅಚಲವಾಗಿ ನಿಂತಿದೆ. ಹಾಗೆ ಈ ಸೀಜರನು ಅಚಲನು. ಎಲ್ಲರಂತೆ ಅವನೂ ರಕ್ತ ಮಾಂಸಗಳಿಂದ ಆಗಿದ್ದರೂ, ಅವನು ಮಾತ್ರ ಇತರರಂತೆ ಪದೇ ಪದೇ ಬದಲಾಯಿಸುವುದಿಲ್ಲ ಇನ್ನು ಒಮ್ಮೆ ಈ ದಾರ್ಢ್ಯವನ್ನು ತೋರಿಸಿಕೊಳ್ಳುತ್ತೇನೆ. ಈ ಶಿಕ್ಷೆಯನ್ನು ತಪ್ಪಿಸುವುದಿಲ್ಲ" ಎಂದನು.

ಹೀಗೆ ಮಾತನಾಡುತ್ತಿರುವಾಗ ಪಿತೂರಿಗಾರನೊಬ್ಬನು ಬಂದು ಸೀಜರನ ಮೇಲೆ ಬಿದ್ದು ತನ್ನ ಕಠಾರಿಯಿಂದ ತಿವಿದನು. ಮಿಕ್ಕವರೂ ಮೇಲೆ ಬಿದ್ದು ತಿವಿದರು. ಹಾಗೆ ಮೇಲೆ ಬಿದ್ದು ತಿವಿದವರಲ್ಲಿ ಬ್ರೂಟಸ್ಸನೂ ಇದ್ದನು ಸೀಜರನು ಅವನ ಮುಖವನ್ನು ಕಂಡು "ಏನು ಬ್ರೂಟಸ್ಸನೇ? ನಿನಗೂ ನಾನು ಬೇಡವೆ? ಹಾಗಾದರೆ ಇದ್ದೇನು ಫಲ?" ಎಂದು ಕೆಳಗೆ ಬಿದ್ದು ಪ್ರಾಣ ಬಿಟ್ಟನು. ಅವನ ಪ್ರಾಣಸ್ನೇಹಿತನಾದ ಆಂಟನಿಯು ಆಗ ಅಲ್ಲಿರಲಿಲ್ಲ ಪಿತೂರಿಗಾರನೊಬ್ಬನು ಅವನು ಅಲ್ಲಿರದಂತೆ ಎಲ್ಲಿಯೋ ಕರೆದುಕೊಂಡು ಹೋಗಿದ್ದನು.

ಬ್ರೂಟಸ್ಸನು ಮುಂದೆ ಹೆಚ್ಚು ಗಲಭೆಗಳಾಗದಂತೆ ಎಲ್ಲರನ್ನೂ ತಡೆದನು ಎಲ್ಲರೂ ಸೀಜರನ ರಕ್ತದಲ್ಲಿ ತಮ್ಮ ಕೈಗಳನ್ನು ತೊಳೆದರು. ಆ ವೇಳೆಗೆ ಆಂಟನಿಯು ಬಂದನು. ಅವನನ್ನು ಕೊಂದುಹಾಕಬಹುದೆಂಬ ಭೀತಿಯು ಅವನಿಗೆ ಇತ್ತು ಆದರೆ ಯಾರೂ ಅವನ ಮೇಲೆ ಕೈಮಾಡಲಿಲ್ಲ.




ಸೀಜರನು ಆ ದಿನ ಸಭೆಗೆ ಹೋಗಬಾರದೆಂದು ಅವನ ಹೆಂಡಿತಿಯು ಪ್ರಾರ್ಥಿಸಿದಳು.

ಆಂಟನಿಯು ಬಂದು ಬಿದ್ದು ಹೋಗಿರುವ ಸೀಜರನನ್ನು ಕಂಡು ಶೋಕಿಸಿದನು. " ವೀರವರ ! ಕೊನೆಗೆ ಇಷ್ಟೇ ಫಲವೇ ? ನಿನ್ನ ವಿಜಯಗಳು, ಕೀರ್ತಿಗಳು, ಪರಾಕ್ರಮ ಗಳು, ಎಲ್ಲವೂ ಮಣ್ಣುಪಾಲಾದವೇ ?" ಎಂದು ಬಹುವಾಗಿ ಅತ್ತು " ಅಯ್ಯಾ ? ನೀವೆ ಲ್ಲರೂ ದೊಡ್ಡಮನುಷ್ಯರ . ನನ್ನನ್ನು ಕೊಂದುಬಿಡಿ ನಾನು ಬದುಕಿರಲಾರೆ " ಎಂದು ಬೇಡಿಕೊಂಡನು

ಆಗ ಬ್ರೂಟಸ್ಸನು " ಆಂಟನಿ ! ಸೀಜರನು ರೋಮಿಗೆ ದ್ರೋಹಮಾಡುವನೆಂದು ಅವನನ್ನು ಕೊಂದೆವಲ್ಲದೆ ಅವನ ಮೇಲಿನ ದ್ವೇಷದಿಂದಲ್ಲ. ನಮಗೆ ನಿನ್ನ ಮೇಲೆಯೂ ದ್ವೇಷವಿಲ್ಲ " ಎಂದು ಸಮಾಧಾನ ಮಾಡಿದನು. ಆಂಟನಿಯು ಬಹುದೂರ ಯೋಚಿಸಿ, ತನ್ನ ಪ್ರಾಣಸ್ನೇಹಿತನ ಗಾಯಗಳಿಂದ ಇನ್ನೂ ರಕ್ತವು ಚಿಮ್ಮುತ್ತಿದ್ದಾಗಲೇ, ಅವನನ್ನು ಇರಿದವರೊಡನೆ ಸ್ನೇಹಮಾಡಿಕೊಂಡವನಂತೆ ನಟಿಸಿ, ಅವರನ್ನು ಮರುಳು ಮಾಡಿದನು. ಆ ಸ್ನೇಹದ ಭರದಲ್ಲಿ, ಬ್ರೂಟಸ್ಸನು ಕ್ಯಾಸಿಯಸ್ಸನು-ಬೇಡವೆಂದು ತಡೆದರೂ ಕೇಳದೆ-ಸೀಜರನ ಶವವನ್ನು ತೆಗೆದುಕೊಂಡು ಹೋಗಿ ಮಾರ್ಕೆಟ್ಟಿನ ಮುಂಭಾಗದಲ್ಲಿ ಜನರಿಗೆ ತೋರಿಸಲು ಆಂಟನಿಗೆ ಅಪ್ಪಣೆಯನ್ನು ಕೊಟ್ಟನು. " ಈ ಕೊಲೆಗಡಿಕರ ಮನೆಯು ಹಾಳಾಗಲಿ, ಅಯ್ಯೋ ಸೀಜರ್ ! ನಿನ್ನಂತಹವರು ಇದುವರೆಗೆ ಹುಟ್ಟಲಿಲ್ಲ : ಇನ್ನು ಹುಟ್ಟುವುದಿಲ್ಲ ನಿನ್ನಂತಹವನನ್ನು ಇರಿದು ಕೊಂದ ಈ ಕೊಲೆಪಾತಕಿಗಳಿಗೆ ಇನ್ನು ಮೇಲೆ ಶಾಂತಿಯೆಂಬುವರಿಲ್ಲದಂತಾಗಲಿ. ಇರಲಿ, ನನಗಿರುವ ವಾಚಾಲತ್ವವನ್ನು ತೋರಿಸಿ ಜನರನ್ನು ಎತ್ತಿ ಕಟ್ಟುವೆನು. ಮುಂದೆ ಏನೇನಾಗುವುದು ಎಂಬುದನ್ನು ಎಲ್ಲರೂ ನೋಡಲಿ " ಎಂದು ಶವವನ್ನು ತೆಗೆದುಕೊಂಡು ಹೋದನು

ಬ್ರೂಟಸ್ಸನು ಮೊದಲು ಜನರಿಗೆ ತಾವು ಈ ಕೆಲಸವನ್ನು ಮಾಡಿದುದೇಕೆ ಎಂಬುದನ್ನು ವಿವರಿಸಿದನು " ರೋಮನ್ನರೇ ! ದೇಶ ಬಾಂಧವರೇ ! ಸೀಜರನ ಮೇಲೆ ವಿಶ್ವಾಸವಿತ್ತು. ಆದರೆ ರೋಮಿನ ಮೇಲಿನ ಅಭಿಮಾನಕ್ಕಾಗಿ ಸೀಜರನ ಬಲಿ ಕೊಡಬೇಕಾಯಿತು. ಇಲ್ಲಿ ಸೇರಿರುವವರಲ್ಲಿ ಯಾರಾದರೂ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಇತರರನ್ನು ಪ್ರೀತಿಸುವಂತಹವನು ಇರುವನೇನು? ಇತರರ ಗುಲಾಮನಾಗುವಂತಹ ಕೀಳು ಜಾತಿಯವರಾರಾದರೂ ಇಲ್ಲಿರುವರೇನು ? ಅಂತಹವನಿಗೆ ನಾನು ದ್ರೋಹ ಮಾಡಿದ್ದೇನೆ. ರೋಮನ್ನರೆಂಬ ಅಭಿಮಾನ ವುಳ್ಳವರು ಯಾರಿಗೂ ನಾನು ದ್ರೋಹಮಾಡಿಲ್ಲ, ನಾನು ಸೀಜರನನ್ನು ಇರಿದ ಈ ಕಠಾರಿಯನ್ನು ಯಾವಾಗಲೂ ಇಟ್ಟುಕೊಂಡಿರುತ್ತೇನೆ. ಎಂದು ನಾನೂ ಅವರಂತೆ ಸ್ವಾತಂತ್ರ್ಯ ಚೋರನಾಗುವೆನೋ ಅಂದು ನನ್ನನ್ನು ನೀವು ಇದೇ ಕಠಾರಿಯಿಂದಲೇ ಇರಿದು ಕೊಂದುಬಿಡಿ " ಎಂದನು, ಅವನ ದೇಶಾಭಿಮಾನದಿಂದ ಉಜ್ವಲವಾದ ಭಾಷಣವನ್ನು ಎಲ್ಲರೂ ಮೆಚ್ಚಿಕೊಂಡು ಅವನು ಮಾಡಿದುದೇ ಸರಿ ಎಂದರು



ಸೀಜರನನ್ನು ಎಲ್ಲರೂ ಪ್ರಾರ್ಥಿಸಿದರು.

ಆಂಟನಿಯು ಸೀಜರನ ದೇಹವನ್ನು ತಂದನು ಬ್ರೂಟಸ್ಸನು ತನ್ನ ಸ್ಥಳವನ್ನು ಅವನಿಗೆ ಬಿಟ್ಟು ತಾನತ್ತ ಸರಿದನು.

ಆಂಟನಿಯು ಮಾತನಾಡುವುದಕ್ಕೆ ಆರಂಭಿಸಿದನು: "ದೇಶಬಾಂಧವರೇ! ನಾನು ಸೀಜರನನ್ನು ಹೊಗಳುವುದಕ್ಕೆ ಬಂದಿಲ್ಲ. ದಯೆಯಿಟ್ಟು ನಾನು ಹೇಳುವ ಎರಡು ಮಾತುಗಳನ್ನು ಕೇಳಿ. ಬ್ರೂಟಸ್ಸನು ದೊಡ್ಡಮನುಷ್ಯ ಆತನು ಸೀಜರನಿಗೆ ದುರಾಶೆಯಿತ್ತು ಎಂದಿದ್ದಾನೆ. ಬ್ರೂಟಸ್ಸನ ಮಾತು ಎಂದಿಗೂ ಸುಳ್ಳಲ್ಲ. ಸೀಜರನಿಗೆ ದುರಾಶೆಯಿರಬೇಕು. ಅದರಿಂದಲೇ ಇಂತಹ ದುರ್ಮರಣವು ಅವನಿಗೆ ಸಂಭವಿಸಿತು" ಎಂದು ಆರಂಭಿಸಿದನು. ಬರುಬರುತ್ತ "ಜನರೇ! ಸೀಜರನು ದೇಶದೇಶಗಳಿಂದ, ಖೈದಿಗಳನ್ನು ಹಿಡಿದು ತಂದು ಅವರಿಂದ ದಂಡವನ್ನು ತೆಗೆದುಕೊಂಡು ರೋಮಿನ ಭಂಡಾರವನ್ನು ತುಂಬಿದನು ಇದರಲ್ಲಿ ಅವನಿಗೆ ಏನು ದುರಾಶೆಯಿತ್ತೋ? ರೋಮಿನಲ್ಲಿ ಬಡವರು ಕಣ್ಣೀರಿಟ್ಟಾಗ, ಅವನ ಕಣ್ಣುಗಳು ಮುಂಗಾರ ಮೋಡದಂತೆ ನೀರು ಕರೆಯುತ್ತಿದ್ದುವು. ಆದರೇನು? ಬ್ರೂಟಸ್ಸನು ಹೇಳಿದಮೇಲೆ ಅವನಿಗೆ ದುರಾಶೆಯಿರಲೇ ಬೇಕು ಹೂ! ಹೋಗಲಿ, ದೇಶಬಾಂಧವರೇ! ನೀವೆಲ್ಲ ವೊಮ್ಮೆ ಸೀಜರನನ್ನು ಎಷ್ಟೋ ಪ್ರೀತಿಸುತ್ತಿದ್ದಿರಲ್ಲವೆ? ಅಂಥವರು ಈಗ ಅವನಿಗಾಗಿ ಎರಡು ತೊಟ್ಟು ಕಂಬನಿಯನ್ನು ಬಿಡಿಯಲಾರಿರಾ? ನಿನ್ನೆ, ಒಂದುದಿನ ಮುಂಚೆ, ಸೀಜರನ ಮಾತೆಂದರೆ ಭುವನಮಾನ್ಯವಾಗಿತ್ತು. ಈ ದಿನ ಅವನ ಹೆಣವು ದಿಕ್ಕಿಲ್ಲದ ಭಿಕಾರಿಯಾಗಿ ಇಲ್ಲಿ ಬಿದ್ದಿದೆ. ಮಹಾಜನರೇ! ನಾನು ನಿಮ್ಮನ್ನ ಬ್ರೂಟಸ್ಸಿನ ಗುಂಪಿನಮೇಲೆ ಎತ್ತಿಕಟ್ಟುತ್ತಿದ್ದೇನೆಂದುಕೊಳ್ಳಬೇಡಿ. ನನಗಂತಹ ದುರಭಿಪ್ರಾಯವಿಲ್ಲ ಕೊನೆಯದಾಗಿ ಅವನು ತಾನು ಸಾಯುವುದಕ್ಕಿಂತ ಮುಂಚೆ ಬರೆದ ಈ ಮರಣ ಶಾಸನವನ್ನು ಓದಲವಕಾಶಕೊಡಿ. ಅದರಲ್ಲಿ ಅವನು ಬಡವರಿಗಾಗಿ ಏನೇನು ಮಾಡಿದನೆಂಬುದನ್ನು ಅವನೇ ಬರೆದಿಟ್ಟಿದ್ದಾನೆ" ಎಂದು ಅವರ ಕುತೂಹಲವನ್ನು ಹೆಚ್ಚಿಸಿದನು

ಅದೇ ಸಮಯದಲ್ಲಿ ಮುಸುಕನ್ನು ತೆಗೆದು ಇನ್ನೂ ರಕ್ತವುಸುರಿಯುತ್ತಿದ್ದ ದೇಹವನ್ನು ತೋರಿಸಿದನು ಅದನ್ನು ಕಂಡು ಎಲ್ಲರಿಗೂ ಬಹು ವ್ಯಥೆಯಾಯಿತು "ಅಯ್ಯೋ! ಸೀಜರನಂತಹ ಪರಾಕ್ರಮಶಾಲಿ! ಅವನಿಗೂ ಹೀಗೆ ಆಯಿತೆ?" ಎಂದು ಎಲ್ಲರೂ ಮರ ಮರ ಮರುಗಿದರು ಹೀಗೆ ಎಲ್ಲರೂ ಮರುಕದಿಂದ ಕರಗಿ ಕಣ್ಣೀರು ಸುರಿಯುತ್ತಿರುವಾಗ ಆಂಟನಿಯು ಮರಣ ಶಾಸನವನ್ನು ಓದಿದನು. ಅದರಲ್ಲಿ "ಪ್ರತಿಯೊಬ್ಬ ರೋಮನ್ನನಿಗೂ ಎಪ್ಪತ್ತೈದು ಹೊನ್ನು, ನನ್ನ ಉಪವನಗಳಲ್ಲಿ ಜನರ ವಿಹಾರೋದ್ಯಾನಗಳಾಗಲಿ," ಎಂದು ಬರೆದಿತ್ತು ಅದನ್ನು ಕೇಳಿ ಜನರಿಗೆ ಸೀಜರನ ಮೇಲಿದ್ದ ಅಭಿಮಾನವು ಉಕ್ಕೇರಿತು. ಸೀಜರನ ಮೇಲೆ ಕೈಮಾಡಿದವರನ್ನು ಧ್ವಂಸಮಾಡಬೇಕೆಂದು ಉಗ್ರಾವತಾರಿಗಳಾಗಿ ಹೊರಟರು. ಆ ರೇಗಿದ ಗುಂಪು ಪಿತೂರಿಗಾರರನ್ನೆಲ್ಲ ಹುಡುಕಿ ಹುಡುಕಿ



ಬ್ರೂಟಸ್ಸನು ಕೈಯಿಟ್ಟಕಡೆ ಒಂದು ಕಾಗದ-ಅದರಲ್ಲಿ ಸೀಜರನನ್ನು ಮುಗಿಸು ಎಂದು ಪ್ರಾರ್ಥನೆ.

ಹೊಡೆದು ಹಾಕಿತು. ಕ್ಯಾಸಿಯಸ್, ಬ್ರೂಟಸ್ ಇಬ್ಬರು ಮಾತ್ರ ಬಹು ಕಷ್ಟಪಟ್ಟು ತಲೆ ತಪ್ಪಿಸಿಕೊಂಡು ಓಡಿದರು.

ಇಷ್ಟೆಲ್ಲ ಆಗುವುದರೊಳಗಾಗಿ ಸೀಜರನ ಸೋದರಳಿಯನಾದ ಅಕ್ಟೇವಿಯಸ್ ಸೀಜರನೂ ಬಂದನು. ಸೀಜರನಿಗೆ ಮಕ್ಕಳಿಲ್ಲವಾಗಿ ಅವನ ಆಸ್ತಿಯೆಲ್ಲ ಇವನಿಗೇ ಆಯಿತು. ಅವನೂ ಆಂಟನಿಯೂ ಲೆಪಿಯಸ್ ಎಂಬ ದಳವಾಯಿಯೂ ಮೂವರೂ ತಮಗೆ ವಿರೋಧವಾಗಿದ್ದವರನ್ನೆಲ್ಲ ಉಪಾಯವಾಗಿ ಕೊಲ್ಲಿಸಿ ರಾಜ್ಯವನ್ನು ಆಳಲು ಆರಂಭಿಸಿದರು.

ಓಡಿಹೋದ ಬ್ರೂಟಸ್ಸನೂ ಕ್ಯಾಸಿಯಸ್ಸನೂ ಸೇನೆಯನ್ನು ಸೇರಿಸಿಕೊಂಡು ರೋಮಿನ ಮೇಲೆ ಯುದ್ಧಕ್ಕೆ ಬಂದರು ಕ್ಯಾಸಿಯಸ್ಸನು ತನಗೆ ಹಣವು ಬೇಕಾಗಿ ಬಂದಾಗ ಜನರನ್ನು ಸುಲಿದನು: ತನ್ನ ಕೈಕೆಳಗಿದ್ದ ಅಧಿಕಾರಿಗಳನ್ನು ಮಾರಿದನು: ಹೀಗೆಲ್ಲ ಮಾಡಿ ಹಣವನ್ನು ಸಂಪಾದಿಸಿದರೂ ಅವನಿಗೆ ಸಾಲದು, ಇಂತಹ ಸ್ಥಿತಿಯಲ್ಲಿ ಬ್ರೂಟಸ್ಸನೂ ಹಣಕ್ಕೆ ಹೇಳಿಕಳುಹಿಸಿದನು. ತನಗೇ ಇಲ್ಲದವನು ಇನ್ನೊಬ್ಬನಿಗೆ ಕೊಡು ವುದೇನನ್ನು? ಅವನು ಇಲ್ಲವೆಂದನು. ಅದೇ ಕಾರಣವಾಗಿ ಬ್ರೂಟಸ್ಸಿಗೆ ಕೋಪಬಂತು.

ಆದರೂ ಇಬ್ಬರೂ ಒಬ್ಬರೊಬ್ಬರನ್ನು ಬಿಟ್ಟು ಯುದ್ಧಮಾಡುವ ಹಾಗಿರಲಿಲ್ಲ ಶತ್ರುಗಳ ಸೈನ್ಯ ಪ್ರಬಲವಾಗಿದ್ದುದರಿಂದ ಇಬ್ಬರೂ ಒಟ್ಟು ಸೇರಲೇಬೇಕಾಯಿತು ಇಬ್ಬರೂ ಸೇರಿದರು. ಆದರೆ ಆ ಇಬ್ಬರಿಗೂ ಮೊದಲಿದ್ದ ಅನುರಾಗವಿರಲಿಲ್ಲ ಕ್ಯಾಸಿ ಯಸ್ಸನಿಗೆ ಕೊಂಚ ಮುಂಗೋಪ ಜೊತೆಗೆ ತನಗೆ ಬೇಕಾದವನೊಬ್ಬನಿಗೆ ಬ್ರೂಟಸ್ಸನು ಶಿಕ್ಷೆವಿಧಿಸಿದ್ದನು: ತಾನು ಕಾಗದ ಬರೆದು ಕೇಳಿಕೊಂಡರೂ ಅದನ್ನು ತಪ್ಪಿಸಲಿಲ್ಲವೆಂದು ಬೇರೆ ಕೋಪವು ಬಂದಿತ್ತು.

ಇಬ್ಬರೂ ಒಬ್ಬರನ್ನೊಬ್ಬರು ಆಕ್ಷೇಪಿಸಿದರು. "ನೀನು ಲಂಚಗಳನ್ನು ತೆಗೆದು ಕೊಂಡೆ ಇನ್ನಾರಾದರೂ ಇಂತಹ ಅಪರಾಧಮಾಡಿದ್ದರೆ ಏನಾಗುತ್ತಿತ್ತು ಬಲ್ಲೆಯಾ?" ಎಂದು ಬ್ರೂಟಸ್ಸನೂ "ಇನ್ನಾರಾದರೂ ಈ ಮಾತನಾಡಿದ್ದರೆ, ತಲೆವುಳಿಯುತ್ತಿರಲಿಲ್ಲ" ಎಂದು ಕ್ಯಾಸಿಯಸ್ಸನೂ ತೂಗಾಡಿದರು ಕೊನೆಗೆ ಇಬ್ಬರೂ ಒಟ್ಟಿಗೆ ಸೇರಿ ಯುದ್ಧ ಮಾಡುವುದಾಗಿ ಗೊತ್ತು ಮಾಡಿಕೊಂಡರು

ಕ್ಯಾಸಿಯಸ್ಸನು ಶತ್ರುಗಳು ನಾವಿರುವೆಡೆಗೆ ಬರಲಿ ನಾವೇಕೆ ಅಲ್ಲಿಗೆ ಹೋಗ ಬೇಕೆಂದನು. ಬ್ರೂಟಸ್ಸನು "ಹಾಗಲ್ಲ ಈಗಾಗಲೇ ನಾವು ನಮ್ಮ ಕೈಯಲ್ಲಾಗು ವುದನ್ನೆಲ್ಲ ಮಾಡಿ ಆಗಿಹೋಗಿದೆ. ಈಗಲೇ ನಾವು ಯುದ್ಧಮಾಡಿ ಶತ್ರುವನ್ನು ಮುಗಿಸದೆ ಹೋದರೆ ಮುಂದಕ್ಕೆ ನಾವು ಉಳಿಯುವ ಸಂಭವವು ಕಡಿಮೆ ಮನುಷ್ಯ ಜೀವನದಲ್ಲಿ

ಆಂಟನಿಯು ಸೀಜರನ ಮರಣಶಾಸನವನ್ನು ಓದಿದನು

ಒಮ್ಮೊಮ್ಮೆ ಅವಕಾಶವು ಒದಗುತ್ತದೆ. ಆಗ ಅವರು ಅದನ್ನು ಉಪಯೋಗಿಸಿಕೊಂಡು ಮುಂದೆ ನುಗ್ಗದೆ ಹೋದರೆ, ಸಾಯುವವರೆಗೂ ಇದ್ದಲ್ಲಿಯೇ ಕೊಳೆಯಬೇಕಾಗುತ್ತದೆ ಈಗ ನಮಗೆ ಒದಗಿರುವ ಈ ಸಂದರ್ಭವನ್ನು ಉಪಯೋಗಿಸಿಕೊಳ್ಳದೆ ಹೋದರೆ ನಮ್ಮ ಗತಿಯೂ ಹಾಗೆಯೇ ಆದೀತು ಎಂದನು. ಕೊನೆಗೆ ಕ್ಯಾಸಿಯಸ್ಸನು ಬ್ರೂಟಸ್ಸನು ಮಾತಿಗೆ ಒಪ್ಪಿಕೊಂಡರು.

ಕ್ಯಾಸಿಯಸ್ಸನು ಹೊರಟುಹೋದ ಮೇಲೆ ಬ್ರೂಟಸ್ಸನೊಬ್ಬನೇ ಇದ್ದನು ಆಳುಗಳು ಮಲಗಿ ನಿದ್ದೆಮಾಡುತ್ತಿದ್ದರು. ಅವನಿಗೆ ನಿದ್ದೆ ಬರಲಿಲ್ಲ ಓದುವುದಕ್ಕೆ ಪುಸ್ತಕವನ್ನು ತೆಗೆದುಕೊಂಡನು. ಆಗ ಸೀಜರನ ಪ್ರೇತವು ಬಂದು ಕಾಣಿಸಿಕೊಂಡಿತು "ಬ್ರೂಟಸ ! ನಾನು ನಿನ್ನನ್ನು ಮತ್ತೆ ರಣರಂಗದಲ್ಲಿ ಕಾಣುವೆನು" ಎಂದು ಹೇಳಿ ಹೊರಟುಹೋಯಿತು.

ಬ್ರೂಟಸ್ ಕ್ಯಾಸಿಯಸ್ ಇಬ್ಬರೂ ಹೀಗೆ ಮೇಲೆ ಬಿದ್ದು ಯುದ್ಧಕ್ಕೆ ಬಂದುದು ಶತ್ರುಗಳಿಗೆ ಅನುಕೂಲವಾಯಿತು. ಒಬ್ಬರನ್ನೊಬ್ಬರು ಚೆನ್ನಾಗಿ ಮೂದಲಿಸಿದರು ಆಂಟನಿಯು "ನೀವು ನಾಯಿಗಳಂತೆ ಹಲ್ಲು ಕಿಸಿದು ಸೀಜರನ ಪಾದಕ್ಕೆ ಬಿದ್ದಿರಿ ನಿಮ್ಮ ಕಡೆಯವರು ಮೋಸಮಾಡಿ ಹಿಂದಿನಿಂದ ಸೀಜರನನ್ನು ಇರಿದರು ಬಲ್ಲಿರಾ?" ಎಂದು ಮೂದಲಿಸಿದನು. ಕ್ಯಾಸಿಯಸ್ಸನು "ಬ್ರೂಟಸ್ ! ನನ್ನಮಾತು ಕೇಳದೆ ಹೋದೆ ನನ್ನ ಇಚ್ಛೆಯಂತೆ ನಡೆದಿದ್ದರೆ ಈ ಆಂಟನಿಯು ಇಂದು ನಮ್ಮನ್ನು ಹೀಗೆ ಮೂದಲಿಸುತ್ತಿರಲಿಲ್ಲವೆ" ಎಂದನು ಹೀಗೆಯೇ ಆಕ್ಟೇವಿಯಸ್, ಆಂಟನಿ, ಬ್ರೂಟಸ್, ಕ್ಯಾಸಿಯಸ್‌ರುಗಳು ಒಬ್ಬರನ್ನೊಬ್ಬರು ಮೂದಲಿಸಿ ಯುದ್ಧಮಾಡಿದರು.

ಯುದ್ಧದಲ್ಲಿ ಸೀಜರನ ಕಡೆಯವರಿಗೆ ಜಯವಾಯಿತು. ಬ್ರೂಟಸ್ ಕ್ಯಾಸಿಯಸ್ ಇಬ್ಬರೂ ಸೋತುಹೋದರು ತಾವು ಕೈಸೆರೆ ಸಿಕ್ಕಿದರೆ ತಮ್ಮನ್ನು ರೋಮಿಗೆ ಹಿಡಿದುಕೊಂಡುಹೋಗಿ ಮೆರವಣಿಗೆಮಾಡಿ ಅವಮಾನಮಾಡುವರೆಂದು ಇಬ್ಬರೂ ತಮ್ಮನ್ನು ತಾವೇ ಇರಿದುಕೊಂಡು ಸತ್ತರು.

ಶತ್ರುಗಳು ಬಂದು ಸತ್ತುಬಿದ್ದಿದ್ದ ಇಬ್ಬರು ಶೂರರನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಗೌರವವಾಗಿ ಸಮಾಧಿಮಾಡಿದರು.

ಸೀಜರನ ಸ್ಥಾನದಲ್ಲಿ ಸೀಜರನು ಅರಸನಾದನು ಸೀಜರನ ಆಸೆಯು ಒಂದು ರೂಪದಲ್ಲಿ ಇಲ್ಲದಿದ್ದರೆ ಇನ್ನೊಂದು ರೂಪದಲ್ಲಿ ನೆರವೇರಿತು. ಬ್ರೂಟಸನೂ ಕ್ಯಾಸಿಯಸ್‌ನೂ ಮಾಡಿದ ಕಾರ್ಯವು ವಿಫಲವಾಗಿ, ಅವರಿಗೇ ಮೃತ್ಯುವಾಯಿತು

---

## ವಿಶೇಷಗಳೂ-ವಿಚಿತ್ರಗಳೂ

ಬೊರೋನ್, ಕಾರ್ಬನ್, ಎಂಬ ಎರಡು ಲೋಹಗಳನ್ನು ವಿದ್ಯುತ್ತಿನ ಸಹಾಯದಿಂದ ಒಟ್ಟಿಗೆ ಕರಗಿಸಿ ಎರಕ ಹೊಯ್ದು ಬೊರೋಲ್ ಕಾರ್ಬೈಡ್ ಎಂಬ ಹೊಸವಸ್ತುವನ್ನು ಮಾಡಿದ್ದಾರೆ ವಜ್ರವೊಂದನ್ನು ಬಿಟ್ಟರೆ ಇನ್ನಾವುದು ಇಷ್ಟು ಗಟ್ಟಿಯಿಲ್ಲ. ತೂಕದಲ್ಲಿ ಅಲ್ಯೂಮಿನಿಯಂಗಿಂತ ಹಗುರ ಮತ್ತು ಇತರ ಲೋಹಗಳಿಗಿಂತ ಕರಗುವುದು ನಿಧಾನ.

o o o

ಮನುಷ್ಯರನ್ನು ಬಿಟ್ಟರೆ ಇತರ ಪ್ರಾಣಿಗಳಲ್ಲಿ ಚಿಂಪಾಂಜಿ ಎಂಬುದೇ ಬಹಳ ಬುದ್ಧಿವಂತನಂತೆ. ಆ ಮೇಲೆ ಓರಾಂಗ್ ಓಟನ್, ಆನೆ, ಗೋರಿಲ್ಲ, ನಾಯಿ, ಬೀವರ್ ಕುದುರೆ, ಸೀಲ್, ಕರಡಿ, ಬೆಕ್ಕು ಈ ಕ್ರಮವಾಗಿ ಬರುವವಂತೆ.

o o o o o

ಇದುವರೆಗೂ ಬಣ್ಣದ ಫಿಲ್ಮ್‌ಗಳನ್ನು ಮಾಡುವುದಕ್ಕೆ ಬಲು ತೊಂದರೆಯಾಗುತ್ತಿತ್ತು. ಮ್ಯಾನೆಸ್ ಗೋಡೊವ್‌ಸ್ಕಿ ಎಂಬ ಇಬ್ಬರು ಬಹಳ ಶ್ರಮಪಟ್ಟು ಬಹು ಸುಲಭವಾಗಿ ಬಣ್ಣದ ಫಿಲಂಮಾಡುವ ಗುಟ್ಟನ್ನು ಕಂಡುಹಿಡಿದಿದ್ದಾರೆ ಈ ಪ್ರಕಾರದಲ್ಲಿ ಫಿಲಂನಲ್ಲಿ ಹೊದಿಕೆಯು ಇದ್ದು ಒಂದೊಂದರಲ್ಲಿ ಒಂದೊಂದು ಬಣ್ಣವು ಇರುವುದು. (ಹಳದಿ, ಕೆಂಪು, ನೀಲಿ, ಇವು ಮೂರು ಬಣ್ಣಗಳು ಒಂದೊಂದು ಪ್ರಮಾಣದಲ್ಲಿ ಸೇರಿ ಹೆಚ್ಚುಕಡಿಮೆಗಳಾಗುವುವು) ಮತ್ತೆ ಪ್ರಿಂಟಾಗುವಾಗ ಆ ಬಣ್ಣಗಳು ಒಟ್ಟು ಸೇರಿ ಚಿತ್ರವು ವರ್ಣಚಿತ್ರವಾಗುವುದು.

o o o o

ಈರುಳ್ಳಿಯನ್ನು ಸುಮಾರು ೬೦೦೦ ವರ್ಷಗಳ ಹಿಂದೆ ಈಜಿಪ್ಟಿನಲ್ಲಿ ಉಪಯೋಗಿಸುತ್ತಿದ್ದರಂತೆ ಅಲ್ಲಿನವರು ಹೆಣಗಳನ್ನು ಹೂಳುತ್ತಿದ್ದರು. ಆ ಹೂತ ಹೆಣಗಳ ಮೈಯ್ಯಲ್ಲಿ ಒಂದೆರಡು ಈರುಳ್ಳಿಗಳನ್ನು ಇಡುತ್ತಿದ್ದರಂತೆ. ಹಾಗೆಯೇ ಕ್ಷಯ, ವಾತ, ಮೊದಲಾದ ರೋಗಗಳಿಗೆ ಅದನ್ನು ಔಷಧವಾಗಿಯೂ ಉಪಯೋಗಿಸುತ್ತಿದ್ದರ ತೆ ಈಗ ಮತ್ತೆ ವೈದ್ಯರು ಈರುಳ್ಳಿಯನ್ನು ಪರೀಕ್ಷಿಸಿ ಅದರಲ್ಲಿ ಕ್ರಿಮಿನಾಶಕಗುಣವಿದೆಯೆಂದು ಗೊತ್ತುಮಾಡಿದ್ದಾರೆ. ಈಗ ಮತ್ತೆ ಈರುಳ್ಳಿಯು ಬಹಳ ಒಳ್ಳೆಯ ಆಹಾರವೆಂದು ವಿದ್ವಾಂಸರು ಒಪ್ಪಿದ್ದಾರೆ.

# ಶ್ರೀರಂಗಪಟ್ಟಣ

ಶ್ರೀರಂಗಪಟ್ಟಣವು ಬೆಂಗಳೂರಿಂದ ೭೫ ಮೈಲಿ ಮೈಸೂರಿಂದ ೧೦ ಮೈಲಿ ದೂರದಲ್ಲಿ, ಕಾವೇರಿಯ ನಡುಗಡ್ಡೆಯ ದ್ವೀಪದ ಮೇಲಿರುವ ಪುರಾತನ ಪಟ್ಟಣ ಪೂರ್ವ ಪಶ್ಚಿಮ ಮೂರು ಮೈಲಿ ಉದ್ದ, ದಕ್ಷಿಣೋತ್ತರ ಒಂದು ಮೈಲಿ ಅಗಲವಿರುವ ಈ ದ್ವೀಪದ ತಲೆಯಲ್ಲಿ ಪಶ್ಚಿಮದ ಮೂಲೆಯಲ್ಲಿ ಈ ಪಟ್ಟಣವಿದೆ. ಈಗ ಇಲ್ಲಿಗೆ ರೈಲಿದೆ. ಬೆಂಗಳೂರಿಂದ ಮೈಸೂರಿಗೆ ಹೋಗುವ ರೈಲು ಹಾದಿಯು ಈ ವೂರನ್ನು ಹಾಯ್ದು ಹೋಗುತ್ತದೆ

ಈ ವೂರು ಪುರಾತನವಾದುದು. ಸುಮಾರು ಹತ್ತೂವರೆ ಶತಮಾನಗಳ ಹಿಂದೆ ಗಂಗವಂಶದವರು ತಲಕಾಡಿನಲ್ಲಿ ಆಳುತ್ತಿದ್ದಾಗ ತಿರುಮಲೈಯ್ಯನೆಂಬಾತನು ಕಾಡು ಕಡಿದು ಈ ವೂರನ್ನು ಕಟ್ಟಿದನೆಂದು ತಿಳಿದುಬಂದಿದೆ. ಆದರೂ ಸ್ಥಳಪುರಾಣಾದಿಗಳಿಂದ ಈ ಕ್ಷೇತ್ರವು ಇನ್ನೂ ಪ್ರಾಚೀನವಾದುದೆಂದು ತಿಳಿದುಬರುತ್ತದೆ.

ಈ ವೂರಿನಲ್ಲಿರುವ ರಂಗನಾಥನನ್ನು ಗೌತಮ ಮಹರ್ಷಿಯು ಪೂಜೆಮಾಡಿಕೊಂಡು, ಅಲ್ಲಿಯೇ ಆಶ್ರಮವನ್ನು ಕಲ್ಪಿಸಿಕೊಂಡಿದ್ದನಂತೆ ಈಗಲೂ ಶ್ರೀರಂಗಪಟ್ಟಣದ ನೈರುತ್ಯ ಮೂಲೆಯಲ್ಲಿರುವ ಚಂದ್ರವನಕ್ಕೆ ಗೌತಮ ಕ್ಷೇತ್ರವೆಂಬ ಹೆಸರುಂಟು. ಮತ್ತು ಅಲ್ಲಿರುವ ಒಂದು ಗುಹೆಯಲ್ಲಿ ಈಗಲೂ ಗೌತಮರು ತಪಸ್ಸುಮಾಡುತ್ತಿರುವರಂತೆ! ಈಗ ಆ ಗುಹೆಯನ್ನು ಮುಚ್ಚಿಬಿಟ್ಟಿದ್ದಾರೆ.

ಕಾವೇರಿಯು ಜೀವನದಿಗಳಲ್ಲಿ ಒಂದು ಎಂದರೆ ಯಾವಾಗಲೂ ಹರಿಯುತ್ತಿರುವುದು ಅಷ್ಟೇ ಅಲ್ಲ, ದಕ್ಷಿಣ ಇಂಡಿಯದಲ್ಲಿ ಗೋದಾವರೀ ಕೃಷ್ಣಗಳನ್ನು ಬಿಟ್ಟರೆ ಇದೇ ದೊಡ್ಡದು. ಈ ನದಿಯ ಎರಡು ಪಾರ್ಶ್ವಗಳಲ್ಲಿಯೂ ಪುರಾತನವಾದ ಶೈವ ವೈಷ್ಣವ ಕ್ಷೇತ್ರಗಳಿವೆ. ವೈಷ್ಣವ ಕ್ಷೇತ್ರಗಳಲ್ಲಿ ರಂಗತ್ರಯವು ಪ್ರಸಿದ್ಧವಾದವು: ಅದರಲ್ಲಿ ಶ್ರೀರಂಗಪಟ್ಟಣದ ರಂಗನಾಥನಿಗೆ ಪಶ್ಚಿಮರಂಗನೆಂದೂ ಶಿವನಸಮುದ್ರದ ರಂಗನಾಥನಿಗೆ ಮಧ್ಯರಂಗನೆಂದೂ ಶ್ರೀರಂಗದ ರಂಗನಾಥನಿಗೆ ಪೂರ್ವರಂಗನೆಂದೂ ಈ ಮೂರು ರಂಗನಾಥರನ್ನು ನೋಡಿದವರಿಗೆ ಮುಕ್ತಿಯೆಂದೂ ಹೇಳುತ್ತಾರೆ ಆದರೆ ಈ ಪಶ್ಚಿಮ ರಂಗನ ನಾಭಿಯಿಂದ ಕಮಲವಾಗಲಿ ಸ್ವಾಮಿಯ ಕಾಲುದೆಸೆಯಲ್ಲಿ ಶ್ರೀದೇವಿ ಭೂದೇವಿಯರಾಗಲಿ ಇಲ್ಲ ಕಾಲುಕೆಳಗೆ ಇರುವವಳು ಕಾವೇರೀದೇವಿ. ಆಕೆಯು ಮಹಾವಿಷ್ಣುವನ್ನು ತನ್ನಲ್ಲಿ ಬಂದು ನೆಲಸುವಂತೆ ಪ್ರಾರ್ಥಿಸಿದಳೆಂದೂಆಕೆಯ ಪ್ರಾರ್ಥನೆಯನ್ನು

ಸಲ್ಲಿಸಲು ಮಹಾವಿಷ್ಣುವು ಬಂದು ಈ ಮೂರುಸ್ಥಳಗಳಲ್ಲಿ ರಂಗನಾಥನಾಗಿ ನೆಲಸಿದ ನೆಂದೂ ವದಂತಿ.

[ಈ ಕಾವೇರೀನದಿಯನ್ನು ಕುರಿತು ಮಹಾಭಾರತದಲ್ಲಿಯೂ ಭಾಗವತದಲ್ಲಿಯೂ ಹೇಳಿರುವುದುಂಟು. ಕಾವೇರೀ ತೀರದಲ್ಲಿ ಒಂದು ಹಳ್ಳದಲ್ಲಿ ಅಜಗರನೆಂಬ ಜ್ಞಾನಿ ಯಿದ್ದನಂತೆ. ಪ್ರಹ್ಲಾದನು ಆತನನ್ನು ನೋಡುವುದಕ್ಕೆ ಬಂದಿದ್ದನಂತೆ. ಈ ಕಾವೇರಿಗೆ ಮರುದ್ವೃಧೆಯೆಂದು ಹೆಸರು. ಎಂದೂ ತಿಳಿದೂ ಬರುತ್ತದೆ]

ಹೀಗೆ ರಂಗನಾಥಸ್ವಾಮಿಯ ಆವಾಸ ಕ್ಷೇತ್ರವಾಗಿದ್ದ ದ್ವೀಪವು ಕಾಡುಬೆಳೆದು ಹೋಗಿತ್ತು. ಅಲ್ಲಿ ಕಾಡುಕಡಿದು ತಿರುಮಲೈಯ್ಯನು ಊರನ್ನು ಕಟ್ಟಿದನು. ಹೀಗೆ ಆ ವೂರು ಇರುವಾಗ ರಾಮಾನುಜಾಚಾರ್ಯರು ಚೋಳದೇಶದಿಂದ ಅಲ್ಲಿನ ಶೈವರಾಜನ ಬಾಧೆಯನ್ನು ತಡೆಯಲಾರದೆ ಓಡಿಬಂದು ಈ ರಾಜ್ಯದಲ್ಲಿ ನಿಂತರು. ಆಗ ಈ ದೇಶದ ಒಡೆಯನಾಗಿದ್ದ ಹೊಯ್ಸಳರಾಜನು ಇವರ ಭಕ್ತನಾಗಿ ತನ್ನ ಜೈನಮತವನ್ನು ಬಿಟ್ಟು ಇವರ ವೈಷ್ಣವ ಮತವನ್ನು ಅಂಗೀಕರಿಸಿದನು ಆತನು ಶ್ರೀರಂಗಪಟ್ಟಣದ ಸುತ್ತ ಮುತ್ತಲಿನ ಸೀಮೆಯನ್ನೆಲ್ಲ ಸೇರಿಸಿ ಅಷ್ಟಗ್ರಾಮವೆಂಬ ಹೆಸರಿನಿಂದ ಇವರಿಗೆ ಧಾರೆ ಯೆರೆದುಕೊಟ್ಟನು. (ಈಗಲೂ ಶ್ರೀರಂಗಪಟ್ಟಣದ ಸುತ್ತಮುತ್ತಲಿಗೆ ಇನ್ನು ಆ ಹೆಸರು ಉಂಟು) ಆಗ ಸುಮಾರು ರಂಗನಾಥನು ಶ್ರೀ ವೈಷ್ಣವನಾಗಿ ತಿರುನಾಮಧಾರಿಯಾದನು ಈಗಲೂ ಈ ವೂರಿನಲ್ಲಿ ಶ್ರೀವೈಷ್ಣವರು ಬಹಳ.

ಅಲ್ಲಿಂದ ಮುಂದೆ ಹೊಯ್ಸಳರ ರಾಜ್ಯಲಕ್ಷ್ಮಿಯು ವಿಜಯನಗರದವರನ್ನು ಸೇರಿ ದಳು ಅವರು ಈ ದಕ್ಷಿಣದೇಶವನ್ನೆಲ್ಲ ಕೃಷ್ಣಾಯವರೆಗೂ ಆಕ್ರಮಿಸಿ ಸಾಮ್ರಾಜ್ಯವನ್ನು ಸ್ಥಾಪಿಸಿದರು ನಾಗಮಂಗಲದಲ್ಲಿ ಆ ರಾಜರ ಕಡೆಯ ದಣ್ಣಾಯಕ (ದಂಡನಾಯಕ) ನಾಗಿದ್ದ ತಿಮ್ಮಣ್ಣನು ಈ ಶ್ರೀರಂಗಪಟ್ಟಣವನ್ನು ಹಿಡಿದು ಸಾಧಿಸಿ ಈ ವೂರನ್ನು ವಿಸ್ತರಿಸಿ ದನು ಆಗಿನ ಕಾಲದಲ್ಲಿ ಶ್ರೀರಂಗಪಟ್ಟಣ ಮೈಸೂರುಗಳ ನಡುವೆ ಕಲಸವಾಡಿಯೆಂಬ ನಗರವಿತ್ತು. ಅಲ್ಲಿ ಪ್ರಸಿದ್ಧವಾದ ಜೈನ ದೇವಾಲಯಗಳಿದ್ದುವು. ಅಲ್ಲಿದ್ದ ೧೦೧ ಜೈನ ಮಂದಿರಗಳನ್ನು ಒಡೆದು ತಂದು ಈ ತಿಮ್ಮಣ್ಣನು ಶ್ರೀರಂಗಪಟ್ಟಣದಲ್ಲಿ ದೇವಸ್ಥಾನ ಗಳನ್ನು ಕಟ್ಟಿಸಿದನು. ಅಲ್ಲಿ ಅವನಿಗೆ ಒಂದು ನಿಧಿಯು ಸಿಕ್ಕಿತೆಂದೂ ಅದನ್ನು ಉಪ ಯೋಗಿಸಿ ಅವನು ಅಲ್ಲಿ ಒಂದು ಕೋಟೆಯನ್ನು ಕಟ್ಟಿದನೆಂದೂ ಹೇಳುತ್ತಾರೆ

ಅನಂತರ ಶ್ರೀರಂಗಪಟ್ಟಣಕ್ಕೆ ವೈಭವದ ಕಾಲವು ಬಂದಿತು. ಸುತ್ತಲೂ ನದಿ ಯಿರುವುದರಿಂದ ಆ ಕೋಟೆಯು ಶತ್ರುಗಳಿಗೆ ಅಸಾಧ್ಯವೆಂದು ವಿಜಯನಗರದ ರಾಯ ಭಾರಿಯು ಆ ವೂರಿಗೆ ಬಂದು ನೆಲಸಿದನು. ನೂರಾರು ವರ್ಷಗಳು ಈ ನಗರವು ಬೆಳೆದು ವಿಜಯನಗರದ ಕಾಲದಲ್ಲಿ ಪ್ರಸಿದ್ಧವಾದ ನಗರಗಳಲ್ಲಿ ಒಂದಾಗಿತ್ತು. ಮುಂದೆ ವಿಜಯ

ನಗರದ ರಾಜವಂಶಕ್ಕೆ ಸೇರಿದ ಶ್ರೀರಂಗರಾಯರೂ ಇಲ್ಲಿಯೇ ನಿಂತರು. ಇವರ ವಂಶಸ್ಥನಾದ ತಿರುಮಲರಾಜನು ೧೬೧೦ ರಲ್ಲಿ ಪ್ರಾಬಲ್ಯಕ್ಕೆ ಬರುತ್ತಿದ್ದ ಮೈಸೂರಿನ ರಾಜಒಡೆಯರಿಗೆ ಈ ನಗರವನ್ನೂ ಸುತ್ತುಮುತ್ತಿನ ಅಧಿಕಾರವನ್ನೂ ಒಪ್ಪಿಸಿ ತಾನು ತಲೆಕಾಡಿಗೆ ಹೊರಟುಹೋದನು.

ಅನಂತರ ಶ್ರೀರಂಗಪಟ್ಟಣಕ್ಕೆ ನವಯೌವ್ವನವು ಆರಂಭವಾಯಿತೆನ್ನಬಹುದು. ಕೋಟೆಯು ಬಲಿಯಿತು ಒಳಗೆ ಅರಮನೆ, ಗುರುಮನೆ, ದೇವಾಲಯಾದಿಗಳು ಹೆಚ್ಚಿದುವು. ಊರಿನ ಗೌರವವು ಹೆಚ್ಚಿತು. ಮೈಸೂರು ಅರಸರು ರಾಜ್ಯವನ್ನು ವಿಸ್ತರಿಸುತ್ತ ಬಂದಂತೆಲ್ಲ ಶ್ರೀರಂಗಪಟ್ಟಣದ ಐಶ್ವರ್ಯವೂ ಬೆಳೆಯುತ್ತ ಬಂದಿತು.

ಕಂಠೀರವ ನರಸಿಂಹರಾಜ ಒಡೆಯರ ಕಾಲದಲ್ಲಿ ಬೀಜಾಪುರದ ದಳವಾಯಿ ರಣದುಲ್ಲಾಖಾನನು ಬಂದು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದನು ಅವನ ಸಾಹಸವು ಏನೂ ಫಲವಾಗದೆ ಅವನು ನಷ್ಟಪಟ್ಟು ಮುತ್ತಿಗೆಯನ್ನು ಬಿಟ್ಟು ಹೊರಟು ಹೋಗಬೇಕಾಯಿತು ನಾಗಮಂಗಲದ ತಿಮ್ಮಣ್ಣನದು ಮೊದಲನೆಯ ಮುತ್ತಿಗೆ. ರಣದುಲ್ಲಾಖಾನದು ಎರಡನೆಯ ಮುತ್ತಿಗೆ ಈ ಎರಡನೆಯ ಮುತ್ತಿಗೆಯ ಕಾಲದಲ್ಲಿ ನಡೆದುದು ಎಂದು ಹೇಳುವ ಒಂದು ಕಥೆಯು ವಿಚಿತ್ರವಾಗಿದೆ.

ರಣದುಲ್ಲಾಖಾನನು ಒಂದು ರಾತ್ರಿಯಲ್ಲಿ ಕೋಟೆಯನ್ನು ಏರಿ ಒಳಕ್ಕೆ ಬರಲು ಯತ್ನಿಸಿದನಂತೆ. ಆಗ ಸಿಂಹದ ಮುಖವಿದ್ದ ಸೈನಿಕರು ಅನೇಕರು ಬಂದು ಅವನ ಸೇನೆಯನ್ನೆಲ್ಲ ಧ್ವಂಸಮಾಡಿಬಿಟ್ಟರಂತೆ. ಈ ವಿಚಿತ್ರವನ್ನು ನೋಡಿ ಹೆದರಿದ ಖಾನನು ಹೇಳದೆ ಕೇಳದೆ ಹೊರಟುಹೋದನಂತೆ

[ಕಂಠೀರವ ಒಡೆಯರು ನರಸಿಂಹದೇವರ ಭಕ್ತರು ಬಹಳ ಶ್ರದ್ಧಾಭಕ್ತಿಗಳಿಂದ ಆ ದೇವರನ್ನು ಪೂಜಿಸುತ್ತಿದ್ದವರು ಅವರು ಕಟ್ಟಿಸಿದ ನರಸಿಂಹದೇವರ ಗುಡಿಯು ಈಗಲೂ ಶ್ರೀರಂಗಪಟ್ಟಣದಲ್ಲಿದೆ. ಅಲ್ಲಿ ಕಂಠೀರವ ರಾಜರ ಕಲ್ಲಿನ ಪ್ರತಿಮೆಯೂ ಇದೆ

ಈ ನರಸಿಂಹದೇವರ ಗುಡಿಯಲ್ಲಿ ಒಂದು ನರಸಿಂಹ ಯಂತ್ರವಿದ್ದಿತಂತೆ ಆ ಯಂತ್ರವು ಅಲ್ಲಿ ಭದ್ರವಾಗಿರುವವರೆಗೂ ಯಾರೂ ಶ್ರೀರಂಗಪಟ್ಟಣವನ್ನು ಗೆದ್ದುಕೊಳ್ಳಲು ಸಾಧ್ಯವಾಗಲಿಲ್ಲವೆಂದೂ, ಟಿಪ್ಪೂಸುಲ್ತಾನನು ಆ ನರಸಿಂಹದೇವರ ಗುಡಿಯ ಗೋಪುರವನ್ನು ಒಡೆಸಿದಾಗ ಆ ಯಂತ್ರವು ನಾಶವಾಗಿ ಹೋಯಿತೆಂದೂ ಅಂದಿನಿಂದ ಶ್ರೀರಂಗಪಟ್ಟಣದ ಏಳ್ಗೆಯೇ ಹೋಯಿತೆಂದೂ ಹೇಳುತ್ತಾರೆ.

ಖಾನನು ಬಂದು ಹೋದಮೇಲೆ ಇತರರೂ ಇತ್ತಕಡೆ ದಾಳಿಯಿಡುವುದಕ್ಕೆ ಮೊದಲು ಮಾಡಿದರು. ಕೆಳದಿಯ ಅರಸನಾಗಿ ಪಶ್ಚಿಮಘಟ್ಟಗಳ ಸುತ್ತಮುತ್ತಿನ

ರಾಜ್ಯವನ್ನೆಲ್ಲ ಆಳುತ್ತಿದ್ದ ಶಿವಪ್ಪನಾಯಕನ ದಂಡೂ ಬಂದು ಶ್ರೀರಂಗಪಟ್ಟಣವನ್ನು ಮುತ್ತಿತು. ಅವರೂ ಮೈಸೂರು ಸೇನೆಯ ಪ್ರಭಾವವನ್ನು ಅನುಭವಿಸಿ ಹಿಂದಿರುಗಿದರು. ಆಗ ಅರಸನಾಗಿದ್ದ ಕಂಠೀರವರು ಹೊರಗಿನವರು ಬರುತ್ತಿರುವುದನ್ನು ನೋಡಿ ಕೋಟೆಯನ್ನು ಬಲಪಡಿಸಿ, ಶತ್ರುಗಳು ಮುತ್ತಿಗೆ ಹಾಕಿ ನಿಂತರೂ ಕೋಟೆಯು ಪರಭಾರಿಯಾಗದಂತೆ ಇರುವುದಕ್ಕೆ ಏನೇನು ಬೇಕೋ ಅದನ್ನೆಲ್ಲ ಮಾಡಿದರು.

ಇದಾದ ಸುಮಾರು ೨೫ ವರ್ಷಗಳ ಮೇಲೆ ಮಹಾರಾಷ್ಟ್ರರು ದಂಡೆತ್ತಿಬಂದು ಮುತ್ತಿಗೆಯನ್ನು ಹಾಕಿದ್ದರು. ಅವರ ಕೈಯ್ಯೂ ಸಾಗಲಿಲ್ಲ. ಹೀಗೆ ಸುಮಾರು ನಲವತ್ತು ವರ್ಷಗಳೊಳಗೆ ಶ್ರೀರಂಗಪಟ್ಟಣದ ಮೇಲೆ ಶತ್ರುಗಳು ನಾಲ್ಕುಸಲ ದಂಡೆತ್ತಿ ಬಂದಿದ್ದರು. ಅವರು ಯಾರೂ ಈ ಪಟ್ಟಣವನ್ನು ಸಾಧಿಸಲಾಗಲಿಲ್ಲ ಅಲ್ಲಿಂದ ಮುಂದೆ ಐವತ್ತು ವರ್ಷಗಳವರೆಗೂ ಯಾರೂ ಇತ್ತ ಕಡೆಬರಲಿಲ್ಲ.

೧೭೪೨ರಲ್ಲಿ ಆರ್ಕಾಟಿನ ನವಾಬನು ಶ್ರೀರಂಗಪಟ್ಟಣವನ್ನು ಹಿಡಿಯಲೇಬೇಕೆಂದು ಸರ್ವಸನ್ನಾಹದೊಡನೆ ಬಂದು ಮುತ್ತಿದನು. ಆದರೆ ಅವನ ಇಷ್ಟವು ಸಿದ್ಧಿಸಲಿಲ್ಲ ಅವನು ಮುತ್ತಿಗೆ ತೆಗೆದು ಹಿಂದಕ್ಕೆ ಹೋಗಬೇಕಾಯಿತು.

ಈ ವೇಳೆಗೆ ಶ್ರೀರಂಗಪಟ್ಟಣವು ಬೆಳೆಯುತ್ತ ಬಂದಿತು. ಊರು ವಿಸ್ತಾರವಾಗಿ ಕೋಟೆಯ ಹೊರಗೆ ದ್ವೀಪದ ಪೂರ್ವಭಾಗದ ಕೊನೆಯಲ್ಲಿ ಗಂಜಾಂ ಎಂಬ ಹೊಸನಗರವೊಂದು ಹುಟ್ಟಿತು. ಗಂಜಾಂಗೂ ಪಟ್ಟಣಕ್ಕೂ ನಡುವೆ ಈಗ ದರಿಯಾ ದೌಲತ್ತು ಇರುವ ಕಡೆ ಪೇಟೆಯೊಂದು ಹುಟ್ಟಿತು ಒಟ್ಟಿನಲ್ಲಿ ವ್ಯಾಪಾರ ಸಾಪಾರಗಳು ಬೆಳೆದು ಈ ಶ್ರೀರಂಗಪಟ್ಟಣದಲ್ಲಿ ಒಟ್ಟು ೩ ಲಕ್ಷ ಜನರವರೆಗೆ ಇದ್ದರಂತೆ. ಕೋಟೆಯಲ್ಲಿ ಮನೆಗಳು ದೊಡ್ಡವಾಗಿದ್ದರೂ ಸಂದಿಗೊಂದಿಗಳಾಗಿದ್ದಿತಂತೆ ಆದರೆ ಪೇಟೆಯೂ ಗಂಜಾಂ ಪಟ್ಟಣವೂ ಬಹಳ ಸುಂದರವಾಗಿ ಅಂದಚೆಂದಗಳಿಂದ ಕಂಗೊಳಿಸುತ್ತಿದ್ದುವಂತೆ!

ಆರ್ಕಾಟುನವಾಬನು ಬಂದ ಸುಮಾರು ೨೦ ವರ್ಷಗಳ ವರೆಗೆ ಶ್ರೀರಂಗಪಟ್ಟಣವು ಸುರಕ್ಷಿತವಾಗಿತ್ತು. ಮುಂದೆ ೧೭೫೫ ರಲ್ಲಿ ದಖನ್ನಿನ ಸುಬೇದಾರನಾಗಿದ್ದ ಹೈದರಾಬಾದಿನ ನೈಜಾಮನು ಫ್ರೆಂಚರ ಸಹಾಯದೊಡನೆ ಬಂದು ಪಟ್ಟಣವನ್ನು ಮುತ್ತಿದನು ಆಗಲೂ ಸೈನ್ಯವು ರಾಜಧಾನಿಯಲ್ಲಿರಲಿಲ್ಲ ತಿರುಚನಾಪಳ್ಳಿಯ ಕಡೆ ಹೋಗಿಬರುವುದರೊಳಗಾಗಿ ರಾಜಧಾನಿಯು ಶತ್ರುಗಳ ವಶವಾಗುವ ಚಿನ್ಹೆಗಳು ತೋರಿದುವು. ಅದರಿಂದ ಅವನಿಗೆ ೫೬ ಲಕ್ಷ ರೂಪಾಯಿ ಕೊಟ್ಟು ಸಂಧಿಮಾಡಿಕೊಂಡರು. ಸರಕಾರದ ಖಜಾನೆಯಲ್ಲಿ ಹಣವಿರಲಿಲ್ಲ. ಅದಕ್ಕಾಗಿ ಅರಮನೆಯ ಒಡವೆಗಳನ್ನೂ ಜೊತೆಗೆ ದೇವಸ್ಥಾನದ ಒಡವೆ ವಸ್ತುಗಳನ್ನೂ ಅಡಹಿಟ್ಟು ಇಪ್ಪತ್ತು ಲಕ್ಷ ಹಣವಾಗಿ ಕೊಟ್ಟು ಉಳಿದ ಹಣಕ್ಕೆ ಪತ್ರಗಳನ್ನು ಬರೆದುಕೊಟ್ಟರು.

ಮತ್ತೆರಡು ವರ್ಷಗಳೊಳಗಾಗಿ ಬಾಲಾಜಿರಾಯನೆಂಬ ಮರಾಟಿ ಸರದಾರನು ಫರಂಗಿ ಸೈನ್ಯದ ಸಹಾಯದೊಡನೆ ಬಂದು ಮುತ್ತಿದನು. ಆಗ ಅವನಿಗೆ ೩೨ ಲಕ್ಷವನ್ನು ಕೊಡಬೇಕಾಯಿತು ಎಲ್ಲಿಯೂ ನಗದು ಹಣವಿರಲಿಲ್ಲ ಅದಕ್ಕಾಗಿ ನಗದಾಗಿ ೫ ಲಕ್ಷ ವನ್ನು ಮಾತ್ರ ಕೊಟ್ಟು ಉಳಿದ ಹಣಕ್ಕೆ ೧೪ ತಾಲ್ಲೋಕುಗಳನ್ನು ಅಡವಿಟ್ಟರು. ಮರಾಟರು ಅಲ್ಲಿಗೇ ಬಿಡಲಿಲ್ಲ ಮತ್ತೆಯೂ ಗೋಪಾಲಹರಿ ಎಂಬ ಸರದಾರನ ಕೈಕೆಳಗೆ ಬಂದು ಮುತ್ತಿಗೆ ಹಾಕಿನಿಂತರು. ಆಗ ಶ್ರೀರಂಗಪಟ್ಟಣದಲ್ಲಿ ಹೈದರನು ಮುಂದಕ್ಕೆ ಬಂದಿದ್ದನು ಮರಾಟಿಯವರೊಡನೆ ಸಂಧಿಮಾಡುವ ಕೆಲಸವು ಅವನಿಗೆ ಬಿತ್ತು. ಅವನು ಮರಟರನ್ನು ಉಪಾಯದಿಂದ ಒಪ್ಪಿಸಿ ಹಿಂದಿನ ಬಾಕಿ ಸಮೇತ ೩೨ ಲಕ್ಷಕ್ಕೆ ಒಪ್ಪಿಸಿದನು ಆಗಲೂ ಅರಮನೆಯ ಭಂಡಾರದಲ್ಲಿ ಹಣವಿರಲಿಲ್ಲ ಅದರಿಂದ ಅರಮನೆಯ ಅಧಿಕಾರಿಗಳು, ರಾಜಧಾನಿಯ ಸಾಹುಕಾರರು ಎಲ್ಲರೂ ಸೇರಿ ಹದಿನಾರು ಲಕ್ಷವನ್ನು ಕೂಡಿಸಿದರು ಉಳಿದ ೧೬ ಲಕ್ಷವನ್ನು ಹೈದರನು ತಾನೇ ಸ್ವಂತವಾಗಿ ಸಾಲ ಮಾಡಿತಂದುಕೊಟ್ಟನು. ಅಂತೂ ಮರಾಟಿಯವರು ಹಿಂತಿರುಗಿದರು

ಹೀಗೆ ಪಟ್ಟಣವನ್ನು ಉಳಿಸಿದ ಹೈದರನೇ ಪಟ್ಟಣಕ್ಕೆ ಮುತ್ತಿಗೆ ಹಾಕುವ ಸಂಭವವು ಒದಗಿತು ಪ್ರಬಲನಾಗುತ್ತಿರುವ ಹೈದರನ ಮೇಲಿನ ಅಸೂಯೆಯಿಂದ ಆಗಿನ ರಾಜಾಧಿಕಾರಿಗಳು ಅವನಿಗೆ ವಿರೋಧವಾಗಿ ಪಿತೂರಿನಡೆಸಿದರು. ಹೈದರನಿಗೆ ಈ ಪಿತೂರಿಯು ತಿಳಿಯಿತು ಕೂಡಲೇ ತನ್ನವರೊಡನೆ ಬಂದು ಹೈದರನೇ ಪಟ್ಟಣವನ್ನು ಆಕ್ರಮಿಸಿಕೊಂಡನು

ಇಷ್ಟೆಲ್ಲಾ ಒದ್ದಾಟಗಳಲ್ಲಿ ಪಟ್ಟಣವು ಕಂದಿಹೋಯಿತು ಬೆಳೆಯುತ್ತಿದ್ದುದು ಸೊರಗಿಹೋಯಿತು. ಕೋಟೆಯ ಜೊತೆಗೆ ಬೆಳೆದಿದ್ದ ಷಹರ ಗಂಜಾಂ ನಗರವು ದಕ್ಷಿಣ ಇಂಡಿಯದ ಅತ್ಯಂತ ಸೊಬಗಿನ ನಗರಗಳಲ್ಲಿ ಒಂದಾಗಿತ್ತಂತೆ ಅಲ್ಲಿ ಈಗ ದರಿಯಾ ದೌಲತ್ತಿರುವ ಭಾಗದಲ್ಲಿ ಇದ್ದ ಪೇಟೆಯ ಭಾಗವೆಲ್ಲವೂ ಪಾಳುಬಿದ್ದುಹೋಯಿತು. ವ್ಯಾಪಾರದ ಬಹುಭಾಗವು ಬಿದ್ದುಹೋಯಿತು ಆದರೂ ಮುಂದೆ ಸುಲ್ತಾನನ ಕಾಲದಲ್ಲಿಯೂ ಒಂದೂವರ ಲಕ್ಷ ಪ್ರಜೆಯಿದ್ದು, ಈಗಿನ ಬೆಂಗಳೂರು ಪಟ್ಟಣದಷ್ಟು ಇತ್ತು ಈ ವೂರು

ಮುಂದೆ ಹತ್ತುವರ್ಷಗಳನಂತರ ಮರಾಟರು ಮತ್ತೆಬಂದರು ಈ ಸಲ ತ್ರಯಂಬಕರಾಯನು ಬಂದು ಚಿನುಕುರುಳಿಯಲ್ಲಿ ಹೈದರನನ್ನು ಸೋಲಿಸಿ, ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದನು. ಮುತ್ತಿಗೆಯು ಹದಿನೈದು ತಿಂಗಳು ನಡೆಯಿತು ಕೊನೆಗೆ, ಅವನು ೧೫ ಲಕ್ಷ ಸಾಲವನ್ನು ಹೊತ್ತುಕೊಂಡು ಹೋದನು.

ಮುಂದೆ ಬ್ರಿಟಿಷರ ದಂಡುಬಂದು ೧೭೯೨ ರಲ್ಲಿ ಬಂದು ಮುತ್ತಿಗೆ ಹಾಕಿತು. ಈ ಸಲಕ್ಕೆ ಹೈದರನು ಇರಲಿಲ್ಲ ಟಿಪ್ಪುಸುಲ್ತಾನನು ಅಧಿಕಾರಕ್ಕೆ ಬಂದಿದ್ದನು. ಅವನು

ಎಷ್ಟು ಸಾಹಸಪಟ್ಟರೂ ಇಂಗ್ಲಿಷರನ್ನು ಎದುರಿಸಲಾಗಲಿಲ್ಲ. ಕೊನೆಗೆ ಸೋಲನ್ನು ಒಪ್ಪಿಕೊಂಡು ಮೂರುಕೋಟಿ ರೂಪಾಯಿ ಕೊಡುವುದಾಗಿ ಗೊತ್ತುಮಾಡಿಕೊಂಡು ಇದ್ದಷ್ಟು ಹಣವನ್ನು ಕೊಟ್ಟು ಉಳಿದುದಕ್ಕೆ ತನ್ನ ಮಕ್ಕಳನ್ನೇ ಅಡುವಾಗಿ ಕೊಟ್ಟನು.

ಮತ್ತೆ ಏಳುವರ್ಷಗಳ ನಂತರ ಬ್ರಿಟಿಷರ ದಂಡು ಬಂದಿತು. ಈ ಸಲ ಶ್ರೀರಂಗಪಟ್ಟಣವು ವುಳಿಯಲಿಲ್ಲ. ಪಟ್ಟಣದ ಜೊತೆಯಲ್ಲಿ ಸುಲ್ತಾನನೂ ಅಳಿದನು. ಒಂದು ದಿನದವರೆಗೂ ಪಟ್ಟಣವು ಸೂರೆಯಾಯಿತು. ಆ ಕೊಳ್ಳೆಯಲ್ಲಿ ೧೬ ಲಕ್ಷ ಪೌಂಡು ಎಂದರೆ ಸುಮಾರು ಎರಡು ಕೋಟಿ ದ್ರವ್ಯವನ್ನು ಸೈನಿಕರು ಹಂಚಿಕೊಂಡರಂತೆ. ಆ ಕೊಳ್ಳೆಯಲ್ಲಿ ಸುಲ್ತಾನನು ಮಾಡಿಸಿದ್ದ ವ್ಯಾಘ್ರಾಸನವೂ ಶತ್ರುಗಳ ಪಾಲಾಯಿತು.

ಸುಲ್ತಾನನು ಗಂಜಾಂಗೂ ಕೋಟೆಗೂ ನಡುವಿದ್ದ ಪೇಟೆಯ ಭಾಗದಲ್ಲಿ ಶತ್ರುಗಳ ದಂಡು ನಿಂತಿತ್ತೆಂದು ಅದನ್ನು ಒಡೆಸಿಹಾಕಿ ಅಲ್ಲಿ ದರಿಯಾ ದೌಲತ್ತು ಎಂಬ ಅರಮನೆಯನ್ನು ಕಟ್ಟಿಸಿದನು. ಬೇಸರವಾದಾಗ ಅಲ್ಲಿಗೆ ಹೋಗಿ ಇರುತ್ತಿದ್ದನು. ಆ ಅರಮನೆಗೆ ಎದುರಾಗಿಯೇ ತನ್ನ ತಂದೆಯ ತಾಯಿಯ ಗೋರಿಗಳನ್ನು ಕಟ್ಟಿಸಿದನು

ದರಿಯಾದೌಲತ್ ಅರಮನೆಯು ಎತ್ತರವಾದ ಜಗಲಿಯ ಮೇಲೆ ಚಚ್ಚೌಕವಾಗಿ ಕಟ್ಟಿರುವ ಕಟ್ಟಡದ ಒಳಗೆ ಹೊರಗೆ ಗೋಡೆಗಳ ಮೇಲೆಲ್ಲ ಚಿತ್ರಗಳನ್ನು ಬರೆದಿದ್ದಾರೆ, ಒಂದುಕಡೆ ಬೇಲಿಯು ಸೋತಚಿತ್ರವನ್ನು ಬರೆದಿದೆ ಅಲ್ಲಿರುವ ಚಿತ್ರಗಳು ಅಂದವಾಗಿಯೂ ಮನೋಹರವಾಗಿಯೂ ಇವೆ

ಶ್ರೀರಂಗಪಟ್ಟಣದಲ್ಲಿ ಭಾರಿಯ ಮನೆಗಳು ಇದ್ದರೂ ವೂರು ಮಾತ್ರ ಸಂದಿಗೊಂದಿಗಳಾಗಿತ್ತಂತೆ. ಪೇಟೆಯು ಹಾಗಿರದೆ ವಿಶಾಲವಾಗಿ ಬಹಳ ಸೊಗಸಾಗಿದ್ದಿತಂತೆ ಶ್ರೀರಂಗಪಟ್ಟಣದ ಕೋಟೆಯು ಬಹುಭದ್ರವಾಗಿತ್ತು ಎರಡುಕಡೆಗಳಲ್ಲಿ ನದಿ ಕೋಟೆಯ ಗೋಡೆಯ ಸುತ್ತಲೂ ಆಳವಾದ ಕಂದಕ ಇದ್ದು ಶತ್ರುಗಳಿಗೆ ಅಸಾಧ್ಯವಾಗಿತ್ತು. ಭರತಪುರದ ಕೋಟೆಯನ್ನು ಬಿಟ್ಟರೆ ಇಂಡಿಯಾದಲ್ಲಿ ಇನ್ನಾವ ಕೋಟೆಯೂ ಇಷ್ಟು ಬಲವಾಗಿರಲಿಲ್ಲವೆಂದು ಅನೇಕ ಬ್ರಿಟಿಷ್ ದಳವಾಯಿಗಳು ಹೇಳಿದ್ದಾರೆ

೧೭೯೯ರ ಮುತ್ತಿಗೆಯಲ್ಲಿ ಕೋಟೆಯು ಹೋಯಿತು ಇಂಗ್ಲೀಷರು ಅದನ್ನು ತಾವೇ ಇಟ್ಟುಕೊಂಡರು ಆ ಪಟ್ಟಣವು ಸುಮಾರು ಹತ್ತು ವರುಷಗಳವರೆಗೆ ಬ್ರಿಟಿಷರ ದಂಡಿನ ಶಿಬಿರವಾಗಿತ್ತು. ಅಲ್ಲಿ ಬರುಬರುತ್ತ ಜ್ವರವು ತಲೆದೋರಿ ಶಿಪಾಯಿಗಳಿಗೆ ಹಿಂಸೆಯಾಯಿತಾಗಿ ಅವರು ಅಲ್ಲಿಂದ ಬೆಂಗಳೂರಿಗೆ ಹೊರಟುಬಂದರು

ಆ ಮುತ್ತಿಗೆಯಾದ ಮೇಲೆ ಶ್ರೀರಂಗಪಟ್ಟಣವು ತಲೆಯೆತ್ತಲಿಲ್ಲ. ಸುಲ್ತಾನನ ಕಾಲದಲ್ಲಿ ಒಂದೂವರೆ ಲಕ್ಷವಿದ್ದ ಪ್ರಜಾಸಂಖ್ಯೆಯು ೧೮೦೦ರಲ್ಲಿ ೩೨ ಸಾವಿರಕ್ಕೆ ಇಳಿ

ಯಿತು. ಬರುಬರುತ್ತ ಕ್ಷೀಣವಾಗಿ ಹೋಗಿ ೧೮೫೨ರಲ್ಲಿ ೧೩ ಸಾವಿರವಾಗಿ ೧೮೭೧ರಲ್ಲಿ ೧೧ ಆಯಿತು. ಈಗ ರೈಲು ಬಂದ ಮೇಲೆ ಕೊಂಚಕೊಂಚವಾಗಿ ಚೇತರಿಸಿಕೊಳ್ಳುತ್ತಿದೆ. ಈಚೆಗೆ ವಿದ್ಯುದ್ದೀಪ ಕುಡಿಯುವುದಕ್ಕೆ ಒಳ್ಳೆಯ ಪರಿಶುದ್ಧವಾದ ನೀರು ಮೊದಲಾದ ಸೌಕರ್ಯಗಳು ಒದಗಿವೆ ಇನ್ನಾದರೂ ಈ ವೂರು ಬೆಳೆಯುವುದೆಂದು ಕೊಳ್ಳೋಣ

ಈ ವೂರಿನಲ್ಲಿ ಹಲವು ಭಾರಿಯ ದೇವಾಲಯಗಳಿವೆ ಶ್ರೀರಂಗನಾಥನ ದೇವಸ್ಥಾನ. ಶ್ರೀನರಸಿಂಹದೇವರ ದೇವಸ್ಥಾನ ಗಂಗಾಧರೇಶ್ವರನ ದೇವಸ್ಥಾನ ರಾಮಸ್ವಾಮಿಯ ದೇವಸ್ಥಾನ ದಳವಾಯಿ ದೇವಸ್ಥಾನ ಇವು ಮುಖ್ಯವಾದವು ಮಸೀದಿಗಳಲ್ಲಿ ದೊಡ್ಡ ಮಸೀದಿಯು ಮುಖ್ಯವಾದುದು

೧೭೯೨ನೆಯ ಇಸ್ವಿಯ ಫೆಬ್ರುವರಿಯಲ್ಲಿ ಶ್ರೀರಂಗಪಟ್ಟಣಕ್ಕೆ ಬಂದಿದ್ದ ಮೇಜರ್ ಡಿರೋಮ್ ಎಂಬ ಸರದಾರನು "ಶ್ರೀರಂಗಪಟ್ಟಣವು ಸಂಪನ್ನ ನಗರಗಳಲ್ಲಿ ಒಂದು ಇಲ್ಲಿ ನಗರವಾಸಿಗಳಿಗೆ ಬೇಕಾದಷ್ಟು ಅನುಕೂಲಗಳಿವೆ ನಗರವು ಬಹು ಸುಂದರವಾಗಿದೆ ಈಗ ಇಂಡಿಯಾದಲ್ಲಿ ಇರುವ ಯಾವ ನಗರಕ್ಕೂ ಈ ನಗರವು ಕಡಿಮೆಯಾಗಿಲ್ಲ" ಎಂದು ಬರೆದನು

ದರಿಯಾದ್‌ಲತ್ತಿನ ವಿಷಯವಾಗಿ ಮ|| ರೀಸ್ ಎಂಬ ಇನ್ನೊಬ್ಬ ಸರದಾರನು ಪರ್ಷಿಯಾದ ರಾಜಧಾನಿಯಾದ ಇಸ್ಪಹಾನಿನ ಅರಮನೆಗಳ ಮಾದರಿಯಲ್ಲಿ ಕಟ್ಟಿರುವ ಸೊಗಸಾದ ಕಟ್ಟಡವೆಂದು ಹೇಳಿದ್ದಾನೆ

ಹೈದರನ ಗೋರಿಯನ್ನು ಟಾಜ್‌ಮಹಲಿನ ಮಾದರಿಯಲ್ಲಿ ಕಟ್ಟಲಾಗಿದೆ ಕರಿಯ ಕಲ್ಲು ಕಡೆದು ಮಾಡಿರುವ ಕಂಭಗಳು ಕೊರೆದು ಮಾಡಿರುವ ಕಿಟಕಿಗಳು ಇದ್ದವು ನೋಡುವುದಕ್ಕೆ ಬಲು ಸೊಗಸಾಗಿವೆ

---

# ವೆನಿಸ ನಗರದ ವರ್ತಕ

---

ವೈಸ್ ನಗರದಲ್ಲಿ ಆಂಟನಿಯೋ ಎಂಬ ಸಾಹುಕಾರನಿದ್ದನು. ಅವನು ಹಡಗು ವ್ಯಾಪಾರಮಾಡಿ ಲಕ್ಷಾಂತರ ಹಣವನ್ನು ಸಂಪಾದಿಸಿದ್ದನು. ಅವನು ಬಡವರಿಗೆ ಸಾಲ ಕೊಟ್ಟರೆ ಬಡ್ಡಿಯನ್ನೂ ಕೇಳುತ್ತಿರಲಿಲ್ಲ ಅವನಿಗೆ ಬಸ್ಸಾನಿಯೋ ಎಂಬ ಒಬ್ಬ ಸ್ನೇಹಿತ. ಅವನೂ ಶ್ರೀಮಂತರ ಮಗ. ಆದರೆ ಅವನಿಗೆ ಇದ್ದಬದ್ದ ಆಸ್ತಿಯೆಲ್ಲವೂ ಕರಗಿ ಹೋಗಿ ಬಡವನಾಗಿದ್ದನು. ಅವನು ಆ ನಗರದ ಸಮೀಪದ ಬೆಲ ಮಾಂಟ್ ಹಳ್ಳಿಯಲ್ಲಿದ್ದ ಪೋರ್ಶಿಯಾ ಎಂಬ ಐಶ್ವರ್ಯವಂತೆಯನ್ನು ಮದುವೆಮಾಡಿಕೊಳ್ಳಬೇಕೆಂದು ಕೊಂಡನು ಅವನಿಗೆ ಮದುವೆಗೆ ಹೋಗುವುದಕ್ಕೆ ಕೂಡ ಖರ್ಚಿಗೆ ಹಣವಿರಲಿಲ್ಲ ಅದಕ್ಕಾಗಿ ತನ್ನ ಸ್ನೇಹಿತನನ್ನು ಸಾಲಾ ಕೇಳಿದನು ಆ ವೇಳೆಗೆ ಸರಿಯಾಗಿ ಅವನ ಬಳಿಯಲ್ಲೂ ಹಣವಿರಲಿಲ್ಲ. ಅದರಿಂದ ಇಬ್ಬರೂ ಇನ್ನೊಬ್ಬನ ಬಳಿ ಸಾಲಕ್ಕೆ ಹೋದರು.

ಅವನೂ ಒಬ್ಬ ಸಾಹುಕಾರ, ಅವನ ಹೆಸರು ಷೈಲಾಕ್. ಅವನು ಬಡ್ಡಿ ಸೆಳೆಯುವುದರಲ್ಲಿ ನಿಪುಣ ಅವನು ಸಾಲ ವಸೂಲು ಮಾಡುವುದರಲ್ಲಿ ಕಬ್ಬಿಣದ ಕೊಕ್ಕಿನ ಕಾಗೆಯ ಹಾಗೆ ಎಂದು ಸರಾಫ್ ಕಟ್ಟೆಯಲ್ಲಿ ಎಲ್ಲರೂ ಅವನನ್ನು ಬಯ್ಯುವರು ಅವನು ಸೇರಿದ್ದಕ್ಕೆ ಜಾತಿಯಲ್ಲಿ ಯೆಹೂದ್ಯರವನು. ಅದಕ್ಕಾಗಿಯೂ ಅವನನ್ನು ಕಂಡರೆ ಜನರಿಗೆ ಸರಿ ಬೀಳದು. ಎಲ್ಲರೂ ಅವನನ್ನು ನಾಯಿ! ನರಿ! ಎಂದು ಮುಂತಾಗಿ ಬಯ್ಯುವರು. ಹೀಗೆ ಬಯ್ಯುತ್ತಿದ್ದವರಲ್ಲಿ ಒಬ್ಬನಾದ ಆಂಟನಿಯೋ ತನ್ನನ್ನೇ ಸಾಲಕೇಳುವುದಕ್ಕೆ ಬಂದನೆಂದು ಅವನಿಗೆ ಬಹಳ ಸಂತೋಷವಾಯಿತು. ಇದೇ ಸಮಯದಲ್ಲಿ ಇವನನ್ನು ಹಿಡಿದು ಧ್ವಂಸಮಾಡಿಬಿಡಬೇಕೆಂದು ನಿಶ್ಚಯಿಸಿಕೊಂಡನು. " ಸಾಲಕೊಡುವೆನು. ವಾಯಿದೆಯ ಒಳಗಾಗಿ ಹಣವನ್ನು ಕೊಡದೇ ಹೋದರೆ, ಒಂದು ಪೌಂಡು ಮಾಂಸವನ್ನು ದೇಹದಿಂದ ಕೊಡಬೇಕು " ಎಂದು ಗೊತ್ತುಮಾಡಿಕೊಂಡು ಮೂರು ಸಾವಿರ ಚಿನ್ನದ ನಾಣ್ಯಗಳನ್ನು ಸಾಲವಾಗಿ ಕೊಟ್ಟನು.

ಆಂಟನಿಯೋ ಹಾಗೇ ಪತ್ರವನ್ನು ಬರೆದುಕೊಟ್ಟನು ಅವನಿಗೆ 'ತನ್ನ ಹಡಗುಗಳು ಎರಡು ಮೂರು ದಿನಗಳೊಳಗಾಗಿ ಬರುವುವು. ಮೂರುಸಾವಿರಲ್ಲ ಮೂರು ಲಕ್ಷಬೇಕಾದರೂ ಕೊಡಬಲ್ಲೆ'ನೆಂದು ನಂಬಿಕೆ ಆದ್ದರಿಂದ ಅವನು ಲಕ್ಷ್ಯವೇ ಮಾಡಲಿಲ್ಲ. ಬಸ್ಸಾನಿಯೋ ಹಣವನ್ನು ತೆಗೆದುಕೊಂಡು ಸ್ನೇಹಿತನನ್ನು ವಂದಿಸಿ ಮದುವೆಗೆ ಹೊರಟು ಹೋದನು. ಇತ್ತ ಕಡಲಿನಲ್ಲಿ ಗಾಳಿಯೆದ್ದು ಸಾಹುಕಾರನ ಹಡಗುಗಳು ಮುಳುಗಿ

ಹೋದುವು. ಅವನ ವ್ಯಾಪಾರವೆಲ್ಲವೂ ಕೆಟ್ಟುಹೋಗಿ ಅವನು ನಿರ್ಗತಿಕನಾದನು. ಯೆಹೂದಿ ಸಾಹುಕಾರನ ಸಾಲ ತೀರಿಸುವುದು ಕಷ್ಟವಾಯಿತು.

ಈ ಸಂಗತಿಯು ಮದುವಣಿಗನಾಗಿ ಸುಖವಾಗಿದ್ದ ಬಸ್ಸಾನಿಯೋಗೆ ತಿಳಿಯಿತು. ಅವನು ತನ್ನ ಹೆಂಡಿತಿಗೆ ಸಂಗತಿಯನ್ನೆಲ್ಲ ತಿಳಿಸಿದನು. ಅವಳು ಸಾಲದ ಮೂರರಷ್ಟು ಹಣವನ್ನು ಕೊಟ್ಟು ಗಂಡನಿಗೆ "ಮಿತ್ರನನ್ನು ಉಳಿಸಿಕೊಂಡು ಕರೆದುಕೊಂಡು ಬಾ" ಎಂದು ಹೇಳಿಕಳುಹಿಸಿದಳು. ಅವನು ಹೋದ ಮೇಲೆ, ಅವಳಿಗೆ ಒಂದು ಯೋಚನೆಯು ಹೊಳೆಯಿತು ಅವಳು ಗಂಡು ಉಡುಪನ್ನು ತೊಟ್ಟು, ಲಾಯರಿನಂತೆ ವೇಷವನ್ನು ಧರಿಸಿ ತಾನೂ ಹೊರಟಳು.

"ಸಮಯ ಸಿಕ್ಕಿದರೆ ಸಾಕು," ಎಂದು ಕಾದಿದ್ದ ಷೈಲಾಕನು ಆಂಟನಿಯೋವನ್ನು ಬಿಡಲು ಒಪ್ಪಲಿಲ್ಲ. "ನೀನು ಒಪ್ಪಿದಂತೆ, ನಿನ್ನ ಹೃದಯದಿಂದ ಒಂದು ಪೌಂಡು ಮಾಂಸವನ್ನು ಕೊಟ್ಟುಬಿಡು" ಎಂದು ಹಟಹಿಡಿದನು. ಈ ವಿವಾದವು ಕೋರ್ಟಿನ ವರೆಗೂ ಹೋಯಿತು ಕೋರ್ಟಿನವರು ತಾನೇ ಏನುಮಾಡಿಯಾರು? ಇವನು ತಾನಾಗಿ ಕೈಯಿಂದ ಬರೆದುಕೊಟ್ಟಿದ್ದಾನೆ ಎಲ್ಲರೂ ಇಂತಹ ಒಳ್ಳೆಯವನಿಗೆ ಇಂತಹ ದುರ್ಗತಿ ಬರಬಹುದೇ ಎಂದು ಬಹಳ ಚಿಂತಿಸುತ್ತಿದ್ದಾರೆ.

ಆ ವೇಳೆಗೆ ಸರಿಯಾಗಿ ಕೋರ್ಟಿಗೆ ಹೊಸ ಲಾಯರೊಬ್ಬನು ತನ್ನ ಗುಮಾಸ್ತೆಯೊಡನೆ ಬಂದನು ಅವನು ನೋಡುವುದಕ್ಕೆ ಬಲುಚೆಲುವನು. ಪ್ರಸಿದ್ಧನಾದ ಮತ್ತೊಬ್ಬ ಲಾಯರಿಂದ ಇವನು ಬಹಳ ಬುದ್ಧಿವಂತನೆಂದು ಕಾಗದವನ್ನು ತಂದಿದ್ದನು ಅವನು ಆಂಟನಿಯೋಕಡೆ ವಾದಿಸುವುದಕ್ಕೆ ಆರಂಭಿಸಿದನು. "ಬರೆದುಕೊಟ್ಟಂತೆ ನಡೆದೇತೀರಬೇಕು. ಇಲ್ಲದಿದ್ದರೆ ಹೇಗೆ? ಆಂಟನಿಯೋ ಒಂದು ಪೌಂಡು ಮಾಂಸ ಕೊಡಬೇಕು ಷೈಲಕ್ ಆ ಮಾಂಸವನ್ನು ಕೊಯ್ದುಕೊಳ್ಳಲು ಯಾರ ಅಡ್ಡಿಯೂ ಇಲ್ಲ" ಎಂದು ಹೊಸ ಲಾಯರು ಹೇಳಿದುದನ್ನು ಕೇಳಿ ಷೈಲಾಕನಿಗೆ ಬಹಳ ಸಂತೋಷವಾಯಿತು. ಇಂದಿಗೆ ತನ್ನ ವೈರವು ತೀರಿತೆಂದು ಕತ್ತಿಯನ್ನೂ ಇನ್ನೂ ಮಸೆದನು.

ಹೊಸಲಾಯರನು ಮತ್ತೆ "ಸಾಹುಕಾರರೇ! ಇನ್ನೂ ಒಂದು ಸಲ ಯೋಚಿಸಿ. ಈ ಒಂದು ಪೌಂಡು ಮಾಂಸದಿಂದ ಯಾರಿಗೆ ತಾನೇ ಏನು ಪ್ರಯೋಜನ? ಅನ್ಯಾಯವಾಗಿ ಒಂದು ನರಹತ್ಯೆ ಕಟ್ಟಿಕೊಳ್ಳುವಿರಿ. ನಿಮ್ಮ ಅಸಲಿನಷ್ಟೇ ಬಡ್ಡಿಯನ್ನೂ ತೆಗೆದುಕೊಂಡು ಬಿಟ್ಟುಬಿಡಿ" ಎಂದು ಎಷ್ಟೋ ಹೇಳಿದನು. ಆದರೂ ಷೈಲಾಕನು ಒಪ್ಪಲಿಲ್ಲ ಎಲ್ಲರೂ ಕಣ್ಣೀರಿಟ್ಟು ಕೇಳಿಕೊಂಡರೂ ಅವನ ಕಲ್ಲಿನಂತಹ ಹೃದಯವು ಕರಗಲಿಲ್ಲ




ಬಸಾನಿಯೋ :—ಆಂಟನಿಯೊ ! ಇವನ ನಿಬಂಧನೆಗಳು ಬಹು ಕಠಿಣವಾಗಿವೆ ಬೇಡ ಮದುವೆ ಯಿಲ್ಲದಿದ್ದರೂ ಚಿಂತೆಯಿಲ್ಲ.



ಬಸಾನಿಯೋ :—ನನ್ನ ಸ್ನೇಹಿತನಿಗೆ ಕಷ್ಟವಾಗಿದೆ   ನಾನು ಹೋಗಿ ಬರುತ್ತೇನೆ

ಎಲ್ಲರೂ ಆಂಟನಿಯೋ ಆಶೆಯನ್ನು ಬಿಟ್ಟುಬಿಟ್ಟರು ಯೆಹೂದಿಯು ಕತ್ತಿಯನ್ನು ಚೆನ್ನಾಗಿ ಮಸೆದು ತಕ್ಕಡಿಯನ್ನೂ ಸರಿಮಾಡಿಕೊಂಡನು. ಅಷ್ಟರೊಳಗಾಗಿ ಹೊಸ ಲಾಯರನು "ಸಾಹುಕಾರರು ಕೊಂಚ ತಡೆಯಬೇಕು. ತಮ್ಮ ಪತ್ರದಂತ ನಡೆಯುವುದು ತಮಗೆ ಸಮ್ಮತ ತಾನೇ?" ಎಂದು ಮತ್ತೆಯೂ ಕೇಳಿದನು. ಯೆಹೂದಿಯು "ಹೌದು. ಅದಕ್ಕೇನು ಸಂದೇಹ?" ಎನ್ನಲು, "ಸರಿ ಹಾಗೆಯೇ ಆಗಲಿ. ತಾವು ನಮ್ಮ ಕಕ್ಷಿಗಾರನ ಮೈಯ್ಯಿಂದ ಎಲ್ಲಿ ಬೇಕೆಂದರೆ ಅಲ್ಲಿ ಮಾಂಸವನ್ನು ತೆಗೆದುಕೊಳ್ಳಬಹುದು. ಅದಕ್ಕೆ ನಮ್ಮ ಅಭ್ಯಂತರವಿಲ್ಲ. ಆದರೆ ಎಚ್ಚರಿಕೆ. ನಿಮ್ಮ ಪತ್ರದಲ್ಲಿ ರಕ್ತದ ವಿಚಾರವೇ ಬರೆದಿಲ್ಲ. ಆತನ ಮಯ್ಯಿಂದ ಒಂದು ತೊಟ್ಟೂ ರಕ್ತವು ಬರಕೂಡದು. ಹಾಗೇನಾದರೂ ರಕ್ತವು ಕಾಣಿಸಿದರೆ, ನಿಮ್ಮ ಗತಿಯು ನೆಟ್ಟಗಾಗುವುದಿಲ್ಲ" ಎಂದು ಗರ್ಜಿಸಿದನು.

ಯೆಹೂದಿಗೆ ಯೋಚನೆಗೆ ಇಟ್ಟುಕೊಂಡಿತು. ರಕ್ತಬರದೆ ಮಾಂಸವನ್ನು ಕತ್ತರಿಸುವುದೆಂತು? ಕೊನೆಗೆ ತಾನು ಸಿಕ್ಕಿಕೊಂಡೆನೆಂಬುದು ಅವನಿಗೆ ತಿಳಿದುಹೋಯಿತು. "ಇನ್ನು ಯತ್ನವಿಲ್ಲವೆಂದುಕೊಂಡು ಹೋಗಲಿ, ನೀವು ಹೇಳಿದಂತೆ ಹಣ, ಹಣದ ಬಡ್ಡಿಯಾದರೂ ಕೊಡಿ" ಎಂದನು. ಕೋರ್ಟಿನವರು ಅದನ್ನು ಕೊಡಲಾಗುವುದಿಲ್ಲವೆಂದರು ಜೊತೆಗೆ ಅಕಾರಣವಾಗಿ ಒಬ್ಬನ ಪ್ರಾಣತೆಗೆಯಬೇಕೆಂದು ಯೋಚಿಸಿದ್ದೆಯಾಗಿ ನಿನ್ನ ಆಸ್ತಿಯನ್ನೆಲ್ಲ ಸರ್ಕಾರವು ತೆಗೆದುಕೊಂಡು ಬಿಟ್ಟದೆಯೆಂದು ಹೇಳಿಬಿಟ್ಟರು. ಹೀಗಾಗಿ ಯೆಹೂದಿಯು ಮೋಕಕೆಡಿಸಿಕೊಂಡು ಹೋದನು.

ಇತ್ತ ಹೊಸಲಾಯರನು ತನ್ನ ಸ್ನೇಹಿತನನ್ನು ಉಳಿಸಿದನೆಂದು ಬಸ್ಸಾನಿಯೋ ಅವನಿಗೆ ಹಣವನ್ನು ಕೊಡಲು ಹೋದನು. ಅವನು ಹಣವು ಬೇಡವೆಂದು ಬಸ್ಸಾನಿಯೋ ಕೈಯಲ್ಲಿದ್ದ ಉಂಗುರವನ್ನು ಕೇಳಿದನು ಅದು ಹೆಂಡತಿಯು ಕೊಟ್ಟಿದ್ದ ಉಂಗುರ. ಅದನ್ನು ಕೊಡಲು ಅವನಿಗೆ ಇಷ್ಟವಿಲ್ಲ ಲಾಯರಿಗೆ ಇನ್ನೇನೂ ಬೇಕಿಲ್ಲ. ಹೀಗಾಗಿ ಯತ್ನವಿಲ್ಲದೆ ಉಂಗುರವನ್ನು ಕೊಟ್ಟನು

ಬಸ್ಸಾನಿಯೋ ಹೆಂಡಿತಿಯ ವೂರಿಗೆ ಮಿತ್ರನೊಡನೆ ಬಂದನು. ಪೋರ್ಷಿಯಳು ಅವರೆಲ್ಲರಿಗೂ ಬೇಕಾದ ಹಾಗೆ ಉಪಚಾರ ಮಾಡಿಸಿದಳು ಊಟ ಉಪಚಾರಗಳೆಲ್ಲ ಆದ ಮೇಲೆ, ಹೆಂಡಿತಿಯು ಗಂಡನನ್ನು "ಎಲ್ಲಿ? ನಾನು ಕೊಟ್ಟ ಉಂಗುರವೆಲ್ಲಿ?" ಎಂದು ಕೇಳಿದಳು ಬಸ್ಸಾನಿಯೋ ಪೆಚ್ಚುಬಿದ್ದು ನಡೆದ ಕಥೆಯನ್ನೆಲ್ಲ ಹೇಳಿದನು ಅವಳೂ ಎಲ್ಲವನ್ನು ಏನೂ ಅರಿಯದವಳಂತೆ ಕೇಳುತ್ತಿದ್ದು ಕೊನೆಗೆ ಆ ಉಂಗುರವನ್ನು ಹಿಂತಿರುಗಿ ಕೊಟ್ಟು ಮಾಡಿದ ಉಪಾಯವನ್ನು ತಿಳಿಸಿದಳು.

ಹೊಸಲಾಯರಾಗಿ ಬಂದಿದ್ದುದು ಪೋರ್ಷಿಯಾನೇ ಎಂದು ತಿಳಿದು ಎಲ್ಲರಿಗೂ ಆಶ್ಚರ್ಯವಾಯಿತು. ಅಷ್ಟೇ ಸಂತೋಷವೂ ಆಯಿತು ಆ ಸಂತೋಷದಲ್ಲಿ ಎಲ್ಲರೂ ಔತಣಾದಿಗಳನ್ನುಮಾಡಿ ಸಂತೋಷವನ್ನು ಇನ್ನೂ ಹೆಚ್ಚಿಸಿದರು

# ಮೇಘಸಂದೇಶ

---

ನಮ್ಮ ಭರತವರ್ಷಕ್ಕೆ ಉತ್ತರವಾಗಿ ಹಿಮಾಲಯ ಪರ್ವತಗಳ ಉತ್ತರದಲ್ಲಿ ಅಲಕಾ ಎಂಬ ನಗರವುಂಟು ಅದು ಯಕ್ಷರೆಂಬ ದೇವ ಜಾತಿಯ ಜನರ ನಿವಾಸಸ್ಥಾನವು. ಅಲ್ಲಿಗೆ ಕುಬೇರನು ಅಧಿಪತಿಯು.

ಕುಬೇರನ ಪರಿವಾರದಲ್ಲಿದ್ದ ಯಕ್ಷನೊಬ್ಬನು ಒಂದು ದಿನ ತನ್ನ ಒಡೆಯನಾದ ಕುಬೇರನಿಗೆ ಅಪರಾಧಮಾಡಿದನು ಆತನು ಕೋಪಗೊಂಡು ಅವನಿಗೆ ಒಂದು ವರ್ಷ ನೀನು ಹೆಂಡತಿಯನ್ನು ಬಿಟ್ಟು ದೂರದೇಶದಲ್ಲಿರು ಎಂದು ಶಾಪವನ್ನು ಕೊಟ್ಟನು ಆ ಶಾಪದ ಫಲವಾಗಿ ಅವನಿಗೆ ಇದ್ದ ಮಹಿಮೆಗಳೆಲ್ಲವೂ ಹೋದುವು. ಹೀಗೆ ಸರ್ವವನ್ನೂ ಕಳೆದುಕೊಂಡು ವ್ಯಥಿಸುತ್ತಿದ್ದ ಯಕ್ಷನು ದಟ್ಟವಾದ ನೆರಳುಳ್ಳ ವೃಕ್ಷಗಳೂ ಜಾನಕೀ ದೇವಿಯು ಸ್ನಾನಮಾಡಿ ಪವಿತ್ರವಾದ ತೀರ್ಥಗಳೂ ಉಳ್ಳ ರಾಮಗಿರಿ ಎಂಬ ಆಶ್ರಮದಲ್ಲಿ ಆ ಶಾಪವನ್ನು ಕಳೆಯಬೇಕೆಂದುಕೊಂಡು ಬಂದುನಿಂತನು

ಆ ಆಶ್ರಮದಲ್ಲಿ ಆ ಯಕ್ಷನು ಹೆಂಡತಿಯನ್ನು ನೆನೆಸಿಕೊಂಡು ಅಳುತ್ತಾ ಹೇಗೆ ಹೇಗೋ ಎಂಟುತಿಂಗಳು ಕಳೆದನು. ಒಂದು ದಿನ ಅವನು ಹಾಗೆಯೇ ತಿರುಗುತ್ತಿರುವಾಗ ಆಷಾಢ ಮಾಸದ ಮೊದಲು ದಿನಗಳಲ್ಲಿ ಒಂದು ಮೋಡವು ಬಂದು ಆ ರಾಮಗಿರಿಯ ಶಿಖರದ ಕೋಡುಗಲ್ಲಿಗೆ ಸಂಧಿಸಿ ಕುಳಿತಿರುವುದು ಕಾಣಿಸಿತು.

ಆಗ ಯಕ್ಷನಿಗೆ ಬ ಹ ಳ ಯೋ ಚ ನೆ ಗೆ ಇಟ್ಟುಕೊಂಡಿತು. "ಆಗಲೇ ಮೇಘಗಳು ಕಾಣಿಸಿಕೊಳ್ಳುವ ಕಾಲವಾಯಿತು. ಸುಖವಾಗಿರುವವರೂ ಕೂಡ ಈ ಹೊಸ ಮೇಘಗಳನ್ನು ನೋಡಿ ಚಿಂತಾಪರರಾಗುವರು. ಹೀಗಿರುವಲ್ಲಿ ನನ್ನ ವಿರಹದಿಂದ ಕರಗಿ ಹೋಗಿರುವ ನನ್ನ ಹೆಂಡತಿಯ ಗತಿಯೇನು? ಅವಳು ನಾನೇನಾದನೋ ಎಂದು, ನನ್ನ ಸುದ್ದಿಯೂ ತಿಳಿಯಲಿಲ್ಲವೆಂದು ಶೋಚಿಸಿ ದೇಹತ್ಯಾಗ ಮಾಡಿಯಾಳು ಹಾಗಾಗದಂತೆ, ನಾನು ಕ್ಷೇಮವಾಗಿರುವೆನೆಂಬ ಸುದ್ದಿಯನ್ನು ಈ ಮೇಘದ ಮೂಲಕವೇ ಆಕೆಗೆ ತಿಳುಹಿಸುವೆನು" ಎಂದು ನಿಶ್ಚಯಿಸಿ, ಆ ಸುತ್ತಮುತ್ತಲಿದ್ದ ಹೂವುಗಳನ್ನು ತಂದು ಆ ಮೇಘಕ್ಕೆ ಕಾಣಿಕೆಗೊಟ್ಟು ಕೈಮುಗಿದು ಪ್ರಾರ್ಥಿಸಿದನು.

ಆ ಯಕ್ಷನಿಗೆ "ಈ ಮೇಘವು ಪ್ರಾಣಿಯಲ್ಲ. ಇದು ನನ್ನ ಸುದ್ದಿಯನ್ನು ತೆಗೆದುಕೊಂಡು ಹೋಗಬಲ್ಲುದೆ?" ಎಂದು ಸಂಶಯವೂ ಬರಲಿಲ್ಲ ಅದನ್ನೂ ತನ್ನಂತೆಯೇ

ದೇವಜಾತಿಯ ಪ್ರಾಣಿಎಂದು ಭಾವಿಸಿದ ಆ ಹುಚ್ಚನು " ಎಲೈ ! ಮೇಘವೇ ! ನೀನು ಪ್ರಸಿದ್ಧವಾದ ಪುಷ್ಕಲ ಆವರ್ತಕ ಎಂಬ ಮೇಘಗಳ ಜಾತಿಯಲ್ಲಿ ಹುಟ್ಟಿದವನು. ತ್ರಿಲೋಕಾಧಿಪತಿಯಾದ ಇಂದ್ರನ ಸಚಿವನು ಕಾಮರೂಪಿಯಾದವನು. ನಾನು ಹೆಂಡತಿಯನ್ನು ದೂರದೇಶದಲ್ಲಿ ಬಿಟ್ಟು ಬಂದವನು ಪ್ರಭುವಿನ ಕೋಪಕ್ಕೆ ಪಾತ್ರನಾದ ವನು. ನನ್ನ ಕೋರಿಕೆಯನ್ನು ನೆರವೇರಿಸು " ಎಂದು ಪ್ರಾರ್ಥಿಸಿದನು.

ಮೋಡವು ಸುಮ್ಮನಿರುವುದನ್ನು ಕಂಡು ಯಕ್ಷನು ಅದು ತನ್ನ ಮಾತಿಗೆ ಸಮ್ಮತಿ ಸಿತು ಎಂದುಕೊಂಡು, ಮುಂದಕ್ಕೆ ಹೇಳಿದನು "ನನ್ನ ಹೆಂಡತಿಯು ಅಲಕಾಪುರದಲ್ಲಿರು ವಳು. ಕೈಲಾಸಕ್ಕೆ ಉತ್ತರವಾಗಿ ಆ ನಗರಿಯಿರುವುದು. ನೀನು ಅಲ್ಲಿಗೆ ಹೋಗುವು ದಾದರೆ ದಾರಿಯಲ್ಲಿ ಎಷ್ಟೋ ಉತ್ತಮವಾದ ಪ್ರೇಕ್ಷಣೀಯ (ನೋಡಬೇಕಾದ)ವಾದ ನಗರಗಳೂ ಪುಣ್ಯಕ್ಷೇತ್ರಗಳೂ ದೊರೆಯುವುವು ಅವುಗಳನ್ನೆಲ್ಲ ಹಾದು ಹೋದರೆ, ಅಲ್ಲಿ ಅಲಕಾನಗರದಲ್ಲಿ ನನ್ನಲ್ಲಿಯೇ ಪ್ರಾಣವಿಟ್ಟುಕೊಂಡವಳಾಗಿ, ನನ್ನ ಗಂಡನು ಎಂದಿಗೆ ಬಂದಾನೋ ಎಂದು ನಿರೀಕ್ಷಿಸಿಕೊಂಡಿರುವ ನನ್ನ ಹೆಂಡತಿಯನ್ನು ಕಾಣುವೆ" ಎಂದು ಹೋಗುವ ಮಾರ್ಗವನ್ನೂ ವರ್ಣಿಸಿದನು

" ಎಲೈ ಮೇಘವೆ ! ಗಾಳಿಯನ್ನೇರಿ ಹೊರಡುವ ನಿನ್ನನ್ನು ಕಂಡು ವಿರಹಿಣಿಯರು 'ಇನ್ನು ನಮ್ಮ ಪತಿಯು ಬರುವಕಾಲವು ಸನ್ನಿಹಿತವಾಯಿತು.' ಎಂದುಕೊಂಡು ನಿನ್ನನ್ನು ಹರಸುವರು ಬಲಾಕಾ ಎಂಬ ಪಕ್ಷಿಗಳು ನಿನ್ನನ್ನೇ ಸ್ನೇಹದಿಂದ ಅನುಸರಿಸಿ ಬರುವುವು. ಮನೋಹರವಾದ ನಿನ್ನ ಗುಡುಗು ಕೇಳಿ 'ಮಳೆಗಾಲವು ಬಂತು. ಇನ್ನು ನಾವು ಮಾನ ಸಕ್ಕೆ ಹೊರಡಬೇಕು' ಎಂದು ಹಂಸೆಗಳು ತಾವರೆ ದಂಟಿನ ಬುತ್ತಿಯನ್ನು ಕಟ್ಟಿಕೊಂಡು ಹೊರಟು ನಿನ್ನ ಜೊತೆಯಲ್ಲಿ ಕೈಲಾಸದವರೆಗೂ ಬರುವುವು ಈ ಬೆಟ್ಟವು ನೀನು ಹೊರಡುವೆನೆಂದರೆ ಬಿಸಿಯಾದ ಕಣ್ಣೀರು ಬಿಡುವಂತಹ ಸ್ನೇಹಿತನು ಇವನಿಂದ ಅಪ್ಪಣೆ ಯನ್ನು ಪಡೆದು ಹೊರಡು"

" ಮೊದಲು ನೀನು ಹೋಗಬೇಕಾದ ಮಾರ್ಗವನ್ನು ಹೇಳುವೆನು. ಅದನ್ನು ಕೇಳು, ಅನಂತರ ಕೇಳುವವರಿಗೆಲ್ಲ ಹಿತವಾದ ನನ್ನ ಸಂದೇಶವನ್ನು ಹೇಳುವೆನು ಆಯಾಸವಾದಂತೆಲ್ಲ ಅಲ್ಲಲ್ಲಿ ಬೆಟ್ಟಗಳಲ್ಲಿ ನಿಂತು, ಆಯಾ ನದಿಗಳಲ್ಲಿ ನೀರುಕುಡಿದು ಮುಂದಕ್ಕೆ ಹೋಗುವಿಯಂತೆ ! ದಾರಿಯಲ್ಲಿ ನೀನು ಹೋಗುತ್ತಿರುವಾಗ ಕಾಮನಬಿಲ್ಲು ಮಾಡುವುದು ನಾನಾ ವರ್ಣವಾದ ಆ ಬಿಲ್ಲನ್ನು ನಿನ್ನನ್ನು ನೋಡಿದವರು ನವಿಲು ಗರಿ ಯನ್ನು ಧರಿಸಿ ಗೋಪಾಲಕನಾಗಿ ಮೆರೆದ ವಿಷ್ಣುವಿನಂತಿರುವೆಯೆಂದು ನಿನ್ನನ್ನು ಪ್ರೀತಿಸು ವರು ಹಾಗೆಯೇ ಹಳ್ಳಿಯ ಹೆಂಗುಸರೆಲ್ಲರೂ ನಿನ್ನನ್ನು ನೋಡಿ, 'ನಾವು ಎಷ್ಟು ಮಾಡಿದ

ರೇನು ? ನಮ್ಮ ಬೇಸಾಯವೆಲ್ಲವೂ ಫಲವಾಗಬೇಕಾದರೆ ಈ ಮೋಡವು ಮಳೆಗರೆಯ ಬೇಕು' ಎಂದುಕೊಂಡು ನಿನ್ನನೇ ನೋಡುವರು

''ಹಾಗೆಯೇ ಮಾಲವೆಂಬ ದೇಶಕ್ಕೆ ಹೋಗು ಅಲ್ಲಿ ಆಮ್ರಕೂಟ ಪರ್ವತವು ನೀನು ಬಂದೀಯಾ ಎಂದು ಕಾದಿರುವುದು. ಆ ಬೆಟ್ಟದಲ್ಲಿ ಕಾಡುಕಿಚ್ಚು ಬಿದ್ದು ಬೇಗೆಯೆದ್ದಾಗ ಆ ಬೇಗೆಯನ್ನು ಆರಿಸಿದ ಸ್ನೇಹಿತನೆಂದು ಆ ಪರ್ವತವು ನಿನಗೆ ಬೇಕಾದ ಹಾಗೆ ಉಪ ಚಾರಮಾಡುವುದು, ಅಂತಹ ಮಿತ್ರೋಪಚಾರವನ್ನು ಸ್ವೀಕರಿಸಿ ಮುಂದೆ ನಡೆದರೆ, ಅಲ್ಲಿಯೇ ನರ್ಮದಾನದಿಯು ಸಿಕ್ಕುವುದು. ವಿಂಧ್ಯಪರ್ವತದ ಮಗ್ಗುಲಲ್ಲಿ, ಕಾಡಾನೆ ಗಳ ಮದೋದಕದ ಪರಿಮಳದಿಂದ ಕೂಡಿ ಕಾಡುನೇರಿಲು ಮರಗಳ ತೋಪಿನಲ್ಲಿ ಹರಿ ಯುವ ಆ ನರ್ಮದೆಯಲ್ಲಿ ನೀರು ಕುಡಿದು ದಪ್ಪನಾಗಿ ಮುಂದೆ ಹೋಗು ಹಾಗೆ ಬೆಳೆದು ಮುಂದಕ್ಕೆ ಗಾಳಿಯಲ್ಲಿ ಜಗ್ಗುಹಾಕಿಕೊಂಡು ಹೋಗುವ ನಿನ್ನ ಮಹಿಮೆಯಿಂದ ಕದಂಬವೂ ಚಿಗುರುವುವು ; ನೆಲಬಾಳೆಯು ಹೂ ಬಿಡುವುದು. ಈ ಎರಡರಲ್ಲಿಯೂ ಆಶೆಯುಳ್ಳ ಸಾರಂಗಗಳು ನಿನ್ನನ್ನು ಅನುಸರಿಸಿಕೊಂಡು ಹಿಂದೆ ಹಿಂದೆಯೇ ಬರುವುವು. ಜೊತೆಗೆ ಚಾತಕಗಳು ನೀನು ಕೊಡುವ ನೀರಿಗಾಗಿ ನಿನ್ನ ಹಿಂದೆ ಬರುವುವು.''

''ಮಿತ್ರನೆ ! ನನ್ನ ಹೆಂಡಿತಿಯ ಪ್ರಾಣವನ್ನು ಉಳಿಸುವುದಕ್ಕಾಗಿ ಹೊರಟ ನಿನಗೆ ಪರ್ವತ ಪರ್ವತಗಳಲ್ಲಿಯೂ ಉಪಚಾರವಾಗುವುದು. ಕಂಡಕಂಡಲ್ಲಿ ಮಯೂರಗಳು ನಿನ್ನನ್ನು ನೃತ್ಯಗೀತಗಳಿಂದ ಪೂಜಿಸುವುವು ಆದರೆ, ನೀನು ಮಾತ್ರ ಅಲ್ಲಿಯೇ ನಿಂತು ಬಿಡದೆ ಆದಷ್ಟು ಬೇಗ ಮುಂದೆ ಹೊರಡು ''

''ನಿನಗೆ ದಾರಿಯಲ್ಲಿ ದಶಾರ್ಣವೆಂಬ ದೇಶವು ಸಿಕ್ಕುವುದು ಹಣ್ಣುಗಳಿಂದ ಕೂಡಿ ಕಪ್ಪಾಗಿರುವ ನೇರಳೇ ಮರಗಳ ತೋಪುಗಳುಳ್ಳ ಆ ದೇಶದಲ್ಲಿ ವಿದಿಶಾ ಎಂಬ ರಾಜಧಾನಿ ಯಿರುವುದು. ಅದು ಸ್ವರ್ಗಕ್ಕೆ ಸಮಾನವಾದ ನಗರವು ಪುಣ್ಯವು ಕ್ಷಯವಾಗಿ ಭೂಮಿಗೆ ಹಿಂತಿರುಗಿ ಬರುವ ಸ್ವರ್ಗವಾಸಿಗಳು ಬರುವಾಗ ಹೊತ್ತುಕೊಂಡು ಬಂದಿರುವ ಸ್ವರ್ಗದ ತುಂಡೋ ಎಂಬಂತಿರುವ ಆ ನಗರವು ವೇತ್ರವತೀ ನದಿಯ ದಡದಲ್ಲಿರುವುದು. ಆ ಮಗ್ಗುಲಲ್ಲಿಯೇ ಒಂದು ಪರ್ವತವೂ ಇರುವುದು. ಅಲ್ಲಿ ನೀನು ಒಂದು ಗಳಿಗೆ ವಿಶ್ರಮಿ ಸಿಕೊ ಆ ಹೊಳೆಯದಡದಲ್ಲಿ ಹೂವಿನ ತೋಟಗಳಿವೆ ಅಲ್ಲಿಗೆ ಹೂ ಕೊಯ್ಯುವುದಕ್ಕೆ ಬಂದಿರುವ ಸುಕುಮಾರಿಯರಿಗೆ ಒಂದು ಗಳಿಗೆ ನಿನ್ನ ನೆರಳನ್ನು ಕೊಡು. ಅವರೂ ತೃಪ್ತರಾಗಿ ನಿನ್ನನ್ನು ಹರಸುವರು ಅವರ ಹರಕೆಯನ್ನು ಕೈಗೊಂಡು ಮುಂದೆ ಹೋಗು.''

''ನಿನಗೆ ದಾರಿಯು ಕೊಂಚ ಸುತ್ತಾದರೂ ಚಿಂತೆಯಿಲ್ಲ. ಉಜ್ಜಯಿನಿಗೆ ಹೋಗಿ ಮುಂದೆ ಹೋಗು. ಪಕ್ಕದಲ್ಲಿಯೇ ಇರುವ ನಿರ್ವಿಂಧ್ಯಾನದಿಯು ಕೂಡ ನಿನ್ನಲ್ಲಿ ಬಹಳ

ವಿಶ್ವಾಸವುಳ್ಳುದು: ನೀನು ಬರಲಿಲ್ಲವೆಂದು ಕಂದಿ ಸೊರಗಿ ಹೋಗಿರುವುದು. ಆ ಹೊಳೆಯು ಪ್ರವಾಹವು ಬತ್ತಿ ಬತ್ತಿಯಂತಾಗಿ ಹೋಗಿರುವುದು. ಒಣಎಲೆಗಳು ಉದುರಿ ಆ ತೀರವೆಲ್ಲವೂ ಬೆಳ್ಳಗೆ ಆಗಿ ಹೋಗಿರುವುದು. ಹೀಗೆ ಬಿಳಚಿಹೊಂಡು ಕಂಗಾಳಾಗಿರುವ ಆ ನದಿಗೆ ನೀರನ್ನು ಕೊಟ್ಟು ಸಂತೋಷಗೊಳಿಸು. ಅಲ್ಲಿನ ಸ್ತ್ರೀಯರು ಬಹಳ ಸೌಂದರ್ಯವತಿಯರು. ಆ ಅವಂತೀ ದೇಶದ ವೃದ್ಧರು ಉದಯನನೆಂಬ ರಾಜನ ಕಥೆಗಳನ್ನು ಹೇಳುವುದರಲ್ಲಿ ನಿಪುಣರು.

ಅಲ್ಲಿನ ಸ್ತ್ರೀಯರು ತಲೆಯ ಕೂದಲನ್ನು ಒಣಗಿಸಿಕೊಳ್ಳುವುದಕ್ಕೋಸ್ಕರ ಹಾಕುವ ಧೂಪದ ಹೊಗೆಯು ಗವಾಕ್ಷಗಳಿಂದ ಹೊರಬಿದ್ದುಬಂದು ನಿನ್ನನ್ನು ಸೇರಿ ನಿನ್ನ ಮೈಯನ್ನು ಬೆಳೆಸುವುದು. ಅಲ್ಲಿ ಮನೆ ಮನೆಯಲ್ಲಿಯೂ ಸಾಕಿರುವ ನವಿಲುಗಳು ನಿನ್ನನ್ನು ಕಂಡು ಕುಣಿಯುವುವು. ಇಂಥಾ ಆ ನಗರದಲ್ಲಿ ಹೂವಿನ ವಾಸನೆಯಿಂದ ಮನೋಹರವಾಗಿರುವ ದೊಡ್ಡ ದೊಡ್ಡ ಮನೆಗಳಲ್ಲಿ ಕೊಂಚ ಹೊತ್ತು ನಿಂತಿದ್ದು ದಾರಿಯ ಶ್ರಮವನ್ನು ಕಳೆದುಕೊ. ಸಾಲದೆ ಅದು ಮಹಾ ಶೈವಕ್ಷೇತ್ರವು ಆ ಪರಶಿವನ ಗಣಗಳು ನಿನ್ನನ್ನು ತಮ್ಮ ಸ್ವಾಮಿಯ ಕತ್ತಿನಲ್ಲಿರುವ ಕಪ್ಪಿನಂತಿರುವವನೆಂದು ನಿನ್ನನ್ನು ವಿಶ್ವಾಸ ದಿಂದ ನೋಡುವರು. ಅಲ್ಲಿರುವ ಚಂಡೀಶ್ವರನ ದರ್ಶನ ಮಾಡು. ಆ ಮಹಾ ಕಾಳೇ ಶ್ವರನನ್ನು ಸಂಧ್ಯಾ ಕಾಲದಲ್ಲಿ ದರ್ಶನ ಮಾಡಿ ಒಂದು ಸಲ ಗುಡುಗಿ ನಿನ್ನ ಡಮರು ಸೇವೆಯನ್ನು ಆ ಸ್ವಾಮಿಗೆ ಸಲ್ಲಿಸಿ ಧನ್ಯನಾಗು. ಆ ಸ್ವಾಮಿಯ ನಿಲಯದಲ್ಲಿ ದೇವ ದಾಸಿಯರು ಹಗಲಿರುಳೆನ್ನದೆ ನರ್ತನ ಮಾಡುತ್ತಿರುವರು. ನೀನು ಸುರಿಯುವ ಮಳೆಯ ಬಿಂದುಗಳು ಅವರಿಗೆ ಆಯಾಸವನ್ನು ಕಳೆದು ಪ್ರಿಯವನ್ನುಂಟುಮಾಡುವುವು. ಅದ ಕ್ಕಾಗಿ ಶಿವಭಕ್ತೆಯರಾದ ಅವರೂ ನಿನ್ನಲ್ಲಿ ವಿಶ್ವಾಸವುಳ್ಳವರಾಗುವರು.

ಆ "ಸಂಧ್ಯಾಸಮಯದಲ್ಲಿ ಪಶುಪತಿಯು ತಾಂಡವವನ್ನು ಮಾಡುವನು ಆಗ ಆತನ ಬಳಿಗೆ ಹೋಗಿ ಗಜಚರ್ಮವಾಗಿ ಆತನನ್ನು ಸುತ್ತಿಕೊಂಡು ಒಂದು ಗಳಿಗೆ ಆತ ನನ್ನು ಸೇವಿಸು. ನಿನ್ನ ಭಕ್ತಿಯನ್ನು ಕಂಡು ಭವಾನೀದೇವಿಯೂ ತೃಪ್ತಳಾಗುವಳು ಇಂಥಹ ಆ ನಗರದಲ್ಲಿ ನೀನು ನಿನ್ನ ಹೆಂಡತಿಯಾದ ಮಿಂಚಿನೊಡನೆ ಒಂದು ರಾತ್ರಿ ಯನ್ನು ಕಳೆದು ಸೂರ್ಯೋದಯವಾದ ಮೇಲೆ ಮುಂದೆ ಹೊರಡು"

"ಮುಂದೆ ಹೊಸ ಮಳೆಯ ವಾಸನೆಯನ್ನು ಆಘ್ರಾಣಿಸುತ್ತ ಬರುವ ಆನೆಗಳೊಡನೆ ದೇವಗಿರಿಗೆ ಹೋಗು. ಅಲ್ಲಿ ಕಾಡು ಅತ್ತಿ ಮರಗಳ ಹಣ್ಣು ತುಂಬಿರುವುದು, ಆ ಗಿರಿ ಯಲ್ಲಿ ಸ್ಕಂದ ಸ್ವಾಮಿಯು ನೆಲಸಿರುವನು. ಪರಶಿವನು ದೇವೇಂದ್ರನ ಸೇನೆಯನ್ನು ರಕ್ಷಿ ಸುವುದಕ್ಕಾಗಿ ಆದಿತ್ಯನಿಗಿಂತಲೂ ತೇಜಸ್ವಿಯಾದ ಆತನನ್ನು ಸೃಷ್ಟಿಸಿದನು. ಅಂತಹ

ಆ ಶಿವಕುಮಾರನನ್ನು ನೀನು ಪುಷ್ಪಮೇಘವಾಗಿ ನಿನ್ನ ಮಳೆಯಿಂದ ಆರಾಧಿಸು. ಮರೆಯದಿರು! ಆ ನಿನ್ನ ಹೂವಿನ ರಸದ ಸೋನೆಯಲ್ಲಿ ದಿವ್ಯಗಂಗಾಜಲವೂ ಸೇರಿರಲಿ. ಆ ಬೆಟ್ಟದಲ್ಲಿ ಆ ಸ್ವಾಮಿಯ ವಾಹನವಾದ ಮಯೂರವಿರುವುದು. ಆ ನವಿಲು ಒಂದು ಗರಿಯನ್ನು ಜಾರಿಸಿದರೆ ಭವಾನೀದೇವಿಯು ಅದನ್ನು ಮಗನ ಮೇಲಿನ ಪ್ರೀತಿಯಿಂದ ತೆಗೆದು ಕಿವಿಗೆ ಅಲಂಕಾರ ಮಾಡಿಕೊಳ್ಳುವಳು. ಇಂಥಾ ಆ ನವಿಲನ್ನು ನಿನ್ನ ಗುಡುಗಿನಿಂದ ಒಮ್ಮೆ ಕುಣಿಸು ಅದರಿಂದಲೂ ಆ ಸ್ವಾಮಿಯು ಸಂತುಷ್ಟನಾಗುವನು''

''ಹೀಗೆ ಆ ಸ್ಕಂದನನ್ನು ಅರ್ಚಿಸಿ ಮುಂದೆ ಚರ್ಮಣ್ವತೀ ನದಿಯನ್ನು ದಾಟಿ, ಹೋಗು ಆ ನದಿಯಲ್ಲಿ ನೀರ ಕುಡಿಯುವುದಕ್ಕೆ ಬಗ್ಗಿರುವ ನಿನ್ನನ್ನು ನೋಡಿ, ದೇವತೆಗಳು ''ಭೂದೇವಿಯು ಧರಿಸಿರುವ ಬಿಳಿಯ ಮುತ್ತಿನ ಹಾರದ ಮಧ್ಯದಲ್ಲಿರುವ ಇಂದ್ರನೀಲವಿದು'' ಎಂದುಕೊಳ್ಳುವರು. ಅಲ್ಲಿಂದ ಮುಂದೆ ದಶಪುರವನ್ನೂ ಬ್ರಹ್ಮಾವರ್ತವನ್ನೂ ಕುರುಕ್ಷೇತ್ರವನ್ನು ಕಳೆದು ಮುಂದೆ ಹೋಗು. ಅಲ್ಲಿ ಸರಸ್ವತೀ ನದಿಯು ಸಿಕ್ಕುವುದು. ರೇವತೀ ರಮಣನಾದ ಬಲರಾಮನು ತನಗೆ ಅತಿಪ್ರಿಯವಾದ ಹಾಲಾರಸ (ಮದ್ಯ) ವನ್ನೂ ಬಿಟ್ಟು ಆ ನದಿಯ ನೀರನ್ನು ಕುಡಿಯುತ್ತಿದ್ದನಂತೆ ನೀನೂ ಆ ನದಿಯ ಪವಿತ್ರೋದಕವನ್ನು ಪಾನಮಾಡಿ ಕೃತಾರ್ಥನಾಗು ಆಗ ನೀನು ನೋಡುವುದಕ್ಕೆ ಕೃಷ್ಣನಾಗಿದ್ದರೂ ಒಳಗೆ ಶುದ್ಧನಾಗುತ್ತೀಯೆ''

''ಅಲ್ಲಿಗೆ ಗಂಗಾದ್ವಾರವು ಸಮೀಪದಲ್ಲಿರುವುದು. ಅಲ್ಲಿಯೇ ಗಂಗಾದೇವಿಯು ಸಗರರನ್ನು ರಕ್ಷಿಸಲು ಇಳಿದು ಬಂದುದು. ಆ ನದಿಯ ನೀರನ್ನು ಪಾನ ಮಾಡಲು ನೀನು ಇಳಿಯುವೆ ಆಗ ದೇವತೆಗಳು ನಿನ್ನನ್ನು ನೋಡಿ, ಇದೇನು ಮುಂದೆ ಪ್ರಯಾಗದಲ್ಲಿ ಆಗಬೇಕಾದ ಯಮುನಾ ಸಂಗಮವು ಇಲ್ಲಿಯೇ ಆಗುತ್ತಿರುವುದಲ್ಲ* ಎಂದು ಭ್ರಾಂತಿಪಡುವರು. ನೀನು ದಾರಿಯ ಆಯಾಸವನ್ನು ಕಳೆಯಲು ಆ ಶೈಲದ ಕೋಡುಗಲ್ಲಿನಲ್ಲಿ ಕುಳಿತರೆ, ಪರಮೇಶ್ವರನ ವಾಹನವಾದ ನಂದಿಯ ಕೋಡಿನ ಮೇಲಿರುವ ಕೆಸರಿನಂತೆ ಮನೋಹರವಾಗಿರುವೆ ನೀನು ಅಲ್ಲಿರುವಾಗ ಕಾಡುಕಿಚ್ಚು ತಲೆದೋರಿದರೆ ತಪ್ಪದೆ ನೀನು ಅದನ್ನು ನಿನ್ನ ಮಳೆಯಿಂದ ಆರಿಸು ನಿನ್ನಂತಹ ಸಜ್ಜನರಿಗೆ ಇತರರ ಕಷ್ಟವನ್ನು ತಪ್ಪಿಸುವುದಕ್ಕಿಂತಲೂ ಉತ್ತಮವಾದ ಕೆಲಸವುಂಟೆ?''

''ಆ ಹಿಮಗಿರಿಯ ಶಿಲಾಖಂಡಗಳ ಮೇಲೆ ಪರಮೇಶ್ವರನ ಪಾದಚಿಹ್ನೆಗಳಿರುವುವು ಅವನ್ನು ಕಂಡು ಭಕ್ತಿಯಿಂದ ಅವಕ್ಕೆ ಪೂಜೆ ಮಾಡಿ ಸರ್ವ ಪಾಪಗಳನ್ನೂ ಕಳೆದುಕೊ, ನಿನಗೆ ಮುಂದೆ ಶಾಶ್ವತವಾದ ಗಣಪದವು ಪ್ರಾಪ್ತವಾಗುವುದು.''

---

* ಗಂಗಾ ಪ್ರವಾಹವು ಬಿಳುಪು ಯಮುನಾ ಪ್ರವಾಹವು ಕಪ್ಪು. ಆದರಿಂದ

“ಆ ಹಿಮವತ್ಪರ್ವತದ ಕಾಡುಗಳಲ್ಲಿ ಶರಭಗಳುಂಟು ಅವು ಒಂದು ವೇಳೆ ನಿನ್ನನ್ನು ಕಂಡು ನಿನ್ನ ಮೇಲೆ ಬಿದ್ದಾವು ಹಾಗೆ ಬಿದ್ದರೆ ಆನೆಕಲ್ಲುಗಳಿಂದ ಹೊಡೆದು ಅವನ್ನು ಓಡಿಸಿ ಮುಂದೆ ಹೋಗು”

“ಅಲ್ಲಿರುವ ತೂತ.ಬಿದಿರುಗಳಲ್ಲಿ ಗಾಳಿಯು ತೂರಿ ಅವು ಕೊಳಲೂದಿದಂತೆ ಧ್ವನಿ ಮಾಡುವವು ಅಲ್ಲಿರುವ ಕಿನ್ನರಿಯರು ತ್ರಿಪುರ ವಿಜಯವನ್ನು ಹಾಡುತ್ತಿರುವರು. ಆ ವೇಳೆಗೆ ಸರಿಯಾಗಿ ನೀನೂ ಗುಡುಗಿದರೆ, ಅದು ಮದ್ದಳೆಯ ಧ್ವನಿಯಾಗಿ ಬೆರೆದು ಪರಶಿವನಿಗೆ ಸಂಗೀತೋಪಚಾರವು ಪೂರ್ಣವಾಗುವುದು ಹೀಗೆ ಸ್ವಾಮಿಗೆ ಸೇವೆಯನ್ನು ಸಲ್ಲಿಸಿ, ಹಂಸದ್ವಾರ ಕ್ರೌಂಚದ್ವಾರಗಳನ್ನು ಕಳೆದು, ರಾವಣನು ಹಿಡಿದು ಅಲ್ಲಾಡಿಸಿದ ಆ ಕೈಲಾಸ ಪರ್ವತವನ್ನು ಸೇರು”

“ಆ ಕೈಲಾಸಕ್ಕೆ ನೀನು ಹೋದರೆ, ಆ ಹಾ! ಎಷ್ಟು ಮನೋಹರವಾಗಿರುವುದು ಬಲ್ಲೆಯಾ! ದಂತದಂತೆ ಬೆಳ್ಳಗಿರುವ ಆ ಕೈಲಾಸಕ್ಕೂ ಕಾಡಿಗೆಯಂತೆ ಕಪ್ಪಗಿರುವ ನಿನಗೂ ಬಹಳ ಹೊಂದಿಕೆಯಾಗಿ ಬಲರಾಮನು ನೀಲವಸ್ತ್ರವನ್ನು ಹೊದೆದಂತಿರುವುದು ಅಲ್ಲಿ ಶಂಭುವು ತನ್ನ ಭುಜಗವಲಯವನ್ನು ತೆಗೆದುಹಾಕಿ ಗೌರೀದೇವಿಯೊಡನೆ ಆಕ್ರೀಡಾಶೈಲದಲ್ಲಿ ಕಾಲು ನಡಗೆಯಿಂದ ತಿರುಗುತ್ತಿರುವನು ಆಗ ನೀನು ಭಕ್ತಿಯಿಂದ ನಿನ್ನಲ್ಲಿರುವ ನೀರನ್ನೆಲ್ಲ ಸ್ತಂಭಿಸಿಕೊಂಡು ಸೋಪಾನವಾಗು ಆ ಶಿವದಂಪತಿಗಳು ನಿನ್ನನ್ನು ಮೆಟ್ಟುವರು ಅವರ ಪಾದಗಳು ನಿನಗೆ ಸ್ಪರ್ಶವಾಗುವುದಕ್ಕಿಂತಲೂ ಉತ್ತಮವಾದ ಸದ್ಗತಿಯು ಬೇರೊಂದುಂಟೆ? ಹಾಗೆ ಗಟ್ಟಿಯಾಗಿರುವ ನಿನ್ನನ್ನು ಸುರಯುವತಿಯರು ಹಿಡಿದುಕೊಂಡಾರು. ಅಂತಹ ವೇಳೆಯಲ್ಲಿ ಒಮ್ಮೆ ಗರ್ಜಿಸು, ಅವರು ಹೆದರಿ ನಿನ್ನನ್ನು ಬಿಟ್ಟುಬಿಡುವರು. ಅಲ್ಲಿಂದ ಮುಂದೆ ಕನಕಕಮಲ ಸುಂದರವಾದ ಮಾನಸಸರೋವರವಿರುವದು. ಆ ಮಾನಸದ ಜಲವನ್ನು ಪಾನ ಮಾಡಿ ಅಲ್ಲಿರುವ ಕಲ್ಪದ್ರುಮದ ಚಿಗುರುಗಳನ್ನು ಅಲ್ಲಾಡಿಸುತ್ತಾ. ಆ ಸುತ್ತಮುತ್ತಲಿನಲ್ಲಿ ಕ್ರೀಡಿಸುತ್ತ ಆ ಪರ್ವತವನ್ನು ಸೇವಿಸು. “ಆ ಕೈಲಾಸದ ಮಗ್ಗುಲಲ್ಲಿಯೇ ಅಲಕಾಪಟ್ಟಣವಿರುವುದು. ಆ ನಗರದಲ್ಲಿ ಎಲ್ಲರೂ ವಿಲಾಸಪರರು ಎಲ್ಲರ ಮನೆಗಳಲ್ಲಿಯೂ ರತ್ನಗಳ ತುಂಬಿರುವುವು ಇಂತಹ ಸಂಪನ್ನವಾದ ಆ ನಗರದಲ್ಲಿ ಕುಬೇರನ ಮನೆಗೆ ಉತ್ತರವಾಗಿ ಕಾಮನ ಬಿಲ್ಲಿನಂತೆ ಮನೋಹರವಾದ ತೋರಣವಿರುವ ಮನೆಯೇ ನಮ್ಮದು”

“ಬಾಗಿಲಲ್ಲಿಯೇ ನನ್ನ ಹೆಂಡತಿಯು ಬೆಳೆಸಿರುವ ಬಾಲಮಂದಾರ ವೃಕ್ಷವಿರುವುದು ಆ ಮನೆಯಲ್ಲಿ ಪಚ್ಚೆಕಲ್ಲು ಕಟ್ಟಿರುವ ಬಾವಿಯಿದೆ ವೈಢೂರ್ಯ ನಾಳಗಳುಳ್ಳ ಚಿನ್ನದ ಕಮಲಗಳಿವೆ ಅಲ್ಲಿರುವ ಹಂಸಗಳು ನಿನ್ನನ್ನು ಕಂಡರೂ (ಮಳೆಗಾಲವು ಬಂದರೆ ಹಂಸಗಳು ಮಾನಸಕ್ಕೆ ಹೊರಟು ಹೋಗುತ್ತವೆಯಂತೆ) ಹೆದರುವುದಿಲ್ಲ ಆ ಬಾವಿಯ ಮಗ್ಗುಲಲ್ಲಿ ಇಂದ್ರ ನೀಲಮಣಿಗಳಿಂದ ವಿರಚಿತವಾಗಿರುವ, ಚಿನ್ನದ ಬಾಳೆಗ

ಳಿಂದ ಸುತ್ತುವರೆದಿರುವ ಕ್ರೀಡಾಶೈಲವುಂಟು, ಅದರಲ್ಲಿ ಎಳೆಯ ಚಿಗುರಿನ ರಕ್ತಾಶೋಕವುಂಟು. ಗೋರಂಟಿಯ ಬೇಲಿಯ ಮಾಧವೀ ಮಂಟಪವುಂಟು ಆ ಮಂಟಪದಲ್ಲಿ ಸ್ಫಟಿಕಶಿಲೆಯ ಮೇಲೆ ಚಿನ್ನದ ದಂಡಿಗೆಯ ಮೇಲೆ ನಿನ್ನ ಸ್ನೇಹಿತನೂ ನನ್ನ ಹೆಂಡತಿಯು ಪ್ರೀತಿಯಿಂದ ಸಾಕಿದವನೂ ಆದ ನವಿಲು ಇರುವುದು. ಆ ಮನೆಯ ಬಾಗಿಲಲ್ಲಿ ಶಂಖ ಪದ್ಮಗಳನ್ನು ಬರೆದಿರುವುದು ಈ ಎಲ್ಲ ಗುರುತುಗಳಿಂದ ಆ ಮನೆಯನ್ನು ಕಂಡುಕೊಂಡು ಅಲ್ಲಿರುವ ನನ್ನ ಹೆಂಡತಿಗೆ ನನ್ನ ಸುದ್ದಿಯನ್ನು ತಿಳಿಸು.''

''ಅವಳು ನನ್ನ ವಿರಹದಿಂದ ಕಂದಿ ದುಃಖದಿಂದ ಬೆಂದು ಸೊರಗಿಹೋಗಿರುವಳು. ಆಕೆಯ ಕಣ್ಣು ಅತ್ತತ್ತು ಕೆಂಪಾಗಿರುವುದು. ಬಿಸಿಯುಸಿರು ತಗುಲಿ ತುಟಿಯು ವರ್ಣಹೀನವಾಗಿರುವುದು. ಅವಳು ನೀನು ಹೋದಾಗ ಪೂಜೆ ಮಾಡುತ್ತಿದ್ದಾಳು ನನ್ನ ಚಿತ್ರವನ್ನು ಬರೆಯುತ್ತಿದ್ದಾಳು. ಪಂಜರದಲ್ಲಿರುವ ಶುಕದೊಡನೆ ನನ್ನ ಕಥೆಯನ್ನು ಕುರಿತಾಡುತ್ತಿದ್ದಾಳು ಅಥವಾ ನನ್ನ ಮೇಲೆ ತಾನು ಕಟ್ಟಿರುವ ಹಾಡನ್ನು ವೀಣೆಯನ್ನು ಬಾರಿಸಿಕೊಂಡು ಹಾಡುತಿದ್ದಾಳು ಬಾಗಿಲ ಹೊಸಿಲಮೇಲೆ ಇಟ್ಟ ಹೂವಿನಿಂದ ಇಷ್ಟು ದಿನವು ಕಳೆಯಿತೆಂದುಕೊಳ್ಳುತ್ತ ಇರುವ ಆ ಕಾಂತೆಯು ಒಂದು ವೇಳೆ, ಕೃಷ್ಣಪಕ್ಷದ ಕೊನೆಕೊನೆಯಲ್ಲಿ ಪೂರ್ವದಿಕ್ಕಿನಲ್ಲಿ ಎಲ್ಲಿಯೋ ಒಂದು ಕಡೆ ಕಾಣಿಸುವ ಚಂದ್ರನಂತೆ ಕಲಾಹೀನಳಾಗಿ ಎಲ್ಲಿಯೋ ಮಲಗಿದ್ದಾಳು. ಹೀಗೆ, ಒಡವೆಗಳಿಲ್ಲದೆ ಅಲಂಕಾರಗಳಿಲ್ಲದೆ ಬಳಲಿರುವ ಆ ಹೆಣ್ಣಿಗೆ ನಿದ್ದೆ ಬಂದಿದ್ದರೆ, ನೀನು ಗುಡುಗಿ ಅವಳಿಗೆ ನಿದ್ದೆ ಕೆಡಿಸಬೇಡ ಅವಳನ್ನು ಕಂಡು ನಿನಗೂ ಅಯ್ಯೋ ಎನ್ನಿಸುವುದು ಅವಳನ್ನು ಸುಖವಾಗಿ ಎಚ್ಚರಗೊಳಿಸಿ ಮೃದುವಾಗಿ ಅವಳಿಗೆ ನೀನು ನನ್ನ ಮಿತ್ರನೆಂಬುವನ್ನೂ ನಾನು ಸುಖವಾಗಿರುವೆನೆಂಬುದನ್ನು ಮೊದಲು ತಿಳಿಸು ನಾನಿಲ್ಲಿ ಆಕೆಯನ್ನೇ ಧ್ಯಾನಿಸುತ್ತ ಇರುವೆನೆಂಬುದನ್ನೂ, ಶಾಪವು ಕಳೆಯುತ್ತಲೇ ನಾನು ಓಡೋಡಿಬರುವೆನೆಂಬುದನ್ನು ಆಕೆಗೆ ತಿಳುಹಿಸಿ ಸಮಾಧಾನಪಡಿಸು.'' ''ಎಲೈ ಮೇಘವೇ! ನೀನು ಇದಿಷ್ಟು ಮಹೋಪಕಾರವನ್ನು ನನಗೆ ಮಾಡು. ಈ ಉಪಕಾರದ ಫಲವಾಗಿ ನಿನಗೆ ನಿನ್ನ ಹೆಂಡತಿಯೂ ನೀನೂ ಯಾವಾಗಲೂ ಒಟ್ಟಿಗಿರುವಂತಹ ಸೌಭಾಗ್ಯವು ಲಭಿಸಲಿ''

ಎಂದು ಪ್ರಾರ್ಥಿಸಿದನು ಮೇಘವೂ ಅದೇ ರೀತಿಯಾಗಿ ಮಾಡಿ ಅವರಿಬ್ಬರನ್ನೂ ಕಾಪಾಡಿತು

---

ಈ ಕಾವ್ಯದಲ್ಲಿ ಕಥೆಯು ಚಿಕ್ಕದು ಇರುವ ೧೨೦ ವೃತ್ತಗಳೂ ಒಂದೇ ಜಾತಿಯವು. ಆದರೂ ಸೊಗಸು ತಾನೇ ತಾನಾಗಿದೆ ಇದನ್ನು ಕಾಳಿದಾಸನು ಮಿಕ್ಕೆಲ್ಲ ಕಾವ್ಯಗಳನ್ನೂ ಬರೆದ ಮೇಲೆ ಬರೆದನೆಂದು ಹೇಳಬಹುದು.

ಇದನ್ನು ಪಂಡಿತ ಶ್ರೀ ಕುಕ್ಕೆಸುಬ್ರಹ್ಮಣ್ಯಶಾಸ್ತ್ರಿಗಳು ಕನ್ನಡಕ್ಕೆ ಬರೆದಿದ್ದಾರೆ

# ಇದು ಏಕೆ?

**ಕಬ್ಬಿಣವು ಪಾದರಸದಲ್ಲಿ ಏಕೆ ತೇಲುತ್ತದೆ? ಮತ್ತು ನೀರಿನಲ್ಲಿ ಏಕೆ ಮುಳುಗುತ್ತದೆ?**

ಹಾರುವುದು ಈಜುವುದು ತೇಲುವುದು ಇದೆಲ್ಲವೂ ಆಯಾ ವಸ್ತುವನ್ನು ಭೂಮಿಯು ಎಷ್ಟರಮಟ್ಟಿಗೆ ಆಕರ್ಷಿಸುತ್ತದೆ ಎಂಬ ಅಂಶದ ಮೇಲೆ ನಿರ್ಧಾರವಾಗಿರುತ್ತದೆ. ಒಂದೊಂದು ವಸ್ತುವಿನ ಮೇಲೆಯೂ ಭೂಮಿಗೆ ಇಷ್ಟೇ ಆಕರ್ಷಣ ಶಕ್ತಿಯು ಇದೆಯೆಂದು ಶಾಸ್ತ್ರಜ್ಞರು ನಿರ್ಧರಿಸಿರುತ್ತಾರೆ. ಇದಕ್ಕೆ ಸ್ಪೆಸಿಫಿಕ್ ಗ್ರ್ಯಾವಿಟ್ ಅಥವಾ ವಿಶಿಷ್ಟ ಗುರುತ್ವ ಎಂದು ಹೆಸರು. ಉದಾಹರಣೆ :—ಕಬ್ಬಿಣವು ನೀರಿಗಿಂತ ಭಾರ. ಆದ್ದರಿಂದ ಕಬ್ಬಿಣವು ನೀರಿನಲ್ಲಿ ಮುಳುಗುತ್ತದೆ ಆದರೆ ಪಾದರಸವು ನೀರಿಗಿಂತ ಭಾರ ಆದ್ದರಿಂದ ಅದು ನೀರಿನಲ್ಲಿ ಮುಳುಗುತ್ತದೆ. ಆದರೆ ಪಾದರಸವು ಕಬ್ಬಿಣಕ್ಕಿಂತ ಭಾರ. ಆದ್ದರಿಂದ ಅದು ಕಬ್ಬಿಣದಲ್ಲಿ ಮುಳುಗಿಹೋಗುತ್ತದೆ ಅಂದರೆ ಕಬ್ಬಿಣವು ಪಾದರಸದಲ್ಲಿ ತೇಲುತ್ತದೆ ಎಂದರ್ಥ. ಆದ್ದರಿಂದ ಯಾವ ವಸ್ತುವಿನ ವಿಶಿಷ್ಟ ಗುರುತ್ವವು ಜಾಸ್ತಿಯಾಗಿರುತ್ತದೋ ಅದನ್ನು ಭೂಮಿಯು ತನ್ನ ಕಡೆಗೆ ಜಾಸ್ತಿಯಾಗಿ ಎಳೆದುಕೊಳ್ಳುತ್ತದೆ ಆದರ ಮೇಲೆ ಇತರ ವಸ್ತುಗಳೆಲ್ಲವೂ ತೇಲುತ್ತವೆ

**ಹಾವಿನ ಹಲ್ಲಿನಲ್ಲಿರುವ ವಿಷವು ಎಲ್ಲಿಂದ ಬಂತು?**

ನಮ್ಮ ಮುಂದಿನ ಹಲ್ಲಿಗೂ ಹಿಂದೆ ಇರುವ ದವಡೆಹಲ್ಲಿಗೂ ಮಧ್ಯೆ ಇರುವ ಹಲ್ಲಿಗೆ "ನಾಯಿಹಲ್ಲು" ಅಥವಾ ಕೋರೆಹಲ್ಲು ಎಂದು ಹೆಸರು ಹಾವಿನ ಕೋರೆ ಹಲ್ಲೇ ಈ ಪಕ್ಷದ ಹಲ್ಲು ಹಾವುಗಳಿಗೆ ಮಾತ್ರ ಈ ಕೋರೆ ಹಲ್ಲಿನಲ್ಲಿ ಒಂದು ಸಣ್ಣ ನಾಳವಿರುತ್ತದೆ. ಇದರ ಮೂಲಕ ಅದು ಕಚ್ಚುವಾಗ ಈ ವಿಷವು ಹರಿದು ಬರುತ್ತದೆ.

ನಾವು ತಿನ್ನುವ ಆಹಾರವನ್ನು ಮೃದುವಾಗಿ ಮಾಡಲು ನಮ್ಮ ಬಾಯಲ್ಲಿ ಯಾವಾಗಲೂ ಒಂದು ತರಹದ ದ್ರವವು ಉತ್ಪನ್ನವಾಗುತ್ತಿರುತ್ತದೆ. ಈ ದ್ರವವನ್ನು ಲಾಲಾ ಗ್ರಂಥಿಗಳೆಂಬ ಕೆಲವು ಗ್ರಂಥಿಗಳು ಉತ್ಪತ್ತಿಮಾಡುತ್ತವೆ. ಇದೇ ಗ್ರಂಥಿಗಳೇ ಹಾವಿನಲ್ಲಿ ವಿಷವನ್ನು ಉತ್ಪತ್ತಿಮಾಡಿ ಒಂದು ನಾಳದ ಮೂಲಕ ಹಲ್ಲಿನ ಬುಡಕ್ಕೆ ಕಳಿಸುತ್ತವೆ ಯಾವಾಗ ಹಾವು ಕಚ್ಚುತ್ತದೆಯೋ ಆಗ ಈ ಗ್ರಂಥಿಗಳು ಅಕ್ಕಪಕ್ಕದಲ್ಲಿರುವ ಮಾಂಸಖಂಡಗಳಿಂದ ಹಿಂಡಲ್ಪಟ್ಟು ವಿಷವನ್ನು ಕಚ್ಚಲ್ಪಟ್ಟ ಪ್ರಾಣಿಯ ದೇಹದಲ್ಲಿ ಹಲ್ಲಿನಲ್ಲಿರುವ ಕೊಳವೆಯ ಮೂಲಕ ಬಿಡುತ್ತವೆ

ಒಂದು ಪ್ರಾಣಿಯ ದೇಹದೊಳಗೆ ಪ್ರವೇಶಿಸಿದ ಈ ವಿಷವು ಒಂದು ರವೆಯಷ್ಟಾದರೂ ಸರಿಯೆ. ಆ ಪ್ರಾಣಿಯು ತಕ್ಷಣವೇ ಸತ್ತುಹೋಗುತ್ತದೆ. ಈ ರೀತಿ ಒಂದೇ ಮಾದರಿಯ ಗ್ರಂಥಿಗಳು ಒಂದು ಪ್ರಾಣಿಯಲ್ಲಿ ಆಹಾರವನ್ನು ಮೃದುಮಾಡುವ ದ್ರವ್ಯವನ್ನು ಉತ್ಪತ್ತಿಮಾಡಿ ಇನ್ನೊಂದು ಪ್ರಾಣಿಯಲ್ಲಿ ವಿಷವನ್ನು ಉತ್ಪತ್ತಿಮಾಡುವುದನ್ನು ನೋಡಿದರೆ ಆಶ್ಚರ್ಯವುಂಟಾಗುವುದು.

**ಪ್ರಾಣಿಗಳು ಎಷ್ಟು ದಿನ ಬದುಕಬಲ್ಲವು ?**

ಒಬ್ಬ ಮನುಷ್ಯನ ಆಯುಷ್ಯವನ್ನು ಹೇಳುವ ಹಾಗೆ ನಾವು ಪ್ರಾಣಿಗಳ ಆಯುಷ ವನ್ನು ನಿರ್ಧರವಾಗಿ ಹೇಳುವುದುಕ್ಕಾಗುವುದಿಲ್ಲ.

ಒಬ್ಬ ಮನುಷ್ಯನ ಆಯುಷ್ಯ (ಜೀವಮಾನ) ವನ್ನು ಹೇಗೆ ಹೇಳಬಲ್ಲೆವೆಂದರೆ ಅವನು ಹುಟ್ಟಿದ ದಿನವನ್ನೂ ಸತ್ತ ದಿನವನ್ನೂ ಗುರುತುಹಾಕಿ ಇಟ್ಟುಕೊಳ್ಳುತ್ತೇವೆ. ಎಲ್ಲಾ ತರದ ಪ್ರಾಣಿಗಳ ಜೀವಮಾನವನ್ನು ಯಾರೂ ಗುರುತುಹಾಕಿಕೊಂಡಿರುವುದಿಲ್ಲ. ಎಲ್ಲಿಯೋ ಪ್ರಸಿದ್ಧವಾದ ಜೂಜಿನ ಕುದುರೆ ಅಥವಾ ಬೇಟೆನಾಯಿ ಇವುಗಳು ಹುಟ್ಟಿದ ಮತ್ತು ಸತ್ತ ತಾರೀಖವನ್ನು ಕೆಲವರು ಗುರುತುಹಾಕಿಕೊಳ್ಳುತ್ತಾರೆ.

ಭೂಮಿಯ ಮೇಲೆ ಜೀವಿಸುವ ಪ್ರಾಣಿಗಳಲ್ಲೆಲ್ಲಾ ಆಮೆ ಬಹಳ ದಿನಗಳು ಬದುಕುತ್ತದೆ. ಸರಿಯಾದ ಆಹಾರವನ್ನು ಕೊಟ್ಟು ಒಳ್ಳೆಯ ಪೋಷಣೆಯಿದ್ದರೆ ಒಂದು ಆಮೆಯು ೩೦೦-೪೦೦ ವರ್ಷಗಳು ಬದುಕಬಲ್ಲದು ಲಂಡನ್ ನಗರದ ಪ್ರಾಣಿಶಾಲೆ ಯಲ್ಲಿ ಒಂದು ಆಮೆಯು ೩೫೦ ವರ್ಷಗಳು ಬದುಕಿತ್ತಂತೆ ! ಮೊಸಳೆಯೂ ೩೦೦ವರ್ಷ ಗಳು ಬದುಕಬಲ್ಲದು

ಕಪ್ಪೆಯ ವಿಷಯದಲ್ಲಿ ನಾವು ಅನೇಕ ಕಥೆಗಳನ್ನು ಕೇಳಿರುತ್ತೇವೆ. ಏನೆಂದರೆ ಅದು ಕಲ್ಲಿನೊಳಗೋ ಇಲ್ಲವೇ ಒಂದು ಮರದೊಳಗೋ ಸಾವಿರಾರು ವರ್ಷಗಳಿಂದ ಇವೆ ಯೆಂದು ಹೇಳುವವರನ್ನು ನೋಡಿದ್ದೇವೆ. ಆದರೆ ಇದೆಲ್ಲಾ ನಂಬಲು ಅಸಾಧ್ಯ

ಆನೆಯು ದೊಡ್ಡದಾಗುವುದೂ ಬಹಳ ದಿನಗಳು ಸಾಯುವುದೂ ಬಹಳ ದಿನ ಗಳ ಮೇಲೆ. ಸರಿಯಾದ ಪೋಷಣೆ ಇದ್ದರೆ ಅದು ೧೦೦ ವರ್ಷಗಳು. ಬದುಕಬಹುದು. ಹದ್ದು ೧೦೦ ವರ್ಷಗಳು ಬದುಕುತ್ತದೆ. ತಿಮಿಂಗಿಲವು ಐನೂರು ವರ್ಷಗಳಿಂದ ಸಾವಿರ ವರ್ಷದತನಕ ಬದುಕಿರುತ್ತದೆ

**ಕೆಲವು ಪ್ರಾಣಿಗಳು ಬರುವ ವರ್ಷಗಳ ಪಟ್ಟಿ: –**

| | |
|---|---|
| ಮೊಲ—೫ ವರ್ಷ | ಕುದುರೆ—೨೭ ವರ್ಷ |
| ಆಡು—೧೨ ,, | ಒಂಟೆ—೪೦ ,, |
| ಬೆಕ್ಕು—೧೩ ,, | ಸಿಂಹ—೪೦ ,, |
| ನಾಯಿ—೧೫ ,, | ಆನೆ—೧೦೦೦ ,, |
| ಮೇಕೆ—೧೫ ,, | ಮೊಸಳೆ—೩೦೦ ,, |
| ಹಸು—೨೫ ,, | ಆಮೆ—೩೫೦ ,, |
| ಹಂದಿ—೨೫ ,, | ತಿಮಿಂಗಿಲ—೫೦೦೦ ,, |

ಪಕ್ಷಿಗಳು:—

| | |
|---|---|
| ಕೋಳಿ—೧೪ ವರ್ಷ | ಪಾರಿವಾಳ—೨೦ ವರ್ಷ |
| ಕೊಕ್ಕರೆ—೨೪ ,, | ನವಿಲು – ೨೪ ,, |
| ಗುಬ್ಬಚ್ಚಿ—೪೦ ,, | ಬಾತು—೫೦ ,, |
| ಗಿಣಿ—೬೦ ,, | ಕಾಗೆ—೧೦೦ ,, |
| ಹಂಸ—೧೦೦ ,, | ಹದ್ದು—೧೦೦೦ ,, |

ಕೆಲವು ಪ್ರಾಣಿಗಳು ನಮಗಿಂತಲೂ ಜಾಸ್ತಿಕಾಲ ಜೀವಿಸುತ್ತವೆ. ಆದರೆ ಮನುಷ್ಯನು ೧೦೦ ವರ್ಷಗಳಿಗಿಂತ ಜಾಸ್ತಿಯಾಗಿ ಜೀವಿಸುವುದು ಅಪರೂಪ

---

## ಹಿಂದೂರಾಜ್ಯ

ಕ್ರಿ ಶ. ೮೦೨ ರಲ್ಲಿ ಸೂರ್ಯವಂಶದ ಜಯವರ್ಮನೆಂಬುವನು ಕಾಂಬೋಡಿಯದಲ್ಲಿ ರಾಜ್ಯಸ್ಥಾಪನೆ ಮಾಡಿದನು ಇವನ ವಂಶದವರು ಐನೂರು ವರ್ಷಗಳು ರಾಜ್ಯಭಾರಮಾಡಿದರು. ಸಯಾಮಿನ ಧೈಜನರು ಮೇಲೆಬಿದ್ದು ಇವರನ್ನು ಸೋಲಿಸಿ, ಇವರನ್ನು ನಿರ್ನಾಮಮಾಡಿದರು.

ಇವರ ರಾಜಧಾನಿಯಲ್ಲಿದ್ದ ನಿವಾಸಿಗಳೆಲ್ಲರೂ ಶತ್ರುಗಳ ಹಾವಳಿಯನ್ನು ಸಹಿಸಲಾರದೆ ಊರುಬಿಟ್ಟು ಓಡಿಹೋದರು ನಗರವೆಲ್ಲವೂ ಕಾಡಾಯಿತು. ಮುಂದೆ ಐದುನೂರು ವರ್ಷಗಳು ಅಲ್ಲಿಗೆ ಒಂದು ನರಪ್ರಾಣಿಯೂ ಬರಲಿಲ್ಲ

ಮುಂದೆ ೧೮೫೦ ರಲ್ಲಿ ರೆವರೆಂಡ್ ಚಾರ್ಲಿವೋಕ್ಸ್ ಎಂಬ ಫ್ರೆಂಚ್ ಪಾದ್ರಿಯು ಕಾಡಿನಲ್ಲಿ ತಿರುಗುತ್ತಾ ಇಲ್ಲಿಗೆ ಬಂದನು. ಆ ಕಾಡಿನಲ್ಲಿದ್ದ ವಿಜನ ನಗರವನ್ನು ಕಂಡು ಆಶ್ಚರ್ಯಪಟ್ಟನು. ತಾನು ಕಂಡ ಅದ್ಭುತವನ್ನು ಪತ್ರಿಕೆಗಳಿಗೆ ಬರೆದನು. ಅಂದಿನಿಂದ ಅನೇಕರು ಅಲ್ಲಿಗೆ ಬಂದು ಹೋಗುತಿದ್ದಾರೆ. ಅಂಕೋರ ಎಂದು ಆ ಪುರಾತನ ನಗರದ ಹೆಸರು.

ಅಲ್ಲಿ ಅಂಗಕೋರವಾಟ್ ಎಂಬ ಭಾರಿಯ ವಿಷ್ಣು ದೇವಸ್ಥಾನವೊಂದಿದೆ. ಅದನ್ನು ಕಟ್ಟುವುದಕ್ಕೆ ಸುಮಾರು ೪೦ ಮೈಲಿದೂರದಿಂದ ಕಲ್ಲುಗಳನ್ನು ತರಿಸಿದರಂತೆ ಈ ದೇವಾಲಯಕ್ಕೆ ಐದು ಗೋಪುರಗಳಿವೆ! ದೇವಾಲಯದ ಸುತ್ತಲೂ ಭಾರಿಯ ಕಂದಕವಿದೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮಹಾದ್ವಾರಗಳಿದ್ದು ಮಹಾ ದ್ವಾರಕ್ಕೆ ಹೋಗಲು ಸೇತುವೆಗಳಿವೆ.

ಮಹಾ ದ್ವಾರಗಳಲ್ಲೆಲ್ಲಾ ಭಾರಿಯದು ಪಶ್ಚಿಮಾಭಿಮುಖವಾಗಿದೆ. ಇದೇ ಒಂದು ಭಾರಿಯ ದೇವಸ್ಥಾನದಷ್ಟಿದೆ. ಇಲ್ಲಿಂದಾಚೆಗೆ, ಒಂದು ಸರೋವರ ಅದರ ನಡುವೆ ದೇವಸ್ಥಾನಕ್ಕೆ ಕರದೊಯ್ಯುವ ಸುಮಾರು ಮೂರು ಫರ್ಲಾಂಗು ಉದ್ದದ ವಿಶಾಲವಾದ ದಾರಿ, ಅದಕ್ಕೆ ಕಲ್ಲು ಹಾಸಿದೆ.

ಎರಡನೆಯ ಆವರಣದ ಎದುರಿಗೆ ಏಳುಹೆಡೆಯ ಸರ್ಪವನ್ನು ಕೆತ್ತಿದ್ದಾರೆ. ಮಂದಿರದ ಸುತ್ತಲಿನ ಗೋಡೆಗಳಲ್ಲೆಲ್ಲಾ ಮಹಾಭಾರತ, ಭಾಗವತ, ರಾಮಾಯಣದ ಕಥೆಗಳನ್ನು ಕೆತ್ತಿದ್ದಾರೆ. ಮಹಾದ್ವಾರದ ಬಲ ಮಗ್ಗುಲಲ್ಲಿ ಮಹಾಭಾರತದ ಕಥೆಯ ಚಿತ್ರಗಳಿವೆ. ಅವುಗಳಲ್ಲಿ ಗೀತೋಪದೇಶ, ಕುರುಕ್ಷೇತ್ರದ ಯುದ್ಧ, ಶರತಲ್ಪದಲ್ಲಿ ಭೀಷ್ಮನ ಶಯನ, ಇವು ಬಹು ಅಂದವಾಗಿವೆ

ದಕ್ಷಿಣದ ಗೋಡೆಯಲ್ಲಿ ಈ ದೇವಾಲಯವನ್ನು ಕಟ್ಟಿಸಿದ ಎರಡನೆ ಸೂರ್ಯವರ್ಮನ ಮೂರ್ತಿಯಿದೆ. ಅವನು ತನ್ನ ದರಬಾರಿನಲ್ಲಿ ಕುಳಿತು ವಿರಾಜಿಸುತ್ತಿರುವ ದೃಶ್ಯ. ಅದರ ಮಗ್ಗುಲಲ್ಲಿ ಸ್ವರ್ಗನರಕಗಳು

ಪೂರ್ವದಿಕ್ಕಿನ ಗೋಡೆಯಲ್ಲಿ ಅಮೃತಮಂಥನದ ಚಿತ್ರ. ದೇವತೆಗಳು ದಾನವರೂ ವಾಸುಕಿಯನ್ನು ಮಂದರ ಪರ್ವತಕ್ಕೆ ಸುತ್ತಿ ಹಗ್ಗವಾಗಿ ಮಾಡಿಕೊಂಡು ಸಮುದ್ರವನ್ನು ಕಡೆಯುತ್ತಿದ್ದಾರೆ ಮಹಾವಿಷ್ಣುವು ನಿಂತು ನೋಡುತ್ತಿದ್ದಾನೆ. ಮಂಥನದ ಫಲವಾಗಿ ದೊರೆತ ಕಾಮಧೇನು ಕಲ್ಪವೃಕ್ಷ ಮೊದಲಾದವುಗಳೆಲ್ಲ ಇವೆ. ಹಾಗೆಯೇ ಮಗ್ಗುಲಲ್ಲಿಯೇ ದೇವದಾನವ ಯುದ್ಧವೂ ಇದೆ

ಉತ್ತರದ ಗೋಡೆಯಲ್ಲಿ ಗರುಡವಾಹನನಾದ ಮಹಾ ವಿಷ್ಣುವಿನ ಮೂರ್ತಿಯೂ, ಕೈಲಾಸದಲ್ಲಿ ಮಂಡಿಸಿರುವ ಪಾರ್ವತೀಪರಮೇಶ್ವರರು, ಗಣಪತಿ, ಷಣ್ಮುಖ, ಮೊದಲಾದ ದೇವತೆಗಳ ಚಿತ್ರಗಳೂ ಇವೆ

ಉತ್ತರ ದಿಕ್ಕಿನ ಗೋಡೆಯ ಮೇಲೆ ರಾಮಾಯಣದ ಕಥೆಯನ್ನು ಕೆತ್ತಿದೆ ಈ ಚಿತ್ರಗಳು ಬಹು ಸುಂದರವಾಗಿವೆ.

ಈ ಪ್ರಕಾರವನ್ನು ದಾಟಿ ಒಳಗೆ ಹೋದರೆ ನಾಲ್ಕು ಮೂಲೆಗಳಲ್ಲಿಯೂ ಇರುವ ನಾಲ್ಕು ಕೆರೆಗಳು ಅಲ್ಲಲ್ಲಿ ದೇವಮೂರ್ತಿಗಳು. ಹೀಗೆಯೇ ಇನ್ನೂ ಎರಡು ಮೂರು ಪ್ರಕಾರಗಳಿದ್ದು, ನಡುವಿನ ಪ್ರಾಕಾರದಲ್ಲಿ ನಾಲ್ಕೈದು ಗರ್ಭಗುಡಿಗಳಿವೆ. ಅಲ್ಲಿ ಒಂದು ಗರ್ಭಮಂದಿರದಲ್ಲಿ ಒಂದು ಸುಂದರವಾದ ವಿಗ್ರಹವಿದೆ

ಈ ಒಳಗಿನ ಪ್ರಕಾರದಲ್ಲಿ ನಾಲ್ಕು ಗೋಪುರಗಳಲ್ಲಿ ನಡುವೆ ಒಂದು ಭಾರಿಯ ಗೋಪುರವಿದೆ. ಅದಕ್ಕೆ ಭಂಗಾರದ ತಗಡನ್ನು ಹೊದಿಸಿದ್ದರಂತೆ.

# ಮುದ್ರಾರಾಕ್ಷಸ ಕಥೆ.

ವೈಕುಂಠವಾಸಿ ಶ್ರೀಯುತ:–(ಕೆ. ರಾಮಸ್ವಾಮಯ್ಯಂಗಾರ್ಯರು ಅನುವಾದಿಸಿದುದು)

---

ಪರ್ವತೇಂದ್ರನ ತಮ್ಮನೂ ಅವನ ಮಗನೂ ರಾಕ್ಷಸನೊಂದಿಗೆ ಸೇರಿ ಚಂದ್ರಗುಪ್ತನನ್ನು ಕೊಲ್ಲಲಿಕ್ಕೆ ಪ್ರಯತ್ನಿಸುತ್ತಿರುವರೆಂದು ಕೇಳಿ ಚಾಣಕ್ಯನು ಅವರಿಬ್ಬರೂ ವಧಾರ್ಹರೆಂದು ಯೋಚಿಸಿದನು. ಆದರೆ ಅವರಿಬ್ಬರನ್ನೂ ಕೊಲ್ಲಿಸಿದಲ್ಲಿ ತಾವೇ ಪರ್ವತರಾಜನನ್ನು ಕೊಲ್ಲಿಸಿದೆವೆಂದು ಜನರಿಗೆ ಸಂಶಯವುಂಟಾಗಬಹುದೆಂತ ಯೋಚಿಸಿ ಅವರಲ್ಲಿ ಒಬ್ಬನನ್ನು ಬಿಟ್ಟುಬಿಡಬಹುದೆಂದು ವೈರೋಧಕನು ಅತಿದ್ವೇಷಿಯಾಗಿರುವುದರಿಂದ ಅವನನ್ನು ಕೊಂದುಬಿಟ್ಟು ಮತ್ತೊಬ್ಬನನ್ನು ಬಿಟ್ಟುಬಿಡಬೇಕೆಂದು ಯೋಚಿಸಿ ಮಂತ್ರಿಯಾದ ಭಾಗುರಾಯಣನನ್ನು ನೋಡಿ ‘ ಅಯ್ಯಾ ಮಂತ್ರಿಯೆ ! ನೀನು ಪೂರ್ವದಿಂದಲೂ ಮೌರ್ಯನಲ್ಲಿ ಸ್ನೇಹವುಳ್ಳವನಾಗಿದ್ದೀಯೆ ನನ್ನಲ್ಲಿಯೂ ಹಾಗೆಯೇ ವಿಶ್ವಾಸವಿಟ್ಟಿದ್ದೀಯೆ ನನ್ನ ಆಜ್ಞೆಯಿಂದ ಪರ್ವತರಾಜ ಮುಂತಾದವರಲ್ಲಿ ಗುಟ್ಟಾದ ಸ್ನೇಹವನ್ನು ಪಡೆದೆ. ನೀನು ಮಲಯಕೇತುವಿಗೆ ನನ್ನದೆಶೆಯಿಂದ ಸ್ವಲ್ಪವೂ ಭಯಬೇಡವೆಂದು ಬೋಧಿಸಿ ಅವನಿಗೆ ಹಿತವನ್ನು ಹೇಳಿ ಆತನ ಪ್ರೀತಿಯನ್ನು ಸಂಪಾದಿಸು ‘‘ಎಂದು ಹೇಳಿದನು. ಆ ಭಾಗುರಾಯಣನು ಅವನ ಅಪ್ಪಣೆಯನ್ನು ಶಿರಸಾವಹಿಸಿ ಔಷಧಬಲದಿಂದ ಕ್ಷೀಣನಾಗಿದ್ದ ಪರ್ವತರಾಜನ ಮಗನಾದ ಮಲಯಕೇತುವಿನ ಬಳಿಗೆ ಹೋಗಿ ‘ ಅಯ್ಯಾ ! ನಿನ್ನ ತಂದೆಯು ದುಷ್ಟನಾದ ಚಾಣಕ್ಯನಿಂದ ಹತನಾದನು. ಅಯ್ಯೋ ! ನಿನಗೆಂತಹ ಕಷ್ಟ ಸಂಭವಿಸಿತು ! ನೀನು ವ್ಯಸನದಿನದ ಗದ್ದಲ ಮಾಡಬೇಡ. ಆ ದುಷ್ಟನು ಕೋಪದಿಂದ ನಿನ್ನನ್ನೂ ಕೊಲ್ಲಿಸಿಬಿಡುವನು. ಆದುದರಿಂದ ಮಾನದಿಂದ ನೀನು ನಿನ್ನ ಪಟ್ಟಣಕ್ಕೆ ಸೇರಿ ಮುಂದಿನ ಕರ್ತವ್ಯವನ್ನು ಯೋಚಿಸು’’ ಎಂದು ಹೇಳಿದನು. ಬಳಿಕ ಆಮಲಯ ಕೇತುವು ತನ್ನ ತಂದೆಗೆ ಪಿತೃಕಾರ್ಯ ಮಾಡುವುದನ್ನು ಕೂಡ ಬಿಟ್ಟು ಅಲ್ಲಿಂದ ತನ್ನ ಪಟ್ಟಣಕ್ಕೆ ಹೋಗಿ ಸೇರಿದನು. ಚಾಣಕ್ಯನು ಅಲ್ಲಿಗೂ ಹೊರಟು ಬರುವನೆಂದು ಒಂದು ಸುದ್ದಿ ಹಬ್ಬಿತು. ಇದರಿಂದ ಚಾಣಕ್ಯನೇ ಪರ್ವತರಾಜನನ್ನು ಕೊಂದನೆಂದು ಜನರೆಲ್ಲರೂ ಚಿಂತಿಸಿದರು. ಮಲಯಕೇತುವಿನ ಆಪ್ತ ಮಿತ್ರರು ದುಷ್ಟನಾದ ಚಾಣಕ್ಯನಿಂದ ನಮ್ಮ ರಾಜನು ಸತ್ತುಹೋದನು. ಅಂಥವನ ವಧಾರ್ಹನಾದ ಅವನ ಮಗನನ್ನು ಬಿಟುಬಿಟ್ಟದು [illegible]ಶ್ಚರ್ಯವಾಗಿದೆ, ಆತನು ಇನ್ನೂ ಏನೇನು ಯೋಚಿಸುತ್ತಿರುವನೋ ನಾವು ಜಾಗರೂಕರಾಗಿರಬೇಕು ?’’ ಎಂದು ಆಲೋಚಿಸುತ್ತಿದ್ದರು.

ಅಮಾತ್ಯರಾಕ್ಷಸನು ಪಾಟಲೀಪುರದಿಂದ ಹೊರಟು ಬಹುದೂರ ಬಂದು ಮೌರ್ಯ ನನ್ನು ಕೊಲ್ಲುವುದಕ್ಕೆ ಉಪಾಯವೆಂದು ಮನಸ್ಸಿನಲ್ಲಿ ಚಿಂತಿಸುತ್ತ ಮಲಯಕೇತುವು ವನು ಹೊರಡಿಸಿದುದನ್ನು ಕೇಳಿ ಅವನ ಆಶ್ರಯದಿಂದ ತನ್ನ ಕಾರ್ಯಸಿದ್ಧಿಯನ್ನು ಮಾಡ ಬೇಕೆಂದು ನಿರ್ಣಯಿಸಿ ಅವನ ಬಳಿಗೆ ಬಂದು ''ಅಯ್ಯಾ ಮಲಯಕೇತುವೆ! ದುರಾತ್ಮನಾದ ಚಾಣಕ್ಯನು ನಿನ್ನ ತಂದೆಯನ್ನು ಕೊಲ್ಲಿಸಿದನು. ಇದರಿಂದ ನನಗೂ ಬಹಳ ವ್ಯಸನ ವುಂಟಾಗಿದೆ ನಾನು ಆ ಮೌರ್ಯಪಶುವನ್ನು ಕೊಂದು ರಾಜ್ಯವನ್ನು ಖಂಡಿತವಾಗಿ ನಿನಗೆ ಕೊಡುತ್ತೇನೆ, ನಿನ್ನ ಸೇನೆಯನ್ನೆಲ್ಲ ಸಜ್ಜುಗೊಳಿಸು. ಶತ್ರುವಧೆಯಿಂದ ನಿನ್ನ ದುಃಖವು ಸಮಾಧಾನವಾಗಲಿ?'' ಎಂದು ಹೇಳಿದನು. ಮಲಯಕೇತುವು ಈ ಮಾತನ್ನು ಕೇಳಿ ಬಹು ಸಂತೋಷಪಟ್ಟು ಆ ರಾಕ್ಷಸನಿಗೆ ಮಂತ್ರಿಪದವಿಯನ್ನು ಕೊಟ್ಟು 'ಆರ್ಯನೆ! ನನ್ನ ತಂದೆ ಯನ್ನು ಕೊಂದ ನೀಚನನ್ನು ಕೊನೆಗಾಣಿಸಿದ ಹೊರತು ನಾನು ಪಿತೃಸಂಸ್ಕಾರವನ್ನು ಮಾಡುವುದೇ ಇಲ್ಲ'' ಎಂದು ಪ್ರತಿಜ್ಞೆಯನ್ನುಮಾಡಿ ತನ್ನ ಮ್ಲೇಚ್ಛ ಸೈನ್ಯಕ್ಕೆಲ್ಲ ಯುದ್ಧ ಸನ್ನದ್ಧರಾಗಿ ಹೊರಡಬೇಕೆಂದು ಆಜ್ಞಾಪಿಸಿದನು ಅಮಾತ್ಯರಾಕ್ಷಸನೂ ಕೂಡ ಶತ್ರು ನಿಗ್ರಹಕ್ಕೋಸ್ಕರ ಬಗೆಬಗೆಯ ಭೇದೋಪಾಯಗಳನ್ನು ಚಿಂತಿಸಿ ಪಾಟಲೀಪುರದಲ್ಲಿ ತನ್ನ ಕಡೆಯ ಗೂಢಚಾರರನ್ನು ಅಲ್ಲಲ್ಲಿಟ್ಟು ಮ್ಲೇಚ್ಛಸೇನೆಯನ್ನು ಪ್ರೋತ್ಸಾಹಗೊಳಿಸುತ್ತ ಸಮಯ ನಿರೀಕ್ಷಣೆಮಾಡುತ್ತಿದ್ದನು. ಚಾಣಕ್ಯನು ತನ್ನ ಚಾರರಿಂದ ಮಲಯಕೇತು ರಾಕ್ಷಸರು ಒಂದಾಗಿ ಯುದ್ಧಕ್ಕೆ ಬರುವ ಸುದ್ಧಿಯನ್ನು ಕೇಳಿ ತನ್ನ ಮನಸ್ಸಿನಲ್ಲಿ ಸ್ವಲ್ಪವೂ ಹೆದರದ ಆ ರಾಕ್ಷಸನ ಭೇದೋಪಾಯಗಳನ್ನು ಗುಟ್ಟಾಗಿ ತಿಳಿದುಕೊಳ್ಳುತ್ತ ಅವುಗಳಿಗೆ ಪ್ರತಿಕ್ರಿಯೆಯನ್ನು ಚಿಂತಿಸುತ್ತಲಿದ್ದನು

ಒಂದಾನೊಂದುದಿನ ಶುಭಲಗ್ನದಲ್ಲಿ ಆತನು ಚಂದ್ರಗುಪ್ತನು ಪುರಪ್ರವೇಶ ಮಾಡು ವನೆಂತಲೂ ಜನರೆಲ್ಲರೂ ಆದಿನ ದೊಡ್ಡ ಉತ್ಸವ ಮಾಡಬೇಕೆಂತಲೂ ಪ್ರಕಟಿಸಿದನು ಪಟ್ಟಣವೆಲ್ಲಾ ಶೃಂಗಾರವಾಗಿ ಅಲಂಕರಿಸಲ್ಪಟ್ಟಿತು ದಾರುವರ್ಮನೆಂಬುವನು ಮಕರ ತೋರಣಾದಿಗಳಿಂದ ಕೋಟೆಯ ಬಾಗಿಲುಗಳನ್ನೆಲ್ಲ ಅಲಂಕಾರಮಾಡಿದನು ತನ್ನ ಹೇಳಿಕೆ ಯಿಲ್ಲದೆ ಅವನು ಹೀಗೆ ಮಾಡಿದುದನ್ನು ನೋಡಿ ಇವನು ರಾಕ್ಷಸನ ಕಡೆಯುವನಾಗಿ ಕಪ ಟೋಪಾಯದಿಂದ ಮೌರ್ಯನನ್ನು ಕೊಲ್ಲಲಿಕ್ಕೆ ರಾಕ್ಷಸನಿಂದ ನಿಯೋಗಿಸಲ್ಪಟ್ಟ ಶಿಲ್ಪಿಯಾಗಿರ ಬಹುದೆಂತಲೂ ತಾನು ಇದಕ್ಕೆ ಮೊದಲೇ ಪ್ರತಿಕ್ರಿಯೆಯನ್ನು ಮಾಡಬೇಕೆಂತಲೂ ನಿಶ್ಚ ಯಿಸಿ ಲಗ್ನವು ಸಮೀಪಿಸಿದಾಗ ಪರ್ವತರಾಯನ ಸಹೋದರನಾದ ವೈರೋಧಕನಿಗೆ ಅರ್ಧ ರಾಜ್ಯವನ್ನು ಕೊಟ್ಟು ಪುರಪ್ರವೇಶ ಮಾಡಿಸಿದನು

ಹೊಸ ಉಡಿಗೆತೊಡಿಗೆಗಳಿಂದ ಅಲಂಕೃತನಾಗಿ ಚಂದ್ರಗುಪ್ತನ ಪಟ್ಟದ ಆನೆಯ ಮೇಲೆ ಕುಳಿತು ಅರ್ಧರಾತ್ರಿಯಲ್ಲಿ ಪುರಪ್ರವೇಶ ಮಾಡಿದ ಅವನನ್ನು ನೋಡಿ ಜನರೆಲ್ಲರೂ ಇವನೇ ಚಂದ್ರಗುಪ್ತನೆಂದು ತಿಳಿದುಕೊಂಡರು ಮಿತ್ರಸೈನ್ಯದೊಂದಿಗೆ ಆಗಸೆಯ ಬಾಗಿ

ಲಲ್ಲಿ ಪ್ರವೇಶಿಸಿದ ಅವನನ್ನು ಮಾವಟಿಗನನ್ನೂ ರಾಕ್ಷಸನ ಆಜ್ಞೆಪಡೆದಿದ್ದ ದೂತನೊಬ್ಬನು ಅವನೇ ಮೌರ್ಯನೆಂಬ ಭಾವನೆಯಿಂದ ಕೊಲ್ಲಲು ಯತ್ನಿಸಿದನು.

ಆಗಲೇ ದಾರುವರ್ಮನೆಂಬ ಶಿಲ್ಪಿಯು ಯಂತ್ರದ ತೋರಣವನ್ನು ಎಳೆದು ಬಿಟ್ಟನು. ಅದು ಗುರಿತಪ್ಪಿ ಆ ಮಾವಟಿಗನನ್ನು ಚೂರ್ಣಮಾಡಿಬಿಟ್ಟಿತು. ಆ ಶಿಲ್ಪಿಯ ಶ್ರಮವು ವ್ಯರ್ಥವಾಯಿತು ಆಗ ದಾರುವರ್ಮನು ತನ್ನ ಕೈಯ್ಯಲ್ಲಿದ್ದ ಆಯುಧದಿಂದ ಆನೆಯ ಮೇಲೆ ಕುಳಿತಿದ್ದ ರಾಜಕುಮಾರನನ್ನೂ ಅವನ ಅಂಗರಕ್ಷಕನನ್ನೂ ಕೊಂದುಬಿಟ್ಟನು. ಈರೀತಿಯಾಗಿ ಮೌರ್ಯವಧೆಗೋಸ್ಕರ ಮಾಡಿದ್ದ ತಂತ್ರವು ವೈರೋಧಕನ ಮರಣದಲ್ಲಿ ಪರ್ಯವಸಾನವಾಯಿತು.

ಮತ್ತೊಂದು ದಿನ ರಾಕ್ಷಸಪ್ರೇರಿತನಾಗಿದ್ದ ವೈದ್ಯನೊಬ್ಬನು ವಿಷಮಿಶ್ರಿತವಾದ ಔಷಧವನ್ನು ಚಂದ್ರಗುಪ್ತನಿಗೆ ಕೊಡಲಿಕ್ಕೆ ಬಂದನು. ಅಪಾಯವನ್ನು ತಿಳಿದು ಚಾಣಕ್ಯನು ಔಷಧವನ್ನು ಆ ವೈದ್ಯನಿಗೇನೆ ಕೊಡಿಸಿ ಆ ವಿಪತ್ತನ್ನು ತಪ್ಪಿಸಿದನು ಮತ್ತೊಂದು ದಿನ ಮೌರ್ಯನನ್ನು ಕೊಲ್ಲಲು ಬಹು ದ್ರವ್ಯವನ್ನು ಲಂಚವಾಗಿ ಪಡೆದಿದ್ದ ಶಯ್ಯಾಗೃಹದಲ್ಲಿ ಅಧಿಕಾರಿಯೊಬ್ಬನು ಮೌರ್ಯವಧೆಗೆ ಸಮಯ ನೋಡುತ್ತಿರುವನೆಂದು ಕೇಳಿ ಅವನನ್ನು ಕರೆಸಿ ನಿನಗೆ ಇಷ್ಟುಹಣ ಎಲ್ಲಿಂದ ಬಂತೆಂದು ಬೆದರಿಸಿ ಕೇಳಿದನು. ಅವನು ನಿಜಸ್ಥಿತಿಯನ್ನು ಹೇಳಲು ಇಂತಹ ರಾಜದ್ರೋಹಿಯನ್ನು ಉಳಿಸಬಾರದೆಂದು ಅವನಿಗೆ ಚಿತ್ರವಧೆಯನ್ನು ವಿಧಿಸಿದನು. ಚಂದ್ರಗುಪ್ತನು ಮಲಗಿದ್ದಾಗ ಅವನನ್ನು ಕಡಿದು ಹಾಕಬೇಕೆಂದು ಕೆಲವರು ರಾಕ್ಷಸನ ಕಡೆಯ ಚಾರರು ಅವನ ಮಲಗುವ ಮನೆಯಲ್ಲಿ ಗುಟ್ಟಾಗಿ ಸೇರಿದ್ದರು.

ಚಾಣಕ್ಯನು ಇದನ್ನು ತಿಳಿದು ಆ ಮನೆಗೆ ಬೆಂಕಿಯನ್ನು ಹಚ್ಚಿಸಿಬಿಟ್ಟು ಆ ಅಪಾಯದಿಂದಲೂ ತಪ್ಪಿಸಿದನು. ಪ್ರಾಜ್ಞನಾದ ಚಾಣಕ್ಯನ ಬುದ್ಧಿ ವಿಶೇಷಕ್ಕೆ ಎಣೆಯುಂಟೆ? ಈ ರೀತಿಯಲ್ಲಿ ತರಂಗತರಂಗವಾಗಿ ಬರುತ್ತಿದ್ದ ಅಪಾಯಗಳಿಂದ ಚಂದ್ರಗುಪ್ತನನ್ನು ರಕ್ಷಿಸಿ ಚಾಣಕ್ಯನು ಮುಖ್ಯ ಪ್ರಧಾನಿಗಳಿಗೆಲ್ಲಾ ಬೇರೆಬೇರೆ ಕಾರ್ಯಗಳನ್ನು ನಿಯಮಿಸಿ ಅವರಿಗೆಲ್ಲಾ ಚಂದ್ರಗುಪ್ತನಲ್ಲಿ ವಿಶ್ವಾಸವುಂಟಾಗುವಂತೆಯೂ ಸ್ಥಿರವಾದ ಸ್ನೇಹವು ನೆಲೆಗೊಳ್ಳುವಂತೆಯೂ ಏರ್ಪಡಿಸಿದನು. ರಾಕ್ಷಸನ ಪಕ್ಷದವರಾಗಿದ್ದ ಕೆಲವರು ಮಾತ್ರ ಚಾಣಕ್ಯನ ಹೆದರಿಕೆಯಿಂದ ಮೌರ್ಯನಮೇಲೆ ಕೈಮಾಡಲಿಕ್ಕೆ ಯತ್ನವಿಲ್ಲದೆ ಸಮಯವನ್ನು ನಿರೀಕ್ಷಿಸುತ್ತಿದ್ದರು.

ಅದನ್ನು ತಿಳಿದು ಚಾಣಕ್ಯನು ಮಲಯಕೇತುವಿನಿಂದ ರಾಕ್ಷಸನನ್ನು ಅಗಲಿಸಬೇಕೆಂದು ಭಾಗುರಾಯಣನಿಗೆ ಭೋಧಿಸಿ ತಕ್ಕ ಉಪಾಯವನ್ನು ಹೇಳಿ ಕೊಟ್ಟನು. ಭದ್ರ

ಭಟಾದಿ ಮುಖ್ಯ ಪ್ರಧಾನರಿಗೂ ಅವರವರ ಕರ್ತವ್ಯವನ್ನು ಹೇಳಿಕೊಡಲು ಅವರು ಬೇರೆ ಬೇರೆ ವೈರದ ನೆಪವಿಟ್ಟುಕೊಂಡು ಪಾಟಲೀಪುರದಿಂದ ಹೊರಟು ಹೋದರು.

ಈರೀತಿಯಲ್ಲಿ ಚಾಣಕ್ಯನು ರಾಕ್ಷಸನನ್ನು ಅಗಲಿಸುವುದಕ್ಕೆ ಭೇದೋಪಾಯಗಳನ್ನು ಮಾಡುತ್ತಿರಲು ನಿಪುಣಕನೆಂಬ ಚಾರನು ಆತನ ಬಳಿಗೆ ಬಂದು "ಸ್ವಾಮೀ! ಚಂದನದಾಸನೆಂಬ ಸೆಟ್ಟಿಯೂ ಕಾಯಸ್ಥನಾದ ಶಕಟನೂ ಜೀವಸಿದ್ಧಿಯೆಂಬ ಕ್ಷಪಣಕನೂ, ಈ ಮೂವರು ಮಾತ್ರ ನಮಗೆ ಸದ್ಯದಲ್ಲಿ ಶತೃಗಳಾಗಿರುವರು ಇವರಲ್ಲಿ ಚಂದವನದಾಸನು ರಾಕ್ಷಸನ ಕುಟುಂಬದ ಜನರನ್ನು ರಕ್ಷಿಸುತ್ತಿರುವನು ಇದು ರಾಕ್ಷಸನ ಮುದ್ರೆಯ ಉಂಗುರವು, ಆತನ ಹೆಂಡತಿಯ ಕೈಯಿಂದ ಜಾರಿಬಿದ್ದುದು ನನ್ನ ಕೈಗೆ ಸಿಕ್ಕಿದೆ ಮುದ್ರಾರಾಕ್ಷಸವೆಂಬ ಈ ಉಂಗುರದ ದೆಶೆಯಿಂದ ರಾಕ್ಷಸನ ಗೃಹಜನರು ಆ ಸೆಟ್ಟಿಯ ಮನೆಯಲ್ಲಿರುವರೆಂದು ತಿಳಿಸಿದನು. ಆಗ ಚಾಣಕ್ಯನು ಬಹುಸಂತೋಷಪಟ್ಟು ತನ್ನ ಶತ್ರುವು ಕೈಗೆಸಿಕ್ಕಿದನೆಂದು ತಿಳಿದು ಇದನ್ನು ರಾಕ್ಷಸನಿಗೇನೆ ಮಾರಬೆ ಕೆಂದು ಯೋಚಿಸಿ ಪರ್ವತರಾಜನು ಧರಿಸಿದ್ದ ಒಡವೆಗಳನ್ನೆಲ್ಲಾ ಬ್ರಾಹ್ಮಣರಿಗೆ ದಾನಕೊಡಿಸಿದನು ಬಳಿಕ ಆತನು ಸಿದ್ಧಾರ್ಥಕನನ್ನು ಕರೆದು" ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ ಒಂದು ಅವ್ಯಕ್ತವಾದ ಈ ಅಕ್ಷರಗಳನ್ನು ಶಕಟದಾಸನಿಂದ ಒಂದು ಪತ್ರಿಕೆಯಲ್ಲಿ ಬರೆಸಿಕೊಂಡು ಬಾ ಅದನ್ನು ಒಂದು ಲಕ್ಕೋಟೆಯಲ್ಲಿ ಹಾಕಿ ಅದರ ಮೇಲೆ ಅಮಾತ್ಯರಾಕ್ಷಸನ ಉಂಗುರದಿಂದ ಮುದ್ರೆಯನ್ನೊತ್ತಿಸು. ಅದೇ ಕಾರಣವಾಗಿ ಶಕಟದಾಸನನ್ನು ರಾಜದ್ರೋಹಿಯೆಂದು ಅವನಿಗೆ ವಧೆಯನ್ನು ವಿಧಿಸುವೆನು ನೀನು ಅವನನ್ನು ಬಿಡಿಸಿಕೊಂಡು ರಾಕ್ಷಸನ ಬಳಿಗೆ ಕರೆದುಕೊಂಡು ಹೋಗು. ಸ್ನೇಹಿತನ ಪ್ರಾಣವನ್ನು ಉಳಿಸಿದನೆಂದು ಅವನು ನಿನಗೆ ವಿಶೇಷವಾದ ಬಹುಮಾನವನ್ನು ಕೊಡುವನು ಎಂದು ಹೇಳಿ ಮುದ್ರಿಕೆಯನ್ನು ಕೊಟ್ಟು ಅವನಿಗೆ ಕರ್ತವ್ಯ ಕಾರ್ಯಗಳನ್ನು ಬೋಧಿಸಿ ರಾಕ್ಷಸನನ್ನು ಅಲ್ಲಿಂದ ಅಗಲಿಸಲು ಉಪಾಯವನ್ನು ಹೇಳಿಕೊಟ್ಟು ಅವನನ್ನು ಗುಟ್ಟಾಗಿ ಕಳುಹಿಸಿದನು ಅದಷ್ಟೂ ಚಾಣಕ್ಯನ ಅಪೇಕ್ಷೆಯಂತೆ ನಡೆದುಹೋಯಿತು. ಸಿದ್ಧಾರ್ಥಕನು ವಧ್ಯಸ್ಥಾನಕ್ಕೆ ಬಂದು ಘಾತುಕರನ್ನು ಬೆದರಿಸಿ ಶಕಟದಾಸನನ್ನು ಬಿಡಿಸಿಕೊಂಡುಹೋದನು.

ಅಮಾತ್ಯರಾಕ್ಷಸನ ಮಿತ್ರನಾದ ಚಂದನದಾಸನನ್ನು ಕಲೆತು ಶತ್ರುವಿನ ಮನೆ ಜನರನ್ನು ತಂದು ಒಪ್ಪಿಸಬೇಕೆಂದು ಬಹು ವಿಧವಾಗಿ ಕೇಳಿದನು ಸ್ವಾಮಿಭಕ್ತನಾದ ಅವನು ರಾಕ್ಷಸನಲ್ಲಿ ದೃಢವಾದ ಸ್ನೇಹವುಳ್ಳವನಾಗಿದ್ದುದರಿಂದ ನಿಶ್ಶಂಕವಾಗಿಯು ತನ್ನಲ್ಲಿ ಅತನ ಕುಟುಂಬದವರು ಇಲ್ಲವೆಂದು ಹೇಳುತ್ತ ಬಂದನು ಅಷ್ಟರಲ್ಲಿ ಭದ್ರಭಟಾದಿಗಳ ಪ್ರವಾಸದಿಂದ ಜನರೆಲ್ಲ ವ್ಯಾಕುಲಗೊಂಡಿರಲು ಚಾಣಕ್ಯನು ತಾನು ಏನೂ ಅರಿಯದವನಂತೆ ಜನರನ್ನೆಲ್ಲಾ ಉಚಿತ ವಚನಗಳಿಂದ ಸಮಾಧಾನಗೊಳಿಸುತ್ತಿದ್ದನು

ಅತ್ತ ಭಾಗುರಾಯಣನು ಪರ್ವತರಾಜನ ಮಗನ ಬಳಿಗೆ ಹೋಗಿ ಸೇರಿಕೊಂಡನು ಅವನ ಭೇದೋಪಾಯದಿಂದ ಮಲಯಕೇತುವಿಗೆ ರಾಕ್ಷಸನ ಮೇಲೆ ಅನುಮಾನ ಬಂದಿತು. ಆ ರಾಜಪುತ್ರನು ರಾಕ್ಷಸನನ್ನು ''ನೋಡಿ ಅಯ್ಯಾ ನನ್ನ ಆಭರಣಗಳನ್ನೆಲ್ಲ ಕೊಟ್ಟರೂ ನೀನು ಧರಿಸಿಕೊಳ್ಳದೆ ತಿರಸ್ಕರಿಸಿದೆಯಲ್ಲಾ ನಿನಗಿದು ಸರಿಯಲ್ಲ''ವೆಂದು ಗದರಿಸಿದನು. ಆಗ ವಿರಾಧಗುಪ್ತನೆಂಬ ಗೂಢಚಾರನು ರಾಕ್ಷಸನನ್ನು ನೋಡಿ ಪಾಟಲೀಪುರದ ವೃತ್ತಾಂತವನ್ನೆಲ್ಲಾ ಮೊದಲಿನಿಂದ ವಿವರಿಸಿದನು. ಆತನು ತನ್ನ ಬಂಧುಗಳ ವಧೆಯನ್ನೂ ಆಪ್ತನಾದ ಚಂದನದಾಸನಿಗೆ ತನ್ನ ನಿಮಿತ್ತವಾಗಿ ಆದ ಕಾರಾಗೃಹವಾಸವನ್ನೂ ಶಕಟದಾಸನ ಮರಣವನ್ನೂ ಕೇಳಿ ತುಂಬಾ ವಿಷಾದಗೊಂಡನು. ಆವೇಳೆಗೆ ಸರಿಯಾಗಿ ಆ ಶಕಟದಾಸನೊಂದಿಗೆ ಸಿದ್ಧಾರ್ಥಕನೂ ಹೋದನು. ರಾಕ್ಷಸನು ಅವನನ್ನು ನೋಡಿ ಪ್ರೀತಿಯಿಂದ ತನ್ನ ಆಭರಣಗಳನ್ನು ಬಹುಮಾನವಾಗಿ ಕೊಟ್ಟನು. ಮತ್ತು ಇತರ ವೃತ್ತಾಂತಗಳನ್ನೂ ತಿಳಿದು ಭದ್ರಭಟಾದಿಗಳನ್ನು ಹೊರಡಿಸಿದ್ದನ್ನು ಕೇಳಿ ಬಹಳವಾಗಿ ಸಂತೋಷಿಸಿದನು. ಚಾಣಕ್ಯ ಚಂದ್ರಗುಪ್ತರಿಗೆ ಪರಸ್ಪರ ವಿರೋಧವುಂಟಾಗಿದೆ ಎಂಬುದನ್ನು ಕೇಳಿ ಸಭೆಯಲ್ಲಿ ಅದನ್ನು ಬಹಳವಾಗಿ ಒತ್ತಿ ಹೇಳಬೇಕೆಂದು ತನ್ನ ಕಡೆಯವರಾದ ವೈತಾಳಿಕರಿಗೆ ಗುಟ್ಟಾಗಿ ಹೇಳಿ ಕಳುಹಿಸಿದನು. ತರುವಾಯ ಬ್ರಾಹ್ಮಣರು ಆತನ ಆಭರಣಗಳನ್ನು ವಿಕ್ರಯಿಸಲಿಕ್ಕೆ ತಂದಿರುವರೆಂದು ಶಕಟದಾಸನು ರಾಕ್ಷಸನಿಗೆ ತಿಳಿಸಿದನು ಅವನು ಸಿದ್ಧಾರ್ಥಕನಿಂದ ಆಗತಾನೆ ಕೊಡಲ್ಪಟ್ಟ ಆಭರಣಗಳನ್ನು ಸಂತೋಷದಿಂದ ಕೊಂಡುಕೊಂಡನು..

ಅತ್ತ ಚಾಣಕ್ಯನು ಮೌರ್ಯನೊಂದಿಗೆ ನಿಷ್ಕಾರಣವಾಗಿ ಕಪಟವೈರವನ್ನು ನಟಿಸಿದನು. ರಾಕ್ಷಸನು ಇದು ನಿಜವೆಂದು ನಂಬಿ ಸೈನ್ಯವನ್ನು ಕೂಡಿಸಿ ಪಾಟಲೀಪುರದಮೇಲೆ ಮುತ್ತಿಗೆ ಹೊರಡಿಸಿದನು ಚಂದ್ರಗುಪ್ತನು ಪಾಟಲೀಪುರದಲ್ಲಿ ಆದೇವೇಳೆ ಚಂದ್ರಿಕೋತ್ಸವವನ್ನು ಮಾಡಬೇಕೆಂದು ಆಜ್ಞಾಪಿಸಿದನು ಶತ್ರುಗಳು ಒಂದು ಪಟ್ಟಣವನ್ನು ಮುತ್ತಿರುವಾಗ ಈ ಉತ್ಸವವೇತಕ್ಕೆಂದು ಚಾಣಕ್ಯನು ಅವನ ಮೇಲೆ ಗದರಿಸಿಕೊಂಡು ಅಡ್ಡಿಮಾಡಲು ಅವರಿಗೆ ಪರಸ್ಪರ ವಿರೋಧವುಂಟಾಯಿತು ಚಾಣಕ್ಯನ ಉಪೇಕ್ಷೆಯಿಂದ ಬಹುಮಂದಿ ಪಟ್ಟಣದಿಂದ ಹೊರಡಿಸಲ್ಪಟ್ಟರು. ಆಗ ಚಂದ್ರಗುಪ್ತನು ಚಾಣಕ್ಯನ ಮೇಲೆ ದೋಷವನ್ನು ಹೊರಿಸಿ ಅಮಾತ್ಯರಾಕ್ಷಸನೇ ಯೋಗ್ಯನೆಂದು ಹೊಗಳಿದನು ಆಗ ವೈತಾಳಿಕನು ಮೌರ್ಯನಿಗೆ ಕೋಪವು ಮತ್ತಷ್ಟು ಹೆಚ್ಚುವ ಹಾಗೆ ಅವನನ್ನು ಸ್ತೋತ್ರಮಾಡಿ ಚಾಣಕ್ಯನನ್ನು ನಿಂದಿಸುತ್ತ ಬರಲು ಈ ನೆಪದಿಂದ ಅವನು ತನ್ನ ಗುರುವನ್ನು ತಿರಸ್ಕರಿಸಿದನು |ಅತ್ತ ಅಮಾತ್ಯರಾಕ್ಷಸನು ಶತ್ರುವಿನ ವೈರದಿಂದ ಹೊರಡಿಸಲ್ಪಟ್ಟು ಅಲ್ಲಿಗೆ ಬಂದ ಭದ್ರಭಟಾದಿಗಳನ್ನೂ ಕ್ಷಪಣಕನನ್ನೂ ನೋಡಿ ಬಹುಸಂತೋಷಗೊಂಡಿದ್ದನು

(ಮುಂದುವರಿಯುವುದು)

# ಯುದ್ಧ ಮತ್ತು ಸ್ವಾಂರ್ಕ್ಷಗಳ ಪ್ರಯೋಗ

ಜರ್ಮನೀ ಯುದ್ಧವಾದ ಲಾಗಾಯಿತು ಯುದ್ಧವೆಂದರೆ ಪ್ರತಿ ದೇಶದವರಿಗೂ ಎದೆ ಯೊಡೆಯುವಂತಾಯಿತು. ಈ ಯುದ್ಧದಲ್ಲಿ ಪಾಲುಗೊಂಡ ರಾಜ್ಯಗಳವರಿಗೆ ಮಾತ್ರವೇ ಅಲ್ಲದೆ ಪಕ್ಕದಲ್ಲಿದ್ದುಕೊಂಡು ಸುಮ್ಮನೆ ನಿರೀಕ್ಷಿಸುತ್ತಿದ್ದ ಇತರ ದೇಶದವರಿಗೆಲ್ಲರಿಗೂ ಈ ಭಯವು ತಟ್ಟಿತು. ಇದಕ್ಕೆ ದೃಷ್ಟಾಂತವೇನೆಂದರೆ, ಯುದ್ಧರಂಗಕ್ಕಿಳಿದು ಪ್ರತ್ಯಕ್ಷವಾಗಿ ಕೈಗೆ ಕೈ ಕೊಟ್ಟು ಹೋರಾಡಿದಂತಹ ರಾಜ್ಯಗಳಿಗಲ್ಲದೆ ಮಿಕ್ಕ ದೇಶಗಳವರೂಕೂಡಾ ಯುದ್ಧದಿಂದೊದಗತಕ್ಕ ಅನೇಕ ಘೋರವಾದ ಅಪಾಯ ನಷ್ಟಗಳಿಗೆ ತಲೆಗೊಡಬೇಕಾದುದೇ ಆದುದರಿಂದಲೇ ಯುದ್ಧವು ಮುಗಿದನಂತರ ಎಲ್ಲೆಲ್ಲಿಯೂ ಯುದ್ಧ ದೂಷಣೆ, ಶಾಂತಿ ಭೂಷಣೆ, ಇವು ಇಡೀ ಯೂರೋಪು ಖಂಡವನ್ನೇ ವ್ಯಾಪಿಸ ಹತ್ತಿತು. ಕಳೆದ ಯುದ್ಧದಿಂದಾದ ವ್ಯತ್ಯಸ್ತವಾದ ಪರಿಸ್ಥಿತಿಗಳು ಇನ್ನೂ ತಿದ್ದುಪಾಟಿಗೆ ಬರದೆ, ಅನೇಕ ಪ್ರಭುತ್ವದವರೂ ಅನೇಕ ಶಾಸ್ತ್ರಜ್ಞರೂ, ಅನೇಕ ವ್ಯಾಪಾರಸ್ಥರೂ ಕಕಮುಕಲು ಪಡುತ್ತಿರುವುದು ನಮಗೆಲ್ಲಾ ತಿಳಿದ ವಿಷಯವೇ!

ಪಾರಮಾರ್ಥಿಕ ದೃಷ್ಟಿಯಿಂದ ನೋಡಿದಲ್ಲಿ ಯುದ್ಧವು ಸರ್ವ ವಿಧದಿಂದಲೂ ವರ್ಜನೀಯ. ಶಾಂತಿ ಸಂದೇಶವನ್ನು ಸಾರುತ್ತಾ, ಸ್ವಾರ್ಥತ್ಯಾಗ ಪರಾಯಣನಾಗಿ ಅಸಹಕಾರವೆಂಬ ಹೊಸ ಪದ್ಧತಿಗೆ ಆದರ್ಶಪ್ರಾಯನಾದ ಮಹಾತ್ಮ ಗಾಂಧಿಯಂತಹ ತಪಸ್ಸಂಪನ್ನರು ಪ್ರಪಂಚದಲ್ಲಿರುವ ದೇಶಗಳೆಲ್ಲಕ್ಕೂ ನಾಯಕರಾಗಿ ಪ್ರಜಾಪಾನೆಲವನ್ನು ನಿರ್ವಹಿಸಿದರೆ ಭೂಲೋಕದಲ್ಲಿ ಯುದ್ಧವೆಂಬುದು, ಮೊಲದ ಕೊಂಬಿನಂತೆ ಎನ್ನಬಹುದು. ಆದರೆ ಇಹಲೋಕವಾಂಛಾಬದ್ಧರಾಗಿ ಧನಧಾನ್ಯಾಕಾಂಕ್ಷೆಗಳನ್ನು ಹೊಂದಿದ ಸಾಮಾನ್ಯ ಪ್ರಜಾಭೂಪಾಲರುಗಳೆಲ್ಲಾ ಪ್ರಪಂಚದಲ್ಲಿ ಪ್ರಬಲಿಸುವಾಗ ಯುದ್ಧವನ್ನೇ ನಿರ್ಮೂಲಿಸುವುದು ಯಾರಿಂದ ಸಾಧ್ಯ? ಆದರೂ ಕಳ್ಳತನದಲ್ಲೂ ಸತ್ಯತೆಯೆಂಬಂತೆ ಯುದ್ಧಮಾಡುವುದರಲ್ಲಿಯೂ ಧರ್ಮಯುದ್ಧವೆಂದೂ, ಅಧರ್ಮಯುದ್ಧವೆಂದೂ ಲೌಕಿಕ ಸಂಪ್ರದಾಯಗಳನ್ನನುಸರಿಸಿ ವಿಚಕ್ಷಣೆ ಮಾಡಬಹುದಾಗಿದೆ ಲೌಕಿಕ ಧರ್ಮ ಸಂಸ್ಥಾಪನೆಗೋಸ್ಕರ ಒಂದು ಕಾಲದಲ್ಲಿ ಯುದ್ಧವು ಕರ್ತವ್ಯವೇ ಆಗಬಹುದು. ಆದರೂ ಎಲ್ಲ ಯುದ್ಧಗಳನ್ನೂ ಧರ್ಮ ಪ್ರತಿಪಾದಿತಗಳೆದು ಹೇಳಲು ಸಾಧ್ಯವಿಲ್ಲ. ಬಹುಮಟ್ಟಿಗೆ ನಮ್ಮ ಸ್ಥೂಲದೃಷ್ಟಿಗೇ ಅವು ಅಕ್ರಮಗಳೆಂದು ತೋರುತ್ತಿರುವುವು. ಅಂತಹವುಗಳನ್ನು ಮಾನವ ಶಕ್ತಿಯನ್ನುಪಯೋಗಿಸಿ ನಿವಾರಿಸುವುದು ತಪ್ಪೇನೂ ಅಲ್ಲ

ಬೇರೊಂದು ರಹಸ್ಯವೂ ಸಹ ಇದರಲ್ಲಿರುವುದು. ಯುದ್ಧದಿಂದ ಪ್ರಯೋಜನವೇನೆಂದು ನಾವು ಸ್ವಲ್ಪ ವಿಚಾರಮಾಡಿದರೆ ಮೊದಲನೆಯದು ರಾಜ್ಯ ಸಂಪಾದನೆಯೆಂದೂ, ಎರಡನೆಯದು ವಿಜಯಾಭಿಲಾಷೆಯೆಂದೂ ಕಂಡುಬರುವುದು ಇವುಗಳಲ್ಲಿ ಪ್ರಥಮ ಪ್ರಯೋಜನವೇ ಈಗಿನ ದೇಶಾಧೀಶರ ಮಾನಸ ಕ್ಷೇತ್ರಗಳಲ್ಲಿ ನಾಟಿಕೊಂಡಿರುವುದು. ಮನುಷ್ಯನಿಗೆ ಪ್ರತಿಯೊಬ್ಬನಿಗೂ ಸಹಜವಾದ ಗುಣವು "ಆಶೆ". ಇದು ದೇಶಕಾಲಪಾತ್ರಗಳನ್ನನುಸರಿಸಿ ಹಲವು ವಿಧಗಳಾಗಿ ಪರಿವರ್ತನೆಯನ್ನು ಹೊಂದಬಹುದಾದರೂ, ಮೂಲ ಸ್ವರೂಪವು ಒಂದೇ. ಹಾಗೆಯೇ ದೇಶಾಧೀಶರಿಗೂ, ಚಕ್ರವರ್ತಿಗಳಿಗೂ "ಇನ್ನಿಷ್ಟು ರಾಜ್ಯವನ್ನು ಸಂಪಾದಿಸಬೇಕು" ಎಂಬ ಆಶೆಯು ವಿಶೇಷ ಆದರೆ, ಮನುಷ್ಯನು ತನ್ನ ಪಕ್ಕದ ಹೊಲದ ಯಜಮಾನನೊಡನೆ ಹೋರಾಡಿ ಅವನ ಭೂಮಿ ಸ್ವಾಧೀನ ಪಡಿಸಿಕೊಂಡರೆ ಅದು ಅಪರಾಧ (ಕ್ರಿಮಿನಲ್) ವಾಗುವುದಲ್ಲವೇ! ಹಾಗಲ್ಲದೆ ಒಂದು ದೇಶದ ಪ್ರಜೆಗಳೆಲ್ಲರೂ ಸೈನಿಕರಾಗಿ ಪರದೇಶದ ಮೇಲೆ ದಂಡೆತ್ತಿ ಲಕ್ಷಗಟ್ಟಲೆ ಹತ್ಯಗಳನ್ನು ಮಾಡಿ ದೇಶಗಳನ್ನು ಸಂಪಾದಿಸುವುದು ಗೌರವವೂ ರಾಜನೀತಿಯೂ ಆಗುವುದು ಅಂತಹ ಹತ್ಯಗಳನ್ನೆಸಗಿದವರಿಗೆ ಶಿಕ್ಷೆಗಳಿಲ್ಲ. ಇದರ ಮೇಲೆ ಅವರನ್ನು ರಾಜಾದರಪಾತ್ರರನ್ನಾಗಿಯೂ, ಉನ್ನತ ಪದಾಧಿಕಾರಿಗಳನ್ನಾಗಿಯೂ ಮಾಡುವುದು ಲೌಕಿಕಾಚಾರವಾಗಿ ಹೋಗಿದೆ. ಆದ್ದರಿಂದ ಸ್ವಾರ್ಥಪರಾಯಣತ್ವವೂ, ಪರರಾಜ್ಯ ಸಂಪಾದನೆಯೂ ಸಾಮಾನ್ಯ ಧರ್ಮಗಳಾಗುಳ್ಳ ದೇಶಗಳಲ್ಲಿ ಒಬ್ಬೊಬ್ಬರಿಗೆ ಯುದ್ಧವು ಸಂಪ್ರಾಪ್ತವಾದರೆ ಅಂತಹುದನ್ನು ಇತರ ದೊಡ್ಡ ಮನುಷ್ಯರು ನಿವಾರಿಸುವುದಕ್ಕೆ ಪ್ರಯತ್ನಿಸುವುದು ಶುದ್ಧ ಡಂಭಾಚಾರವೂ, ಲೋಕವಂಚನ ಕಾರ್ಯವೂ ಅಲ್ಲದೆ ಬೇರೊಂದಿಲ್ಲ. ಒಂದು ವೇಳೆ ಯಾವ ಕಾರಣದಿಂದಲಾದರೂ ಯುದ್ಧವನ್ನು ತಡೆಯ ಬಲ್ಲರಾದರೂ ಗೆದ್ದವರೆಲ್ಲರೂ, ಕಳ್ಳರು ಕಳ್ಳರು ಸೇರಿ ಊರುಗಳನ್ನು ಹಂಚಿಕೊಂಡಂತೆ ಆಗುತ್ತದೆ. ಇಂತಹ ಸಂದರ್ಭಗಳಲ್ಲಿ ಯುದ್ಧವನ್ನಡಗಿಸುವುದಕ್ಕೆ ಸಾಹೊಂದಿಸುವ ವಿಧಾನವೆಷ್ಟು ಮಟ್ಟಿಗೆ ಸಮಂಜಸವೋ, ಅವುಗಳ ಸ್ವರೂಪವೆಂತಹುದೋ, ಅವುಗಳ ಸಾಮರ್ಥ್ಯವು ಎಷ್ಟು ಮಾತ್ರವೋ, ಅವನ್ನುಪಯೋಗಿಸುವುದಕ್ಕೆ ಮುಂಚೆ ಶೇಖರಿಸಬೇಕಾದ ಪರಿಕರ ಸಾಮಗ್ರಿಗಳಾವುವೋ ವಿಚಾರಿಸೋಣ

ಜರ್ಮನೀ ಯುದ್ಧವಾದನಂತರ ಭಾವೀ ಪ್ರಪಂಚ ಶಾಂತಿಯನ್ನುದ್ದೇಶಿಸಿ ಎಲ್ಲ ದೇಶಗಳವರೂ ಯುದ್ಧನಿವಾರಣಾರ್ಥವಾಗಿ ಒಂದು ದೊಡ್ಡ ಸಂಸ್ಥೆಯನ್ನು ನೆಲೆಗೊಳಿಸಬೇಕೆಂದೆಣಿಸಿ ಮೇಧಾವಿಯಾದ ಆಗಿನ ಅಮೆರಿಕದ ಅಧ್ಯಕ್ಷನಾದ ಉಡ್ರೋವಿಲ್ಸನ್ ಮಹಾಶಯನ ಅನುಮತಿಯ ಮೇರೆಗೆ "ಜನಪದ ಮಹಾಸಭೆ" ಎಂಬ ಅಂತರರಾಷ್ಟ್ರೀಯ ಸಂಸ್ಥೆಯನ್ನು ಸೃಷ್ಟಿಸಿದರು ಆ ಮಹಾ ಸಭೆಯಲ್ಲಿ ಸೇರಿದ ಸಭ್ಯರೆಲ್ಲರೂ ಒಂದು ಕರಾರನ್ನು ಮಾಡಿಕೊಂಡು ಎಲ್ಲರೂ ಅದಕ್ಕೆ ಸಹಿ ಮಾಡಿದರು. ಈ ಕರಾರಿಗೆ

"ಲೀಗ್ ಕವೆನೆಂಟ್" ಎಂದು ಹೆಸರು. ಈ ಕವೆನೆಂಟಿನ ಇತರ ಷರತ್ತುಗಳು ನಮಗೆ ಪ್ರಕೃತದಲ್ಲಿ ಬೇಡವಾದ್ದರಿಂದ ಅದರಲ್ಲಿಯ ಹದಿನಾರನೆಯ ಸೂತ್ರ (ಆರ್ಟಿಕಲ್) ವನ್ನು ಮಾತ್ರ ಕುರಿತು ಮಾತನಾಡಬೇಕಾಗಿದೆ "ಸ್ಯಾಂಕ್ಷನ್‌ಗಳ ವಿಧಿ ವಿಧಾನ" ಗಳೆಲ್ಲವೂ ಈ ಹದಿನಾರನೆಯ ಸೂತ್ರದಲ್ಲಡಗಿವೆ ಮಹಾ ಸಭೆಯಲ್ಲಿ ಸೇರಿದ ಯಾವ ಎರಡು ದೇಶಗಳಿಗೆ ತೊಂದರೆ ಜಗಳಗಳೊದಗಿದರೆ, ಇವುಗಳಿಂದ ಕೈ ಕೈ ಕೂಡುವಷ್ಟು ವಿಷಮಪರಿಸ್ಥಿತಿ ಯೇರ್ಪಟ್ಟರೆ, ಆ ಎರಡು ರಾಜ್ಯಗಳು ಕೂಡಲೇ ಮಹಾ ಸಭೆಗೆ ತಮ್ಮ ವ್ಯವಹಾರವನ್ನು ವರದಿಮಾಡಿ ಸಭೆಯ ಪಂಚಾಯಿತಿಗೆ ಬದ್ಧರಾಗಬೇಕು. ಈ ತೀರ್ಪು ಬರುವುದೊಳಗಾಗಿ ಎಂತಹ ವಿಷಮ ಸ್ಥಿತಿಗಳಲ್ಲಿಯೂ ಈ ಎರಡು ಪಕ್ಷಗಳು ಯುದ್ಧಕ್ಕೆ ಕೈ ಹಾಕಕೂಡದು. ಒಂದು ವೇಳೆ, ಮಹಾಸಭೆಯ ತೀರ್ಪನ್ನೂ ಧಿಕ್ಕರಿಸಿ ನಡೆದ ರಾಜ್ಯಕ್ಕೆ ಮೂರು ತಿಂಗಳ ಕಾಲ ತನ್ನ ಕರ್ತವ್ಯವನ್ನು ಕುರಿತು ಪರ್ಯಾಲೋಚಿಸಲು ಗಡುವು ಕೊಡಲ್ಪಡುವುದು. ಅಲ್ಲಿಗೂ ಅದು ತನ್ನ ದಾರಿಯನ್ನು ತಿದ್ದಿಕೊಳ್ಳದ ಪಕ್ಷಕ್ಕೆ ಮಹಾ ಸಭೆಯು ಆ ದೇಶವನ್ನು ದೋಷಿಯಾಗಿ ಎಣಿಸುವುದು. ಮತ್ತು ಆದೇಶದ ಮೇಲೆ ಸ್ಯಾಂಕ್ಷನ್‌ಗಳನ್ನು ಪ್ರಯೋಗಿಸುವುದು ಅಲ್ಲಿಗೆ ಆಹಾರ ಪದಾರ್ಥಗಳನ್ನು ರಫ್ತುಮಾಡುವುದಿಲ್ಲ; ಅಲ್ಲಿಂದ ಕಳುಹಿಸಲ್ಪಟ್ಟ ಪದಾರ್ಥಗಳನ್ನು ಸ್ವೀಕರಿಸುವುದಿಲ್ಲ; ಆ ದೇಶಕ್ಕೆ ಯುದ್ಧ ಸಾಮಗ್ರಿಗಳನ್ನು ಒದಗಿಸುವುದಿಲ್ಲ; ಇಷ್ಟಕ್ಕೂ ಜಗ್ಗದ ಪಕ್ಷದಲ್ಲಿ ಪ್ರತಿ ಯುದ್ಧವನ್ನು ಮಾಡುವುದು. ಹೇಗಾದರೂ ಆಗಲಿ, ಆ ರಾಜ್ಯವನ್ನು ಸರ್ವ ವಿಧಗಳಿಂದಲೂ ಬಹಿಷ್ಕಾರಮಾಡಿ ಅದು ಯುದ್ಧವನ್ನು ನಿಲ್ಲಿಸಿಬಿಡುವಂತೆ ಮಾಡಿಬಿಡುವುದು. ಇದೇ ಹದಿನಾರನೆಯ ಸೂತ್ರದ ಮುಖ್ಯ ಸಾರಾಂಶ

ಪೂರ್ವದ ಯುದ್ಧಗಳ ಇತಿಹಾಸಗಳಲ್ಲೆಲ್ಲಾ ಇಂತಹ ಮಹಾಸಭೆಯಿದ್ದುದು ಎಲ್ಲಿಯೂ ಕಂಡುಬರುವುದಿಲ್ಲ ಈ ವಿಚಾರದಲ್ಲಿ ಯುದ್ಧದ ಇತಿಹಾಸದಲ್ಲಿ ಇದು ಒಂದು ನೂತನಶಕೆಯ ಪ್ರಾರಂಭವೆಂದೆನ್ನಬಹುದು. ಸಾಮದಾನಭೇದೋಪಾಯಗಳಿಂದ ಯುದ್ಧವನ್ನು ನಿವಾರಿಸುವ ಸಮಯವು ಆಸನ್ನವಾಗಿದೆ. ಇಟಲಿ-ಅಬಿಸೀನಿಯಾ ಯುದ್ಧದಲ್ಲಿ ಲೀಗ್ ಮಹಾಸಭೆಯವರು ಎಷ್ಟುಮಟ್ಟಿಗೆ ಸಮಷ್ಟಿ ಬಾಧ್ಯತೆಯನ್ನು ವಹಿಸಿ ನಿವಾರಿಸುವರಾಗುವರೋ ಎಂದು ಈ ಸಭೆಗೆ ಸೇರಿದ ಇತರ ದೇಶಗಳವರು ಅತಿ ಕುತೂಹಲಾವಿಷ್ಟರಾಗಿ ನಿರೀಕ್ಷಿಸುತ್ತಿದ್ದಾರೆ.

"ಸ್ಯಾಂಕ್ಷನ್" ಎಂದರೆ ನ್ಯಾಯಬದ್ಧವಾಗಿರುವಂತಹ ಪ್ರತ್ಯೇಕ ಶಿಕ್ಷೆ-ಎಂದರೆ ಬಹಿಷ್ಕಾರ-ಎನ್ನಬಹುದು. ಈ ರೀತಿಯ ಬಹಿಷ್ಕಾರಗಳು ಎರಡು: (೧) ಆರ್ಥಿಕ ರೂಪವಾದುವು. (೨) ದಂಡಸ್ವರೂಪವಾದುವು ಇದರಲ್ಲಿ ಎರಡನೆಯ ಬಹಿಷ್ಕಾರ ಪ್ರಯೋಗವನ್ನು ಕುರಿತು ಚರ್ಚಿಸಲು ನಮಗಷ್ಟು ಪ್ರಕೃತವಲ್ಲ ಇಂತಹ ಸ್ಯಾಂಕ್ಷನನ್ನು ಆಚರಣೆಯಲ್ಲಿಟ್ಟವರೂ ಯಾವುದೋ ಒಂದು ವಿಧದಲ್ಲಿ ಯುದ್ಧವನ್ನು ಸವಿಯು

ನವರೇ ಆಗುತ್ತಾರೆ. ಅಲ್ಲದೆ ನಮ್ಮಲ್ಲಿ ಇಂತಹ ಸ್ಯಾಂಕ್ಷನ್‌ನನ್ನು ಪ್ರಯೋಗಿಸುವುದೇ ದುರ್ಲಭವು. ಇನ್ನು ಆರ್ಥಿಕರೂಪವಾದ ಬಹಿಷ್ಕಾರಪ್ರಯೋಗದಿಂದ ದೌರ್ಜನ್ಯರಹಿತ ವಾಗಿ ಯುದ್ಧವನ್ನು ಎದುವರೆಗೆ ತಡೆಯಬಹುದೋ ಸ್ವಲ್ಪ ವಿಚಾರಿಸೋಣ.

ಆಕ್ರಮವಾಗಿ ಯುದ್ಧಕ್ಕೆ ಸನ್ನದ್ಧವಾದ ದೇಶಕ್ಕೆ ಯುದ್ಧ ಸಾಮಗ್ರಿಗಳಿಲ್ಲದಂತೆ ಮಾಡುವುದಾಗಲಿ, ಇಲ್ಲವೇ ಅಂತಹ ಸಾಮಗ್ರಿಗಳು ರಣರಂಗಕ್ಕೆ ಸೇರುವ ಮಾರ್ಗ ವನ್ನೆಲ್ಲಾ ತಡೆಗಟ್ಟುವುದಾಗಲಿ, ಈ ಸ್ಯಾಂಕ್ಷನ್ ಪ್ರಯೋಗದ ಮುಖ್ಯೋದ್ದೇಶ. ರಷ್ಯಾ ವೊಂದನ್ನು ಬಿಟ್ಟು ಮಿಕ್ಕವುಗಳೊಂದೂ ಸ್ವಯಂಸಂಪೂರ್ಣಗಳಲ್ಲ ಒಂದು ದೇಶದವರು ಇನ್ನೊಂದು ದೇಶದವರ ಮೇಲೆ ಯಾವುದಾದರೊಂದಕ್ಕೆ ಹಂಗಿನಲ್ಲಿರಬೇಕಾಗಿರುವುದು. ಐಹಿಕ ಸಂಬಂಧವಿರುವವರೆಗೂ ಮಾನವ ಪ್ರಪಂಚದಲ್ಲಿ ಪರಸ್ಪರ ಸಹಾಯವೂ, ಅನು ಬಂಧವೂ ಸಹಜಧರ್ಮಗಳು. ಆದ್ದರಿಂದ ಇಟಲಿ-ಅಬಿಸೀನಿಯಾ ದೇಶಗಳೆರಡೇ ಯುದ್ಧ ಮಾಡುತ್ತಿದ್ದರೂ ಅವಕ್ಕೆ ಯುದ್ಧ ಸಾಮಗ್ರಿಗಳನ್ನು ಇತರ ದೇಶಗಳವರು ಅಣಿ ಮಾಡಬೇಕಾದುದೇ ಏಕೆಂದರೆ ಅವೆರಡೂ ಸ್ವಯಂಸಮೃದ್ಧಿ ಪಡೆದ ದೇಶಗಳಲ್ಲ

ಯುದ್ಧಕ್ಕೆ ಪ್ರಥಮತಃ ಬೇಕಾದುದು ಶಸ್ತ್ರಗಳು. ಆದ್ದರಿಂದ ತುಪಾಕಿಗಳು, ಫಿರಂಗಿಗಳು, ಮೊದಲಾದ ಆಯುಧಗಳನ್ನು, ಅಕ್ರಮವಾಗಿ ಯುದ್ಧಕ್ಕಿಳಿದ ದೇಶಗಳಿಗೆ ಕಳುಹಿಸದಿರುವುದು ಮೊದಲನೆಯ ಬಹಿಷ್ಕಾರ. ಆಯುಧಗಳನ್ನು ತಯಾರಿಸುವ ದೇಶಗಳವರೆಲ್ಲರೂ ಒಟ್ಟುಗೂಡಿ, ಅಂತಹ ದೇಶಕ್ಕೆ "ನಾವು ಯಾವ ವಿಧವಾದ ಶಸ್ತ್ರ ಗಳನ್ನೂ ರಫ್ತು ಮಾಡಕೂಡದು" ಎಂದು ಪ್ರಭುತ್ವಶಾಸನದಿಂದಾಗಲಿ, ಇಲ್ಲವೇ ತಮ್ಮಿ ಷ್ಟಕ್ಕೆ ತಾವಾಗಲಿ ತೀರ್ಮಾನಿಸಿಕೊಂಡು ಹಾಗೆ ನಡೆದರೆ, ಯುದ್ಧವು ನಾಗಲಾರದು ಇಂತಹ ಶಸ್ತ್ರಬಹಿಷ್ಕಾರವು ಹಿಂದೆ ಬೊಲೀವಿಯಾ ಮತ್ತು ಪರಗ್ವೇ ರಾಜ್ಯಗಳು ಯುದ್ಧಕ್ಕೆ ಕಲೆತಾಗ ಪ್ರಯೋಗಿಸಲ್ಪಟ್ಟಿತಂತೆ. ಆದರೆ, ಇದರಲ್ಲಿ ಎರಡು ಇಬ್ಬಂದಿ ಗಳನ್ನು ಗಮನಿಸಬೇಕಾದುದು. ಒಟ್ಟುಗೂಡತಕ್ಕ ದೇಶಗಳವರೆಲ್ಲರೂ ಮಹಾಸಭೆಗೆ ಸಭ್ಯರಾದ ಹೊರತು ಈ ಬಹಿಷ್ಕಾರವು ಈಡೇರುವುದಿಲ್ಲ. ಈಗ ಆಯುಧಗಳನ್ನು ಉತ್ಪತ್ತಿ ಮಾಡುವ ಜರ್ಮನಿ, ಜಪಾನ್, ಅಮೇರಿಕಾ ದೇಶಗಳಿಗೆ ಮಹಾಸಭೆಯ ಸದಸ್ಯ ತ್ವವಿಲ್ಲ. ಅವರ ಮೇಲೆ ಮಹಾಸಭೆಯವರು ತಮ್ಮ ತೀರ್ಮಾನಗಳನ್ನು ಪ್ರಯೋಗಿಸುವು ದೆಂತು? ಅಷ್ಟೇ ಅಲ್ಲದೆ, ಆಯುಧಗಳನ್ನು ತಾವೇ ಸ್ವತಃ ತಯಾರಿಸಿಕೊಳ್ಳಬಲ್ಲ ಇಟಲಿ ಯಂತಹ ದೇಶದ ಮೇಲೆ ಈ ಶಸ್ತ್ರಬಹಿಷ್ಕಾರಪ್ರಯೋಗವು ಅಷ್ಟಾಗಿ ಅನುಕೂಲಿಸುವು ದಿಲ್ಲ ಮತ್ತು ಯಾವುದೋ ಒಂದು ದೇಶವು ಒಗ್ಗಟ್ಟಾದರೆ ಮಟ್ಟಿಗೆ ಲಾಭವಿಲ್ಲ ಕೊಳ್ಳ ತಕ್ಕವನು ಒಬ್ಬನಿಲ್ಲದಿದ್ದರೆ ಇನ್ನೊಬ್ಬನ ಹತ್ತಿರಕ್ಕೆ ಹೋಗಿ ಕೊಳ್ಳುವನು. ಅದು ವರ್ತಕಾಚಾರಕ್ಕೆ ಸರಿಯಾದ ವ್ಯವಹಾರವಲ್ಲ.

ಯುದ್ಧಕ್ಕೆ ಇನ್ನೂ ಬೇಕಾದುವು ಮದ್ದು ಗುಂಡುಗಳು. ಅವುಗಳನ್ನು ನಿರೋಧಿಸುವುದು ಎರಡನೆಯ ಸ್ಯಾಂಕ್ಷನ್. ಇದನ್ನು ಸರಿಯಾಗಿ ನಡೆಸಿದಲ್ಲಿ ಅತಿ ತೀವ್ರವಾಗಿ ಕೆಲಸಮಾಡಬಲ್ಲುದು ಮದ್ದು ಗುಂಡುಗಳಿಗೆ ಬೇಕಾಗುವ ಸಾಮಾನುಗಳೆಲ್ಲವೂ ಅಮೆರಿಕಾ ಬ್ರಿಟಿಷ್ ಸಾಮ್ರಾಜ್ಯಗಳಲ್ಲಿ ವಿಶೇಷವಾಗಿ ದೊರೆಯುವುವು.

ಈ ಎರಡು ದೇಶಗಳು ಏಕೀಭವಿಸಿದಲ್ಲಿ ರಷ್ಯಾ ಒಂದನ್ನು ಬಿಟ್ಟು ಮಿಕ್ಕ ಯಾವ ದೇಶವನ್ನಾದರೂ ಯುದ್ಧದಿಂದ ತೊಲಗಿಸಬಹುದು ಆದರೆ ಈ ಸಾಮಾನುಗಳನ್ನು ಹೊರಹಾಕತಕ್ಕ ದೇಶವೊಂದಕ್ಕೇ ಈ ಶಾಸನವನ್ನು ಹೊರಿಸಿದರೆ ನಿರರ್ಥಕವಾಗುವುದು ಅವರು ತಟಸ್ಥರಾದ ಇತರ ದೇಶಗಳವರ ಮೂಲಕ ತರಿಸಿಕೊಳ್ಳಬಹುದು ಆಗ ಈ ಸ್ಯಾಂಕ್ಷನ್‌ಗಳು ವ್ಯರ್ಥ ಆದ್ದರಿಂದ ಯುದ್ಧಸಮಯಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಎಲ್ಲರಿಗೂ ಮದ್ದುಗುಂಡುಗಳನ್ನು ಮಾರಕೂಡದೆಂದು ಶಾಸನ ಮಾಡುವುದೇ ಉತ್ತಮ

ಮೂರನೆಯ ತರಗತಿಯ ಸ್ಯಾಂಕ್ಷನ್‌ಗಳು ತಿನ್ನುವ ಆಹಾರ ಸಾಮಗ್ರಿ ಮುಂತಾದುವುಗಳನ್ನು ಕಳುಹಿಸದೆ ತಡೆಗಡಿಯುವುದು ಎಂದರೆ ಹೆಚ್ಚು ಕಡಿಮೆಯಾಗಿ ಎಲ್ಲ ವಿಧವಾದ ಪದಾರ್ಥಗಳನ್ನೂ ರಫ್ತುಮಾಡದೆ ಇರುವುದೆಂದು ಅರ್ಥವಾಗುವುದು ಇವೂ ಕೂಡ ಎರಡನೆಯ ಸ್ಯಾಂಕ್ಷನ್ನಿನಂತೆ ಸಮಷ್ಟಿ ಸಹಾಯದೊಡನೆ, ಸಾರ್ವತ್ರಿಕವಾಗಿ ಆಚರಿಸಬೇಕಾಗಿವೆ ಇವೆಲ್ಲ ಒಂದು ತರಹೆಯ ಬಹಿಷ್ಕಾರಗಳು

ಇನ್ನು ಎರಡನೆಯ ತರಹೆಯ ಬಹಿಷ್ಕಾರಗಳನ್ನು ಕುರಿತು ವಿಚಾರಮಾಡೋಣ. ಅಕ್ರಮವಾಗಿ ಯುದ್ಧಮಾಡುತ್ತಿರುವ ದೇಶಕ್ಕೆ ಧನಸಹಾಯ ದೊರೆಯದಂತೆ ಮಾಡುವುದೇ ಇದರ ಮುಖ್ಯೋದ್ದೇಶ. ಹಣವಿಲ್ಲದಿರುವಾಗ ಕೊಳ್ಳಲು ಪದಾರ್ಥಗಳಿದ್ದರೂ ನಿಷ್ಪ್ರಯೋಜನತಾನೆ? ಈ ತರಹೆಯ ಬಹಿಷ್ಕಾರ ಪ್ರಯೋಗಕ್ಕೆ ಪ್ರಭುತ್ವ ಸಹಾಯವೇ ಬೇಕಿಲ್ಲವಾದರೂ ಯುದ್ಧ ಸಮಯಗಳಲ್ಲಿ ಮಾತ್ರ ಅದನ್ನು ಪಡೆಯೇ ಆಗಬೇಕು. ಇದರಲ್ಲಿ ಮೊದಲನೆಯ ಬಹಿಷ್ಕಾರವೆಂಬುದು ದೋಷಿರಾಜ್ಯದಿಂದ ರಫ್ತಾದ ಪದಾರ್ಥಗಳೊಂದನ್ನೂ ಗ್ರಹಿಸಕೂಡದು. ಇದರಿಂದ ಅವರಿಗೆ ಬರುವ ಹಣವು ನಷ್ಟವಾಗುವುದು. ಇದನ್ನೊಂದುಸಲ ರಷ್ಯಾದ ಮೇಲೆ ಪ್ರಯೋಗಿಸಿದ್ದರಂತೆ ಎರಡನೆಯದು ದುಂಡಾವರ್ತಿ ದೇಶದ ನಾಣ್ಯಗಳನ್ನೂ ನೋಟುಗಳನ್ನೂ ಚಲಾವಣೆ ಇಲ್ಲದಂತೆ ಮಾಡುವುದು. ಆಗ ಪರದೇಶಗಳಲ್ಲಿ ಕೊಂಡ ಪದಾರ್ಥಗಳಿಗೆ ಹಣಸಲ್ಲಿಸಲಾಗದ ಸ್ಥಿತಿ ಬಂದೊದಗುವುದು ಆದ್ದರಿಂದ ವ್ಯಾಪಾರವೇ ನಿಂತುಹೋಗುವುದು. ಮೂರನೆಯ ಬಹಿಷ್ಕಾರವು ಸಾಲ ದೊರೆಯದಂತೆ ಮಾಡುವುದು. ಯಾವ ಸಾಹುಕಾರನೂ ದುಂಡಾವರ್ತಿಯಿಂದ



ಅಂಬರ್ಟ್ಟೊ, ಇಟಲೀ ಯುವರಾಜರು



ಆಸ್ಫಾವೊ ವಾಸಿನ, ಅಬಿಸೀನಿಯಾ ಯುವರಾಜರು



[illegible]




ರಾಸು ಸಯಾಮ್ (ನಡುವೆ) ಟೈಗ್ರಿ ರಾಜರು ಅಬಿಸೀನಿಯಾ ಸರ್ವ ಸೇನಾಧಿಪತಿಗಳು.

ಯುದ್ಧಕ್ಕಿಳಿದ ರಾಜ್ಯಕ್ಕೆ ಸಾಲವಾಗಿ ಹಣವನ್ನೊದಗಿಸುವ ಉದ್ಯಮದಲ್ಲಿ ತೊಡಗನು ಆದ್ದರಿಂದ ಇದನ್ನಷ್ಟು ಹೆಚ್ಚಾಗಿ ನಾವು ಮನನ ಮಾಡಬೇಕಾದ ಅವಶ್ಯಕವಿಲ್ಲ.

ಇನ್ನೊಂದು ವಿಧವಾದ ಸ್ಯಾಂಕ್ಷನ್ನು ಯುದ್ಧಸಾಮುಗ್ರಿಗಳನ್ನು ಕಳುಹಿಸುವ ಮಾರ್ಗಗಳನ್ನು ನಿರೋಧಿಸುವುದು. ಇದಕ್ಕೆ ಉದಾಹರಣೆಯಾಗಿ ಪ್ರಕೃತ ಇಟಲಿಯ ನೌಕಾದಳಕ್ಕೆ ಸುಯೆಜ' ಕಾಲುವೆಯನ್ನು ಮುಚ್ಚಿಬಿಡುವುದೆಂಬುದು ಹತ್ತಿರದ ಮಾರ್ಗವನ್ನು ಕಟ್ಟಿಹಾಕಿದರೆ ದೂರದ ಮಾರ್ಗದಲ್ಲಿ ಎಷ್ಟೋ ಕಷ್ಟನಷ್ಟಗಳೊದಗಿ ಯುದ್ಧಕ್ಕೆ ವಿರಕ್ತಿಯನ್ನು ತಂದು ಬೀರಬಹುದು. ಆದರೆ ಸುಯೆಜ' ಕಾಲುವೆಯನ್ನು ಮುಚ್ಚಿಬಿಡುವುದು ಸಾಮಾನ್ಯ ಕಾರ್ಯವಲ್ಲ. ಹಾಗೆ ಮಾಡುವುದು ನ್ಯಾಯವಿರುದ್ಧವೂ, ಕಟ್ಟುಪಾಡಿಗೆ ಭಿನ್ನವೂ ಸಹ ಆಗುವುದು ೧೮೮೮ ನೆಯ ಸಂವತ್ಸರದ ಸದರೀ ಸುಯೆಜ' ಕೆನಾಲ್ ಕಂಪೆನಿಯವರ ಸೂತ್ರಗಳನ್ನನುಸರಿಸಿ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಎಲ್ಲ ದೇಶಗಳವರಿಗೂ ಅದು ತೆರೆದಿಟ್ಟಿರಬೇಕು ಹಾಗಿರುವಾಗ ಅದನ್ನೀಗ ಇಟಲಿ ನೌಕೆಗಳು ಬರದಂತೆ ಮುಚ್ಚಿಹಾಕುವುದೆಂದರೆ ಅಸಾಧ್ಯವಾದ ಕಾರ್ಯ ಆದರೂ ಎಲ್ಲಾ ಪಾರ್ಟಿಗಳವರೂ ಸಮ್ಮತಿಸಿದಲ್ಲಿ ಅದನ್ನು ಮುಚ್ಚಿಬಿಡಲು ಸಾಧ್ಯವಾಗಬಹುದೇನೋ! ಅಂತಹ ಏಕಕಂಠ ಮತವು ದೊರೆಯುವುದು ದುರ್ಲಭ ಇಟಲಿಗೆ ಬಲಭುಜದಂತಿರುವ ಫ್ರಾನ್ಸು, ಜರ್ಮನೀ, ಟರ್ಕೀ, ಆಸ್ಟ್ರಿಯಾ ದೇಶಗಳು ಸದರೀ ಕಂಪೆನಿಗಳಲ್ಲಿ ಪಾಲುದಾರರಾಗಿದ್ದೂ ಇಟಲಿ ಬಹಿಷ್ಕಾರಪದ್ಧತಿಗಳಿಗೆ ಒಪ್ಪಿಕೊಳ್ಳಬಲ್ಲರೆ? ಇದೂ ಸಹ ಸಾಗದಂತಹ ಉಪಾಯವೇ.

ಇಷ್ಟಕ್ಕೂ ಮೇಲೆ ಹೇಳಿದ ಸುಪ್ರಸಿದ್ಧ ಸ್ಯಾಂಕ್ಷನ್‌ಗಳ ಜಯಾಪಜಯಗಳನ್ನೂ ಲಾಭಾಲಾಭಗಳನ್ನೂ ಹೀಗೆಯೇ ಎಂದು ನಿರ್ಣಯಿಸುವುದಕ್ಕೆ ಸಾಧ್ಯವಿಲ್ಲ ಈ ಬಹಿಷ್ಕಾರಾಚರಣೆಗೆ ಪೂರ್ವಭಾವಿಯಾಗಿ ಎಲ್ಲ ದೇಶಗಳವರಿಗೂ ನಿಷ್ಕಲ್ಮಷವಾದ ಸ್ವಾರ್ಥರಹಿತವಾದ ಸಮಷ್ಟಿ ಸಂಕಲ್ಪಸಿದ್ಧಿಯು ಬೇಕು ಇದು ಸಮಕಟ್ಟುವುದು ಬಹುಕಷ್ಟಸಾಧ್ಯವು ಒಂದು ವೇಳೆ ಅಂತಹ ಸಂಕಲ್ಪಸ್ಥಿತಿಯೂ ಉಂಟಾಗಿ ಈ ಸ್ಯಾಂಕ್ಷನ್‌ಗಳೆಲ್ಲವೂ ಪ್ರಯೋಗಿಸಲ್ಪಟ್ಟರೆ, ಅವರೊಳಗೇ ಹೆಚ್ಚು ನಿರ್ಬಂಧಿತನಾದವನು ಯುದ್ಧಕ್ಕೆ ದಾಳಿ ಹೊರಡಬಹುದಾಗಿದೆ. ಅಂತಹವನಿಗೆ ಈ ಆರ್ಥಿಕ ನಿರ್ಬಂಧವಿಧಾನದಲ್ಲಿ ತಾವಿಲ್ಲದೆ ಹೋಗುವುದು

ಪ್ರಕೃತದಲ್ಲಿ ಇಟಲಿ-ಅಬಿಸೀನಿಯಾ ಯುದ್ಧದಲ್ಲಿ ಇತರ ರಾಷ್ಟ್ರಗಳ ಐಕಮತ್ಯವು ಈ ವೇಳೆಗಾಗಲೇ ಪ್ರಾರಂಭಿಸಿದೆ. ಲೀಗ' ಮಹಾಸಭೆಯು, ಇಟಲಿಯನ್ನು ಪೀಡಕರಾಜ್ಯವಾಗಿ ಎಣಿಸಿದೆ. ಅಮೆರಿಕಾ ರಷ್ಯಾ ಮೊದಲಾದ ದೇಶಗಳವರು ಇಟಲಿಯನ್ನು ತಕ್ಕ ಉಪಾಯಗಳಿಂದ ಬಹಿಷ್ಕರಿಸಲು ಮೊದಲು ಮಾಡಿರುತ್ತಾರೆ.





ಅಬಿಸೀನಿಯಾ ಚಕ್ರವರ್ತಿ ದಂಪತಿಗಳು.



ಮಸೋಲಿನಿ.

ಎಲ್ಲ ಸಹಾಯವನ್ನೂ ಅಬಿಸೀನಿಯಾದವರಿಗೆ ಮಾತ್ರವೇ ಒದಗಿಸುತ್ತಿದ್ದಾರೆ. ಈ ಯುದ್ಧವನ್ನು ನಿವಾರಿಸುವುದಕ್ಕೆ ಎಲ್ಲರಿಗಿಂತಲೂ ಹೆಚ್ಚು ಪಟ್ಟುಡಿಹಿತದಿಂದ ಇಂಗ್ಲೆಂಡು ಇಟಲಿಗೆ ವ್ಯತಿರೇಕವಾಗಿ ಕೆಲಸಮಾಡುತ್ತಿರುವುದಕ್ಕೇನು ಕಾರಣವೋ ತಿಳಿಯದೆ ಇದೆ. ಫ್ರಾನ್ಸಿನವರು ಅಡ್ಡಗೋಡೆಯ ಮೇಲೆ ದೀಪದಂತೆ ವರ್ತಿಸುತ್ತಿದ್ದಾರೆ. ಜರ್ಮನಿ ತಟಸ್ಥಿಸಿದೆ. ಅಮೆರಿಕಾ ಲೀಗಿಗೆ ಮೆಂಬರಲ್ಲವಾದುದರಿಂದ ಇದನ್ನು ಕುರಿತು ಏನನ್ನೂ ಮಾತನಾಡುವುದಿಲ್ಲ ಜಪಾನೀಯರು ಅಬಿಸೀನಿಯಾಕ್ಕೆ ಬೇಕಾದಷ್ಟು ಮದ್ದುಗುಂಡು ಸಾಮಾನುಗಳನ್ನೂ, ಆಯುಧಗಳನ್ನೂ, ವಿಮಾನಗಳನ್ನೂ ಕಳುಹಿಸುತ್ತಿದ್ದಾರೆ. ಇಂತಹ ಸಂದರ್ಭಗಳಲ್ಲಿ ಈ ಯುದ್ಧವು ಯಾವ ರೀತಿ ಪರಿಸಮಾಪ್ತಿಯನ್ನು ಹೊಂದುವುದೋ ಹೇಳತೀರದು ಬಹುಶಃ ಫ್ರಾನ್ಸು ರಾಜೀ ಕುದುರಿಸುವುದಕ್ಕೇನಾದರೂ ಪ್ರಯತ್ನಿಸುವುದೇನೋ! ಅತಿಕಟುಕರವಾಗಿ ಪ್ರಯೋಗಿಸುತ್ತಿರುವ ಸ್ಯಾಂಕ್ಷನ್‌ಗಳಿಂದ ಒಂದು ವೇಳೆ ಇಟಲಿಯು ನಿಸ್ಸಹಾಯವಾಗಿ ಸ್ವದೇಶದಲ್ಲಿಯೇ ಅಂತಃಕಲಹಗಳು ಹುಟ್ಟಿ ಯುದ್ಧವನ್ನು ಉಪಸಂಹಾರಮಾಡಿಕೊಳ್ಳುವುದೋ ವಾಚಕರೇ ನಿರ್ಣಯಿಸಲಿ!

## ಶ್ರೀ ಆದಿ ಕೆ. ಸೇತ್‌ರವರು.

---

ಭಾರತದ ಸಾರ್ವಜನಿಕ ಜೀವನದಲ್ಲಿ ಪಾರ್ಸೀ ಜನಾಂಗದ ಸ್ಥಾನವು ಬಹಳ ಮುಖ್ಯವಾದುದು. ಭಾರತದಲ್ಲಿ ಅವರದು ಬಹಳ ಚಿಕ್ಕಪಂಗಡವಾದರೂ—ಸುಮಾರು ಒಂದು ಲಕ್ಷ ವಿರಬಹುದು —ದೇಶದ ಕೈಗಾರಿಕೆ ಮತ್ತು ರಾಜಕೀಯ ಜೀವನಕ್ಕೆ ದೊಡ್ಡ ಕಾಣಿಕೆಯನ್ನು ಕೊಟ್ಟಿದ್ದಾರೆ ಭಾರತೀಯ ರಾಜಕೀಯದಲ್ಲಿ ಶ್ರೀ ದಾದಾಭಾಯಿ ನವರೋಜಿಯವರ ಹೆಸರು ಬಹಳ ಪವಿತ್ರವಾದುದು ಸರ್ ಫೆರೋಜ್‌ಷಾ ಮೇಥಾರವರು ತಮ್ಮ ಸಮಕಾಲೀನರಲ್ಲಿ ಕೀರ್ತಿಸ್ತಂಭರಾಗಿದ್ದರು. ತಾತಾರವರ ಪೆಟಿಟರ, ಮತ್ತು ಸೇತ್ನರವರ ಮನೆತನಗಳವರೆಲ್ಲ ಲಕ್ಷ್ಮೀಪುತ್ರರೂ ತ್ಯಾಗವೀರರೂ ಅಲ್ಲದೆ ಜ್ಞಾನಿಗಳೂ ಸುಸಂಸ್ಕೃತರೂ ಹೌದು.

ಶ್ರೀ ಆದಿ ಕೆ. ಸೇತ್‌ರವರು ಮಕ್ಕಳ ಪುಸ್ತಕಕ್ಕೆ ಹೊಸ ಆಜೀವಸದಸ್ಯರಾಗಿದ್ದಾರೆ. ಅವರು ಸೇತ್ನಾ ಮನೆತನಕ್ಕೆ ಸೇರಿದವರು. ಅವರ ತಂದೆಯವರು ಬೊಂಬಾಯಿನ ಪೆದ್ದರ್ ರಸ್ತೆಯಲ್ಲಿರುವ ಭವನದಲ್ಲಿ ವಾಸಮಾಡುವುದು ಪಂಗಡದ ನಾಯಕರೂ ಭಾರೀ ಸಾಹುಕಾರರೂ ಆಗಿದ್ದಾರೆ. ಅವರ ಮೂವರು ಮಕ್ಕಳಲ್ಲಿ ಚಿಕ್ಕವರಾದ ಆದಿ ಕೆ. ಸೇತ್‌ರು ಕವಿಗಳಿಂದೂ ಸಾಹಿತಿಗಳಿಂದೂ ಹೆಸರನ್ನು ಪಡೆದಿದ್ದಾರೆ. ಸಾಹಿತ್ಯ ಮತ್ತು ಕಲಾ ಕೃತಿಗಳಿಂದ ಅವರು ತಮ್ಮ ಬೊಂಬಾಯಿ ನಗರದಲ್ಲಿ ಪ್ರಕಾಶಕ್ಕೆ ಬಂದರು.

ಅವರದು ಉದಾರವಾದ ಮನೋಭಾವ. ಎಲ್ಲ ಜಾತಿಗಳಲ್ಲೂ ಅವರಿಗೆ ಸ್ನೇಹಿತರುಂಟು ಈ ದೃಷ್ಟಿಯಿಂದ ಅವರು ತಮ್ಮ ಪಂಗಡದ ಯುವಕರನೇಕರಿಂದ ಭಿನ್ನ ಪ್ರವೃತ್ತಿಯಿಂದ ಕಲಾವಿದರಿದ್ದು, ಅವರಲ್ಲಿ ಕವಿಯ ಕ್ರಿಯಾಶಕ್ತಿಯೂ ವಿಮರ್ಶಕನ ವ್ಯಾಖ್ಯಾನಶಕ್ತಿಯೂ ಇವೆ ಬೊಂಬಾಯಿನ "ಒಂದು ದೊಡ್ಡ ಆರ್ಟ್ ಸೊಸೈಟಿ"ಯ ಕಾರ್ಯದರ್ಶಿಗಳಾಗಿದ್ದಾಗ ಅವರ ವ್ಯವಸ್ಥಾಪಕದಕ್ಷತೆಯೂ ಸ್ನೇಹಪರತೆಯೂ ಹೊರ ಸೂಸಿದುವು. ಅವರ ಹೃದಯವು ಸೌಂದರ್ಯಕ್ಕೆ ಮಿಡಿಯುವುದು. ಅವರು ಹುಟ್ಟು ಸೌಂದರ್ಯಾನ್ವೇಷಿಗಳು. ಪ್ರಕೃತಿಯಲ್ಲಿನ ಮತ್ತು ಮಾನವನಲ್ಲಿನ ಪರಿಪೂರ್ಣತೆಗಳನ್ನು ಮೆಚ್ಚುವಂಥವರು. ಅವರ ಸಾಹಿತ್ಯಕೃತಿಗಳು ಭಾರತದಲ್ಲೂ ಇಂಗ್ಲೆಂಡಿನಲ್ಲೂ ಮೆಚ್ಚಲ್ಪಡುತ್ತಿವೆ. ಅವರ ಜ್ಞಾನಕ್ಕಾಗಿಯೇ ರಾಯಲ್ ಜ್ಯೋಗ್ರಾಫಿಕಲ್ ಸೊಸೈಟಿ ಮತ್ತು ರಾಯಲ್ ಏಷ್ಯಾಟಿಕ್ ಸೊಸೈಟಿಗಳಲ್ಲಿ ಸದಸ್ಯಸ್ಥಾನಗಳು ಲಭಿಸಿದುವು.

ದಿವಂಗತ ಡಾ|| ಆನಿಬೆಸೆಂಟರು ಶ್ರೀ ಆದಿಯವರಲ್ಲಿ ಮಾತೃಭಾವವಿಟ್ಟು, ಸಾಹಿತ್ಯ ಪ್ರಯತ್ನಗಳಲ್ಲಿ ಅವರನ್ನು ಪ್ರೋತ್ಸಾಹಿಸಿದರು ಡಾ|| ಬೆಸೆಂಟರು ದೈವಾಧೀನರಾದಾಗ ಶ್ರೀ ಆದಿಯವರು ಕೃತಜ್ಞತಾಂಜಲಿಯನ್ನು ಆಕೆಗೆ ಅರ್ಪಿಸಿದರು.

ತರುಣ ಕಲಾವಿದ, ಕವಿ, ಸಾಹಿತಿಗಳನೇಕರು ಶ್ರೀ ಆದಿಯವರ ಸ್ನೇಹಿತರು ಭಾರತದ ಸಾಂಸ್ಕೃತಿಕ ನವೀಕರಣದಲ್ಲಿ ಬಹಳ ನೈಜವಾದ ಆಸಕ್ತಿಯನ್ನೂ ಶ್ರದ್ಧೆಯನ್ನೂ ತೋರಿಸುತ್ತಿರುವರು.

ಪದ್ಧತಿಗಳಲ್ಲಿ ಒಂದು ಕ್ರಮ, ನಡತೆಯಲ್ಲಿ ಗಾಂಭೀರ್ಯ ಮತ್ತು ವಿನಯ, ಮಾತಿನಲ್ಲಿ ನಯ ಮತ್ತು ನೇರ, ವ್ಯವಹಾರದಲ್ಲಿ ಸುಂದರವಾದ ಹಿರಿತನ, ನೈಜವಾದ ಪ್ರೇಮ ಇವುಗಳಿಂದ ಶ್ರೀ ಆದಿಯವರು ಎಲ್ಲರಿಗೂ ಮೆಚ್ಚು. ಈಗ ಅವರು ನಮ್ಮ ದಿವಾನ್ ಸಾಹೇಬರ ಗೌರವ ಕಾರ್ಯದರ್ಶಿಗಳಾಗಿರುವುದು ಮೈಸೂರಿನವರಿಗೆ ಆಶ್ಚರ್ಯವಾಗ ಬಹುದು ಈ ಆರಿಕೆಯು ಬಂಧುರವಾದುದು. ಶ್ರೀ ಆದಿ ಕೆ. ಸೇಠ್‌ರಿಗೆ ಸರ್ವಮಂಗಳವಾಗಲೆಂದು ನಾವು ಬಯಸುತ್ತೇವೆ. ಅವರು ಜೀವನರಂಗದಲ್ಲಿ ಜಯಶೀಲರಾಗಲೆಂದೂ ಬಯಸುತ್ತೇವೆ

---

# ಮುದ್ರಾರಾಕ್ಷಸ ಕಥೆ.

ವೈಕುಂಠವಾಸಿ ಶ್ರೀಯಂತ :—(ಶ ರಾಮಸ್ವಾಮಯ್ಯಂಗಾರ್ಯರು ಅನುವಾದಿಸಿದುದು.)

(ಮುಂದುವರಿದುದು)

ಮತ್ತು ಈಗ ಮೌರ್ಯನು ಚಾಣಕ್ಯನನ್ನು ಪರಿತ್ಯಾಗಮಾಡಿದನೆಂಬ ಕರಭಕನೆಂಬ ಚಾರನಿಂದ ಕೇಳಿ ತನ್ನ ಭೇದೋಪಾಯಗಳೆಲ್ಲಾ ಸಫಲವಾದುವೆಂದು ಬಹುಸಂತೋಷ ಗೊಂಡನು. ಆದರೆ ಮಲಯಕೇತುವನ್ನು ಸೇವಿಸುತ್ತಿದ್ದ ಭದ್ರಭಟಾದಿಗಳು ಶತ್ರುಪಕ್ಷದವ ರೆಂದು ರಾಕ್ಷಸನಿಗೆ ಸ್ವಲ್ಪವೂ ಅನುಮಾನ ಬರಲಿಲ್ಲ ಚಾರನು ರಾಕ್ಷಸನ ಸಂಶಯವನ್ನು ಮತ್ತಷ್ಟು ಹೆಚ್ಚಿಸಿದನು ಚಂದ್ರಗುಪ್ತನು ರಾಕ್ಷಸನನ್ನು ಸ್ತೋತ್ರಮಾಡುತ್ತಾ ಚಾಣ ಕ್ಯನನ್ನು ಪರಿತ್ಯಜಿಸಿದನೆಂದು ಹೇಳಿದ್ದರಿಂದ ರಾಕ್ಷಸನು ಸಂತೋಷಗೊಂಡಿರುವನಲ್ಲಾ ಇದು ನಿಜವೇ ಎಂದು ಭಾಗುರಾಯಣನನ್ನು ತಿಳಿಯದೆ ತಮ್ಮ ಶತ್ರುವಿಗೆ ಅವಮಾನ ವಾಯಿತಲ್ಲಾ ಎಂಬ ಸಂತೋಷದಿಂದ ಯುದ್ಧಪ್ರಯತ್ನಮಾಡಿದನು ಮಲಯಕೇತುವೂ ಕೂಡ ರಾಕ್ಷಸನು ಅದ್ಭುತ ಶಕ್ತಿಯುಳ್ಳವನೆಂದು ತಿಳಿದು ಅವನ ವಶದಲ್ಲಿ ದೊಡ್ಡ ಸೈನ್ಯ ವನ್ನು ಜೊತೆಗೊಳಿಸಿ ಪಾಟಲೀಪುರದ ಮೇಲೆ ಹೊರಡಿಸಿದನು.

ಶತ್ರುಸೈನ್ಯವು ಪಟ್ಟಣದ ಸಮೀಪಕ್ಕೆ ಬಂದಿರುವುದನ್ನು ನೋಡಿ ಭಾಗುರಾಯಣನು ನನ್ನ ಮುದ್ರೆಯ ಚೀಟಿಯನ್ನು ತೋರಿಸಿದವರು ಮಾತ್ರ ಪಟ್ಟಣದೊಳಕ್ಕೆ ಬಂದು ಹೋಗತಕ್ಕದ್ದು. ಉಳಿದವರನ್ನು ಬಿಡಬೇಡಿರಿ ಕುಟಿಲಸ್ವಭಾವವಾದ ಚಾಣಕ್ಯತಂತ್ರ ಗಳನ್ನು ಬಲ್ಲವರಿಲ್ಲ. ಅವನ ಕಡೆ ಗೂಢಚಾರರು ಇತರರಿಗೆ ತಿಳಿಯದಂತೆ ಗುಟ್ಟಾಗಿ ಸಂಚರಿಸುತ್ತಿರುವರು ನೀವೆಲ್ಲರೂ ಜಾಗರೂಕರಾಗಿರಿರೆಂದು ಆಜ್ಞಾಪಿಸಿದನು. ಬಳಿಕ ಆ ಜೀವಸಿದ್ಧಿಯು ರಾಕ್ಷಸನ ಮೇಲೆ ಕೋಪಗೊಂಡಿರುವನಂತೆ ನಟಿಸುತ್ತಾ ಅಲ್ಲಿಂದ ಹೊರಡಲಿಕ್ಕೆ ಮುದ್ರೆಯ ಚೀಟಿಯನ್ನು ಕೊಡಬೇಕೆಂದು ಭಾಗುರಾಯಣನನ್ನು ಕೇಳಿ ದನು. ಅವನು ಅಲ್ಲಿ ಪ್ರಸಂಗವಶದಿಂದ ರಾಕ್ಷಸನು ನಿನ್ನ ತಂದೆಯನ್ನು ಕೊಲ್ಲಿಸಿದ ನೆಂದು ಮಲಯಕೇತುವಿಗೆ ವಿಶ್ವಾಸವನ್ನು ಹುಟ್ಟಿಸಿದನು. ಬಳಿಕ ಆ ರಾಜಕುಮಾರ ನಿಂದ ಕೊಡಲ್ಪಟ್ಟ ಮುದ್ರಿಕೆಯನ್ನೂ ಆ ಪತ್ರವನ್ನೂ ತೆಗೆದುಕೊಂಡು ಸಿದ್ಧಾರ್ಥನು

ಹೊರಟನು. ರಾಜಭಟರು ಅವನನ್ನು ಹಿಡಿದು ಹೊಡೆಯಲು ಅವನು ತಾನು ತಂದಿದ್ದ ಭೂಷಣಗಳನ್ನು ತೋರಿಸಿದನು ರಾಜನಾದ ಮಲಯಕೇತುವು ಬ್ರಾಹ್ಮಣರಿಂದ ವಿಕ್ರಯಿಸಲ್ಪಟ್ಟ ಆಭರಣಗಳನ್ನು ನೋಡಿ ತುಂಬಾ ಕೋಪಿಸಿಕೊಂಡನು. ಮತ್ತೂ ಶಕಟದಾಸನಿಂದ ಬರೆಯಲ್ಪಟ್ಟು ತನ್ನ ಮುದ್ರೆಯೊತ್ತಿರುವ ಛಲಪತ್ರವನ್ನು ನೋಡಿ ರಾಕ್ಷಸನೂ ಕೂಡ ಶಕಟದಾಸನಲ್ಲಿಯೂ ಸಂಶಯವುಳ್ಳವನಾಗಿ ಈ ಕಪಟಗಳೊಂದನ್ನೂ ತಿಳಿಯದೆ ನಿರುತ್ತರನಾದನು. ಬಳಿಕ ಮಲಯಕೇತುವು ತುಂಬಾ ಕೋಪಿಸಿಕೊಂಡು ತನ್ನ ಪಟ್ಟಣದಿಂದ ಈಗಲೇ ಹೊರಟುಹೋಗಬೇಕೆಂದು ರಾಕ್ಷಸನಿಗೆ ಆಜ್ಞಾಪಿಸಿದನು ಇದರಿಂದ ಅವನು ನಾಚಿಕೊಂಡು ತನ್ನ ಕತ್ತಿಯೊಂದನ್ನು ಮಾತ್ರ ಕೈಲಿಹಿಡಿದುಕೊಂಡು ಅಲ್ಲಿಂದ ಹೊರಟುಹೋದನು ಅವನು ಮುಂದೆ ಎಲ್ಲಿಗೆ ಹೋಗುವನೋ ಎಂದು ತಿಳಿಯಲಿಕ್ಕೋಸ್ಕರ ಚಾಣಕ್ಯನ ಕಡೆ ಗೂಢಚಾರನಾದ ಮುಂದುರಿಕನೆಂಬುವನು ಆ ರಾಕ್ಷಸನ ಹಿಂದೆಯೇ ಗುಟ್ಟಾಗಿ ಹಿಂಬಾಲಿಸಿ ಹೋಗುತ್ತಿದ್ದನು. ಸಿದ್ಧಾರ್ಥನಾದ ಸಿದ್ಧಾರ್ಥಕನು ಪಾಟಲೀಪುರಕ್ಕೆ ಹೋಗಿ ಚಂದ್ರಗುಪ್ತನಿಗೆಲ್ಲಾ ವೃತ್ತಾಂತವನ್ನೂ ತಿಳಿಸಿ ಆತನಿಂದ ಉತ್ತಮವಾದ ಸನ್ಮಾನವನ್ನು ಪಡೆದನು ಬಳಿಕ ಆ ಮಲಯುಕೇತುವು ತನ್ನ ಸೇನಾನಾಯಕರೈದುಮಂದಿಯೂ ರಾಕ್ಷಸನೊಂದಿಗೆ ಚಾಣಕ್ಯ ಪಕ್ಷಪಾತಿಗಳಾಗಿ ತನಗೆ ಮೋಸಮಾಡಿ ಓಡಿಹೋದರಲ್ಲಾ ಇವರೆಲ್ಲರೂ ಮೋಸಗಾರರೇ ಎಂದು ಆ ಪತ್ರಿಕೆಯಿಂದ ತಿಳಿದು ಭ್ರಾಂತನಾದನು

ಚಾಣಕ್ಯನು ಪುನಃ ಮಂತ್ರಿಪದವಿಯನ್ನು ಕೈಕೊಂಡು ದೊಡ್ಡಸೈನ್ಯದೊಂದಿಗೆ ಹೊರಟು ಮ್ಲೇಚ್ಛಸೇನೆಯನ್ನು ಪರಿಭವಿಸಿ ಜೇಯಧ್ವನಿಮಾಡಿಸುತ್ತಾ ಸಿಕ್ಕಿದವರನ್ನು ಕೈಸೆರೆಹಿಡಿದುಕೊಂಡು ಪುರಪ್ರವೇಶಮಾಡಿದನು. ತನ್ನ ಸೈನ್ಯವೆಲ್ಲವೂ ಶತ್ರುವಿನ ಕೈವಶವಾಗಲು ಸಹಾಯ ಹೀನನಾಗಿ ಏಕಾಂಗಿಯಾಗಿದ್ದ ಮಲಯಕೇತುವನ್ನು ಸಮೀಪವರ್ತಿಗಳಿಂದ ಭದ್ರಭಟಾದಿಗಳು ಬಲಾತ್ಕಾರದಿಂದ ಕಟ್ಟಿಬಿಗಿಸಿದರು. ರಾಕ್ಷಸನು ಆತ್ಮಹತ್ಯಮಾಡಿಕೊಳ್ಳಬೇಕೆಂದು ಇಷ್ಟವುಳ್ಳವನಾಗಿದ್ದರೂ ಚಂದನದಾಸನ ಮೇಲಣ ಸ್ನೇಹದಿಂದ ಪಟ್ಟಣದ ದಾರಿಹಿಡಿದು ಅವನ ವರ್ತಮಾನ ತಿಳಿಯಲಿಕ್ಕಾಗಿ ಒಂದು ಜೀರ್ಣೋದ್ಯಾನದಲ್ಲಿ ಕುಳಿತುಕೊಂಡನು. ಚಾಣಕ್ಯನು ಮುಂದುರಿಕನಿಂದ ಈ ಸುದ್ಧಿಯನ್ನು ಕೇಳಿ ಆ ಸೆಟ್ಟಿಯನ್ನು ಹಿಂಸಿಸಲಿಕ್ಕೆ ಚಂಡಾಲವೇಷಧರನಾದ ಆ ಸಿದ್ಧಾರ್ಥನನ್ನೂ ಮತ್ತೊಬ್ಬ ರಾಜಭಟನನ್ನೂ ನೇಮಿಸಿದನು

ಆ ರಾಜಭಟನು ಸೆಟ್ಟಿಯ ಮೇಲಣ ಸ್ನೇಹದಿಂದ ಅವನ ಮರಣಕ್ಕಾಗಿ ದುಃಖಿಸುತ್ತಾ ತಾನೂ ನೇಣುಹಾಕಿಕೊಂಡು ಸಾಯಬೇಕೆಂದು ರಾಕ್ಷಸನೊಂದಿಗೆ ಜೀರ್ಣೋದ್ಯಾನಕ್ಕೇನೆ ಬಂದನು. ರಾಕ್ಷಸನು ಅವನನ್ನು ನೋಡಿ ನಿನ್ನ ಸಮಾಚಾರವೇನೆಂದು ಕೇಳಲು ಚಂದನದಾಸನನ್ನು ಶೂಲಕ್ಕೆ ಏರಿಸುತ್ತಿರುವರು; ಮಿತ್ರನಾದ ಅವನ ವಧೆಯನ್ನು ಕೇಳಿ ನಾನು ಜೀವದ ಮೇಲೆ ಆಸೆಯಿಲ್ಲದೆ ಉರುಳುಹಾಕಿಕೊಂಡು ಸಾಯಲು ಬಂದಿರುವೆನು ಎಂದು ಹೇಳಿದನು. ರಾಕ್ಷಸನು ಆ ವಾರ್ತೆಯನ್ನು ಕೇಳಿ ತನ್ನ ಖಡ್ಗದಿಂದ ಆ ಘಾತುಕನನ್ನು ಕೊಂದು ಮಿತ್ರನನ್ನು ಬಿಡಿಸಬೇಕೆಂದು ಹೊರಟನು. ಆಗ ಚಾರನು ರಾಕ್ಷಸನನ್ನು ನೋಡಿ ಅಯ್ಯಾ ನೀನು ಕೈಯಲ್ಲಿ ಆಯುಧವನ್ನು ಹಿಡಿದುಕೊಂಡು ಹೋದರೆ ನಿನ್ನನ್ನು ಹತ್ತಿರಸೇರಗೊಡಿಸರು ನಿರಾಯುಧರನ್ನು ಮಾತ್ರವೇ ಅಲ್ಲಿಗೆ ಬಿಡತಕ್ಕುದೆಂದು ಚಾಣಕ್ಯನ ಆಜ್ಞೆಯಾಗಿರುವುದು ಆಯುಧಪಾಣಿಗಳನ್ನು ಕಂಡಕೂಡಲೆ ಕೊಂದುಹಾಕಿಬಿಡುವರೆಂದು ಹೇಳಿದನು. ರಾಕ್ಷಸನು ಆ ಮಾತನ್ನು ಕೇಳಿ ತನ್ನ ಕತ್ತಿಯನ್ನಲ್ಲಿಯೇ ಬಿಸುಟು ಪ್ರಾಣಹೋದರೂ ಚಿಂತೆಯಿಲ್ಲ ಸ್ನೇಹಿತನನ್ನು ಬದುಕಿಸಿದರೆ ಸಾಕೆಂದು ವಧ್ಯಸ್ಥಾನಕ್ಕೆ ತಕ್ಷಣವೇ ಓಡಿದನು ಅವನು ಶೂಲಕ್ಕೆ ಏರಿಸಲ್ಪಡುತ್ತಿರುವ ತನ್ನ ಮಿತ್ರನನ್ನು ನೋಡಿ ಕಣ್ಣೀರು ಸುರಿಸುತ್ತಾ ಆ ಕಟುಕರನ್ನು ಕುರಿತು ಪಾತಕರೇ ಈ ಸೆಟ್ಟಿಯು ನಿರಪರಾಧಿಯು ಈ ಸಾಧುವನ್ನು ಬಿಟ್ಟುಬಿಡಿರಿ. ನಾನೇ ವಧಾರ್ಹನು. ಇವನಿಗೆ ಪ್ರತಿಯಾಗಿ ನನ್ನನ್ನು ಕೊಲ್ಲಿರಿ ಎಂದು ಕೇಳಿಕೊಂಡನು. ಆಗ ಅವರಲ್ಲಿ ಒಬ್ಬ ಶ್ವಪಚನು ಚಾಣಕ್ಯನ ಬಳಿಗೆ ಬಂದು ಈ ಸುದ್ದಿಯನ್ನು ತಿಳಿಸಿದನು ಕೂಡಲೆ ಅವನು ರಾಕ್ಷಸ ಬಳಿಗೆ ಬಂದು ಪ್ರೀತಿಪೂರ್ವಕವಾಗಿ ನಮಸ್ಕಾರ ಮಾಡಿ ಆರ್ಯನೇ ನನ್ನ ಅಪರಾಧವನ್ನು ಕ್ಷಮಿಸು ನಿನ್ನನ್ನಿಲ್ಲಿಗೆ ಕರೆಸಿಕೊಳ್ಳಬೇಕೆಂಬ ನೆಪದಿಂದ ಈ ಕಾರ್ಯಗಳನ್ನೆಲ್ಲಾ ಮಾಡಿದೆನೇ ಹೊರತು ನಿನ್ನ ಮೇಲಣದ್ವೇಷಬುದ್ಧಿಯಿಂದೇನೂ ಮಾಡಿಲ್ಲ ಎಂದು ಪ್ರಾರ್ಥಿಸಿದನು ಚಂದ್ರಗುಪ್ತನೂ ಕೂಡ ಅಲ್ಲಿಗೆ ಬಂದು ಸ್ವಾಮಿಾ ಕುಲಮಂತ್ರಿಗಳಾದ ತಾವು ಮಂತ್ರಿಪದವನ್ನಲಂಕರಿಸಿ ನನಗೆ ಬುದ್ಧಿಹೇಳಿಕೊಂಡು ರಕ್ಷಿಸುತ್ತಾ ಬರಬೇಕೆಂದು ವಿನಯದಿಂದ ಪ್ರಾರ್ಥಿಸಿದನು. ಬಳಿಕ ಚಾಣಕ್ಯನು ರಾಕ್ಷಸನನ್ನು ನೋಡಿ ಅಯ್ಯಾ ನಿನಗೆ ಚಂದನದಾಸನನ್ನು ಬದುಕಿಸಿಕೊಳ್ಳಬೇಕೆಂದು ಆಶೆಯಿದ್ದರೆ ಈತನ ಬಳಿಯಲ್ಲಿ ಮಂತ್ರಿತ್ವವನ್ನು ಸ್ವೀಕರಿಸು. ಇಲ್ಲದಿದ್ದರೆ ಇವನನ್ನು ಕೊಲ್ಲಿಸಿಬಿಡುವುದೇ ಸಿದ್ಧವೆಂದು ತಿಳಿ ಎಂದು ಹೇಳಿದನು. ಆಗ ರಾಕ್ಷಸನು ತಾನು ಮಂತ್ರಿಯಾಗಿರಲು ಇಷ್ಟವಿಲ್ಲದಿದ್ದರೂ

ಕೂಡ ತನ್ನ ಮಿತ್ರನನ್ನು ಕೊಲ್ಲಿಸಿಬಿಡುವರೆಂಬ ಶಂಕೆಯಿಂದ ಮಂತ್ರಿತ್ವವನ್ನು ವಹಿಸಲು ಒಪ್ಪಿಕೊಂಡನು ಇದನ್ನು ಕೇಳಿ ಚಾಣಕ್ಯನು ಅತ್ಯಂತ ಸಂತೋಷಗೊಂಡನು. ಅಷ್ಟರಲ್ಲಿ ಭದ್ರಭಟಾದಿಗಳು ಶತ್ರುವಾದ ಮಲಯ ಕೇತುವನ್ನು ಬಂಧಿಸಿ ತಂದೊಪ್ಪಿಸಿದರು. ಆಗ ಚಾಣಕ್ಯನು ರಾಕ್ಷಸನ ಅನುಮತಿಯಿಂದ ಅವನ ತಪ್ಪನ್ನು ಮನ್ನಿಸಿ ಅವನ ಸ್ವಂತರಾಜ್ಯವನ್ನು ಅವನಿಗೆ ಒಪ್ಪಿಸಿ ಸನ್ಮಾನಮಾಡಿ ಕಳುಹಿದ್ದಲ್ಲದೆ ಸ್ವಾಮಿಭಕ್ತರಲ್ಲಿ ಅಗ್ರಣಿಯಾದ ಚಂದನದಾಸನನ್ನು ಪ್ರೀತಿಯಿಂದ ಕರೆದು ಅವನಿಗೆ ಆ ಪಟ್ಟಣದಲ್ಲಿ ಶ್ರೇಷ್ಠವಾದ ಸೆಟ್ಟಿಪದವಿಯನ್ನು ಕೊಟ್ಟನು ಮತ್ತು ಅವನಂತೆಯೇ ರಾಕ್ಷಸನಿಗಿಷ್ಟರಾದ ಜನರು ಯಾರಾರಿದ್ದರೊ ಅವರಿಗೆಲ್ಲಾ ಆ ಅಮಾತ್ಯನ ಇಷ್ಟದಂತೆ ಬಹುಮಾನ ಸನ್ಮಾನಗಳನ್ನು ಮಾಡಿ ಗೌರವಿಸಿದನು.

ಈ ರೀತಿಯಲ್ಲಿ ಚತುರಮತಿಯಾದ ಚಾಣಕ್ಯನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡು ಜುಟ್ಟನ್ನು ಗಂಟುಹಾಕಿಕೊಂಡು ತಾನು ನಿರಾಶನಾಗಿದ್ದರೂ ಚಂದ್ರಗುಪ್ತನು ಪ್ರೀತಿಯಿಂದ ಅರ್ಪಿಸಿದ ವಸ್ತುಗಳನ್ನು ಸ್ವೀಕರಿಸಿ ಶಾಸ್ತ್ರೋಕ್ತವಾದ ಧರ್ಮಗಳನ್ನಾಚರಿಸುತ್ತಾ ತನ್ನ ಪರ್ಣಶಾಲೆಯಲ್ಲಿದ್ದುಕೊಂಡು ಕಾಲಕಾಲದಲ್ಲಿ ಆ ರಾಜನಿಗೆ ಹಿತೋಪದೇಶ ಮಾಡುತ್ತಾ ರಕ್ಷಿಸುತ್ತಿದ್ದನು ಬುದ್ಧಿವಂತನಾದ ಚಂದ್ರಗುಪ್ತನೂ ಕೂಡ ತನ್ನ ತಂದೆ ಮತ್ತು ಸಹೋದರರ ವಧೆಗೆ ತಕ್ಕ ಪ್ರತಿಕ್ರಿಯೆಮಾಡಿಸಿ ನಿಶ್ಶಾತ್ರವವಾಗಿ ಇದ್ದ ರಾಜ್ಯವನ್ನು ಗುಣಸಂಪನ್ನನಾದ ಅಮಾತ್ಯರಾಕ್ಷಸನ ಸಹಾಯದಿಂದ ಬಹುಕಾಲದ ತನಕ ಪರಿಪಾಲಿಸಿಕೊಂಡು ಸುಖವಾಗಿದ್ದನು.

---

# ಜಾವಾದಲ್ಲಿ

ಜಾವಾದ್ವೀಪದಲ್ಲಿ ಹಿಂದುಗಳು ಹೋಗಿ ವಲಸೆಮಾಡಿ ನಿಂತರು. ಚೈನಾದವರೂ ಅಲ್ಲಿಗೆ ಬಂದಿದ್ದರು. ಆದರೂ ಆ ದ್ವೀಪವಾಸಿಗಳು ಮಹಮ್ಮದೀಯ ಮತವನ್ನು ಅವಲಂಬಿಸುವವರೆಗೆ ಹಿಂದೂ ಜಾತಿ ಮತಸಂಪ್ರದಾಯಗಳೇ ಪ್ರಬಲವಾಗಿದ್ದುವು ಆ ಕಾಲದಲ್ಲಿ ಕಳಿಂಗ (ಈಗಿನ ಗಂಜಾಂ ಬಿಹಾರ್, ಒರಿಸ್ಸಾ ಪ್ರಾಂತಗಳು) ಆಂಧ್ರ ತಮಿಳು ದೇಶಗಳಿಂದ ಇಲ್ಲಿನ ಶಿಲ್ಪಿಗಳು ಅಲ್ಲಿಗೆ ಹಡಗಿನ ಮೇಲೆ ಹೋಗಿ ಬರುತ್ತಿದ್ದರು. ಅಲ್ಲಿರುವ ಶಿಲ್ಪಗಳೆಲ್ಲ ದಕ್ಷಿಣದೇಶದ ಶಿಲ್ಪಿಗಳ ಕೈವಾಡಗಳು ಹೆಚ್ಚು. ಆಗಿನ ಕಾಲದಲ್ಲಿ ಕವಿ, ಗಾಯಕಶಿಲ್ಪಿಗಳು ಎಲ್ಲೆಲ್ಲಿ ಹೆಚ್ಚು ಮೆರೆಯುತ್ತಿದ್ದರೋ ಆಯಾ ರಾಜ್ಯಗಳ ಕೀರ್ತಿಯು ಹೆಚ್ಚಾಗಿದ್ದಿತು ಅದರಿಂದ ಯುದ್ಧದಲ್ಲಿ ಗೆದ್ದ ಅರಸುಗಳು ತಾವು ಗೆದ್ದ ರಾಜ್ಯಗಳಲ್ಲಿದ್ದ ಕವಿಗಾಯಕ ಶಿಲ್ಪಿಗಳನ್ನು ತಮ್ಮ ರಾಜ್ಯಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹಾಗೆಯೇ ರಾಜರು ತಮ್ಮ ರಾಜ್ಯದ ಶಿಲ್ಪಿಗಳು ತಯಾರಿಸಿದ ಅಪೂರ್ವವಸ್ತುಗಳನ್ನು ತಮಗೆ ಬೇಕಾದ ಇತರ ರಾಜರಿಗೆ ಕಳುಹಿಸಿಕೊಡುತ್ತಿದ್ದರು.

ಉತ್ತರ ಹಿಂದೂಸ್ಥಾನದಲ್ಲಿ ಮಹಮ್ಮದೀಯರು ಗೆದ್ದು ತಮ್ಮ ಅಧಿಕಾರವನ್ನು ಸ್ಥಾಪಿಸಿದಂತೆಲ್ಲ ಅಲ್ಲಿದ್ದ ಅನೇಕಾನೇಕ ಹಿಂದೂ ದೇವ ಮಂದಿರಾದಿಗಳನ್ನು ನಾಶಮಾಡಿದಂತೆ, ಜಾವಾದಲ್ಲಿ ಆಗಲಿಲ್ಲ ಈಗಲೂ ಅಲ್ಲಿನ ಪ್ರಜೆಗಳು ಈ ಪುರಾತನ ನಿರ್ಮಾಣಗಳ ಗೌರವದಿಂದ ಕಾಣುತ್ತಾರೆ. ಭೂಕಂಪಾದಿಗಳಿಂದ ಕೆಲಕೆಲವು ಕೊಂಚವಿಕಾರವನ್ನು ಹೊಂದಿದ್ದರೂ ಅವುಗಳನ್ನು ಯಾರೂ ಬೇಕೆಂದು ಕೆಡಿಸಿಲ್ಲ ಈಚೆಗಂತೂ ಅಲ್ಲಿನ ಸರ್ಕಾರವು ಅವುಗಳ ಯೋಗ್ಯತೆಯನ್ನು ಮನಗಂಡು ಅವುಗಳ ಸಂರಕ್ಷಣೆಗೆ ನಡುಕಟ್ಟಿ ನಿಂತಿದೆ

ಜಾವಾ ಶಿಲ್ಪದಲ್ಲಿ ಹಿಂದೂಸ್ಥಾನದಲ್ಲಿರುವಂತೆ ಬಾಗಿಲುವಾಡಗಳು, ಗೂಡುಗಳು ಮೊದಲಾದವುಂಟು. ಆ ಬಾಗಿಲುವಾಡಗಳ ಮೇಲೆ ಸಿಂಹದ ಮುಖಗಳನ್ನು ಇಡುವುದು ಎರಡು ಮಗ್ಗುಲುಗಳಲ್ಲಿ ದ್ವಾರಪಾಲಕರನ್ನೂ ಮಕರಗಳನ್ನೂ ಇಡುವುದು ಇವೆಲ್ಲವೂ ಉಂಟು. ಆದರೆ ಇವು ಜಾವಾದಲ್ಲಿ ಬೇರೆ ರೀತಿಯಾಗಿವೆ ಅಷ್ಟೆ !

ಮೊದಮೊದಲು ಈ ಮಕರಗಳನ್ನು ಗಂಗಾ ಯಮುನಾ ಮೊದಲಾದ ಪುಣ್ಯನದಿಗಳನ್ನು ಸೂಚಿಸಲು ಉಪಯೋಗಿಸುತ್ತಿದ್ದರಂತೆ ! ಅವು ಬರು ಬರುತ್ತ ರೂಪಾಂತರ

ಗಳನ್ನು ಪಡೆದು ಅವುಗಳ ಬಾಲಗಳ ಬಳ್ಳಿಗಳಾಗಿ ನಾನಾ ಅಲಂಕಾರಗಳನ್ನು ಪಡೆದುವು. ಈ ಮಕರಗಳು ಬಾಗಿಲುವಾಡಕ್ಕೆ ಎಂತಹ ಸೌಂದರ್ಯವನ್ನು ಕಲ್ಪಿಸಿವೆಯೆಂಬುದನ್ನು ಮೊದಲನೆಯ ಚಿತ್ರದಲ್ಲಿ ಕಾಣಬಹುದು. ಈ ಚಿತ್ರವು ಬೋರೋ ಬುದರ್' ಎಂಬ ಪಟ್ಟಣದಲ್ಲಿರುವ ದೇವಾಲಯದ ಹೆಬ್ಬಾಗಿಲು.

ಈ ದೇವಾಲಯದಲ್ಲಿ ಒಳಗಿನ ಪ್ರಕಾರದ ಸುತ್ತಲೂ ಇರುವ ಚಿತ್ರಗಳೆಲ್ಲವೂ ಸೇರಿ



ಚಿತ್ರ ಒಂದು

ದರೆ ಸುಮಾರು ೧೦ ಸಾವಿರ ಅಡಿಗಳ ಉದ್ದವಾಗುವಂತೆ? ಕೆಲವೆಡೆಗಳಲ್ಲಿ ಎರಡುವರಸೆಯಾಗಿರುವುದರಿಂದ ಒಟ್ಟು ಸುಮಾರು ಮೂರು ಮೈಲಿಯ ಉದ್ದವಾದರೂ ಆಗಬಹುದು ಇಲ್ಲಿ ಒಟ್ಟು ೧೩೦೦ ಚಿತ್ರಗಳಿವೆ. ಇಷ್ಟು ಚಿತ್ರಗಳನ್ನು ಕಠಿಣವಾದ ಕಲ್ಲು ಹಲಗೆಯ ಮೇಲೆ ಕೆತ್ತುವುದೆಂದರೆ ಎಂತಹ ಅಗಾಧವಾದ ಕಾರ್ಯ! ಅದನ್ನು ಸಾಧಿಸುವುದಕ್ಕೆ ಎಂತಹ ಉತ್ಸಾಹ ಸಹನೆಗಳಿರಬೇಕು!

ಈ ಶಿಲ್ಪಚಿತ್ರಗಳಲ್ಲಿ ಲಲಿತ ವಿಸ್ತರ, ದಿವ್ಯಾವದಾನ, ಜಾತಕಮಾಲ ಗಂಡವ್ಯೂಹ ಮುಂತಾದ ಬೌದ್ಧಗ್ರಂಥಗಳನ್ನು ಅನುಸರಿಸಿ ನಿರ್ಮಿಸಿದ ಅನೇಕಾನೇಕ ಚಿತ್ರಗಳಿವೆ ಬೌದ್ಧಮತದ ಕಥೆಗಳೇ ಹೆಚ್ಚು ಆದರೂ ಬಡವರ ಗುಡಿಸಲು, ರಾಜರ ಅರಮನೆಗಳು, ದರ್ಬಾರುಗಳು, ದೇವಾಲಯಗಳು, ಆಯುಧ ಪಾತ್ರೆಗಳು, ಜಾನುವಾರು (ಜಂತು)ಗಳು, ಗಿಡ ಹುವ್ವು ಮೊದಲಾದವೆಲ್ಲ ಇರುವುದರಿಂದ ಆ ಕಾಲದ ಪ್ರಪಂಚವೇ ಅಲ್ಲಿ ನಿರ್ಮಿತವಾಗಿದೆಯೆನ್ನಬಹುದು ಬೋಧಿಸತ್ತ್ವನ ಧ್ಯಾನಸಮಾಧಿ, ಮಾನವರ ಕಷ್ಟ ಸುಖಗಳು ಮೊದಲಾದವು ಅಲ್ಲಿದ್ದು ಮಾನವನ ಮಾನಸಿಕ ಜೀವನವನ್ನು ಚೆನ್ನಾಗಿ ವ್ಯಕ್ತಪಡಿಸುತ್ತಿವೆ. ಈ ದೇವಾಲಯವನ್ನು ಪ್ರದಕ್ಷಿಣ ಮಾಡಿದ ಯಾತ್ರಿಕರಿಗೆ ಭಾವಪರಿವರ್ತನವು ಆಗುತ್ತಿದ್ದಿತೆಂಬ ನುಡಿಯು ದಿಟ ಎನ್ನುವಂತಹ ಸುಂದರ ದೃಶ್ಯಗಳಿವು.

ಈ ಶಿಲಾಚಿತ್ರಗಳಲ್ಲಿ ೧೨೦ ಬುದ್ಧನನ್ನು ಕುರಿತವು, ಸಾಮಾನ್ಯವಾಗಿ ಬುದ್ಧನ ಜನ್ಮದಿಂದ ನಿರ್ವಾಣದವರೆಗಿನ ಚಿತ್ರಗಳನೆಲ್ಲ ಕೆತ್ತುವುದು ಪದ್ಧತಿ ಆದರೆ ಲಲಿತವಿಸ್ತರದಲ್ಲಿ ಆತನು ಸನ್ಯಾಸವನ್ನು ಪಡೆದವರೆಗೆ ಮಾತ್ರವುಂಟು ಈ ಗ್ರಂಥದಂತೆ ಬೋರೋಬುದರಿನಲ್ಲಿಯೂ ಆತನು ಸನ್ಯಾಸವನ್ನು ಪಡೆದವರೆಗಿನ ಚಿತ್ರಗಳು ಮಾತ್ರ ಚಿತ್ರಿತವಾಗಿವೆ· ಹಾಗೆಯೆ ಹಿಂದೂದೇಶದ ಚಿತ್ರಗಳಿಗಿಂತ ಕೊಂಚ ಭಿನ್ನವಾಗಿವೆ.

ಇಲ್ಲಿನ ಚಿತ್ರಗಳು ಹಿಂದೂದೇಶದ ಸಂಪ್ರದಾಯವನ್ನೇ ಹಿಡಿದಿವೆಯಾದರೂ ಬಡವರ ಮನೆಗಳನ್ನೂ, ವಸ್ತ್ರಭೂಷಣ ಆಯುಧ ಮೊದಲಾದವುಗಳನ್ನೂ ಜಾವಾದಲ್ಲಿ ಆಗಿನ ಕಾಲದಲ್ಲಿದ್ದಂತೆ ತೋರಿಸಿರುವುದರಿಂದ ಈ ಭೇದವು ಸ್ಫುಟವಾಗಿ ಕಾಣುವುದು ಈ ಚಿತ್ರಗಳನ್ನು ಕೆತ್ತಿದ ಶಿಲ್ಪಿಗಳು ಆಂಧ್ರಕಳಿಂಗಗಳಿಂದ ಬಂದವರು. ಆದರಿಂದ ಅಮರಾವತಿಯ ಜಾತಿಯು ಇಲ್ಲಿಯೂ ಕಂಡುಬರುತ್ತದೆ.

ಈ ಜಾತಿಯಲ್ಲಿ ಆನೆಯನ್ನು ಮರಗಳಿಗಿಂತ ದೊಡ್ಡದಾಗಿ ತೋರಿಸುವುದು ಮೊದಲಾದ ಸಂಪ್ರದಾಯಗಳಿವೆ ಇದರಿಂದ ನಾವು ಅಸಹ್ಯಪಡಬೇಕಾಗಿಲ್ಲ. ಆಗಿನವರದು ಇದು ಒಂದು ಪದ್ಧತಿ. ಯಾರು ಮುಖ್ಯವಾಗಿ ಕಣ್ಣಿಗೆ ಬೀಳಬೇಕೋ ಅವರನ್ನು ಮಾತ್ರ ದೊಡ್ಡದಾಗಿ ತೋರಿಸಿ, ಮಿಕ್ಕುದನ್ನು ಸಣ್ಣಗೆ ಮಾಡಿತೋರಿಸುವುದು ಅವರ ಮಾರ್ಗ. ಜನರನ್ನು ತೋರಿಸುವಾಗಲೂ ಅವರ ದೇಹದ ಸೌಂದರ್ಯವನ್ನು ತೋರಿಸುವುದಕ್ಕಿಂತ ಅವರ ಮನಸ್ಸು ಮುಖದಲ್ಲಿ ದೇಹದಲ್ಲಿ ಕಾಣುವಂತೆ ಕೆತ್ತುವುದು ಅವರ ಉದ್ದೇಶ.

ಎರಡನೆಯ ಚಿತ್ರವು ಮಾಯಾದೇವಿಯದು. ಅದರಲ್ಲಿ ತನ್ನ ಹೊಟ್ಟೆಯಲ್ಲಿ ಬೋಧಿಸತ್ವನು ಜನಿಸುವನೆಂದು ತನಗೆ ಆದ ಕನಸನ್ನು ಆಕೆಯು ತನ್ನ ಪತಿಯಾದ ಶುದ್ಧೋಧನನಿಗೆ ಹೇಳಿಕಳುಹಿಸುತ್ತಾಳೆ. ಈ ಕಡೆ ಶುದ್ಧೋಧನನಿಗೆ ಆ ಸೇವಕಿಯು ಬಂದು ಅದನ್ನು

ಅರಿಕೆಮಾಡುತ್ತಾಳೆ. ಅಲ್ಲಿ ಆ ಸೇವಕಿಯು ರಾಣಿಯೆದುರಿಗೂ ರಾಜನೆದುರಿಗೂ ಎಷ್ಟು ವಿನಯವನ್ನು ತೋರಿಸುತ್ತಿದ್ದಾಳೆ! ಹಾಗೆಯೇ ಕೈಯನ್ನು ಅತ್ತ ತೋರಿಸುತ್ತಿರುವುದರಿಂದ ನೋಡುವರ ಮನಸ್ಸು ಅತ್ತ ಕಡೆಗೆ ಹೇಗೆ ಹೊರಳುತ್ತದೆ! ಜೊತೆಗೆ ಅಲ್ಲಿರುವ ಸುಂದರಗಜವು ರಾಜನಿಗೆ ಮುಜರೆಮಾಡಿ "ಬನ್ನಿ ರಾಣಿವಾಸಕ್ಕೆ ಹೋಗೋಣ" ಎಂದು ಬಿನ್ನವಿಸುವುದೋ ಎಂಬಂತೆ ಸೊಂಡಿಲನ್ನು ಎತ್ತಿಕೊಂಡಿದೆ.

ಅದರ ಕೆಳಗೆ ಇರುವ ಚಿತ್ರವು ಅತಿಮನೋಹರವಾದುದು. ಅದು ಶಿಲ್ಪಕಲೆಗೇ ಗೌರವವನ್ನು ತರುವ ಚಿತ್ರ. ಒಂದು ದೇವಾಲಯ, ಮಗ್ಗುಲಲ್ಲಿ ಒಂದು ತಾವರೆಯ ಕೊಳ. ಅದರ ಮಗ್ಗುಲಲ್ಲಿ ಮಾವಿನ ಮರ. ಒಬ್ಬಳು ನೀರು ಸೇದಿಕೊಳ್ಳುತ್ತಿದ್ದಾಳೆ. ಕೆಲವರು ಕೊಡಗಳನ್ನು ತೆಗೆದುಕೊಂಡು ಬರುತ್ತಿದ್ದಾರೆ. ಇನ್ನು ಕೆಲವರು ದೇವಾಲಯಕ್ಕೆ ಹೋಗುತ್ತಿದ್ದಾರೆ. ಮತ್ತೊಬ್ಬಳು ಈ ಕೊನೆಯಲ್ಲಿ ಗೌತಮನ ಉಪದೇಶವನ್ನು ಕೇಳುತ್ತಿದ್ದಾಳೆ.

ಈ ಚಿತ್ರದಲ್ಲಿರುವುದಕ್ಕೆ ಸರಿಯಾಗಿರುವ ಜಾತಕದ ಕಥೆಯೊಂದುಂಟು. ಉತ್ತರ ಹಿಂದೂ ದೇಶದಲ್ಲಿ ಒಬ್ಬ ರಾಜನಿಗೆ ಸುಧನುವೆಂಬ ಕುಮಾರನಾಗಿ ಬುದ್ಧನು ಜನಿಸಿದನು ಅವನು ತರುಣನಾಗಿದ್ದಾಗ ಭೂಮಿಗಿಳಿದು ಬಂದಿದ್ದ ಅಪ್ಸರಸೆಯೊಬ್ಬಳನ್ನು ಬೇಟಗಾರನು ಹಿಡಿದು ತಂದು ಅರಮನೆಗೆ ಒಪ್ಪಿಸಿದನು ದುರ್ಮಾರ್ಗನಾದ ಬ್ರಾಹ್ಮಣಮಂತ್ರಿಯು ಆಕೆಯನ್ನು ಕೊಲ್ಲಿಸಬೇಕೆಂದು ಯತ್ನಿಸಿದನು ಆಕೆಯು ತಪ್ಪಿಸಿಕೊಂಡು ಉಳಿಯಲು ರಾಣಿಯು ಸಹಾಯಮಾಡಿದಳು ಅಪ್ಸರೆಯು ಹೊರಟುಹೋಗುವಾಗ ಒಬ್ಬ ತಪಸ್ವಿಗೆ ತನ್ನ ಅಂಗುಳೀಯವನ್ನು ಕೊಟ್ಟು ತಾನಿರುವೆಡೆಯನ್ನೂ ತನ್ನನ್ನು ಮತ್ತೆ ಪಡೆಯುವ ಬಗೆಯನ್ನೂ ಆತನೊಡನೆ ಹೇಳಿ ರಾಜಕುಮಾರನ ಬಳಿಗೆ ಕಳುಹಿಸಿದಳು ರಾಜಕುಮಾರನು ಆಕೆಯು ಹೇಳಿಕಳುಹಿದ್ದಂತೆ ಹುಡುಕಿಕೊಂಡು ಹೋಗಿ ಆಕೆಯನ್ನು ಸೇರಿದನು.

ಈ ಕಥೆಯನ್ನು ಬೋರೋ ಬುದುರಿನಲ್ಲಿ ೩೦ ಚಿತ್ರಗಳಾಗಿ ಕೊರೆದಿದ್ದಾರೆ. ಈಗ ಕೊಟ್ಟಿರುವ ಚಿತ್ರದಲ್ಲಿ ಸುಧನುವು ಮರದ ಕೆಳಗೆ ಕುಳಿತು ಪರಿಚಾರಿಣಿಯೊಬ್ಬಳೊಡನೆ ಮಾತನಾಡುತ್ತಿರುವ ಭಾವವನ್ನು ಕೆತ್ತಿದೆ ಅಲ್ಲಿ ಆ ಹೆಂಗುಸಿನ ವಿನಯವನ್ನೂ ಆತನು ಮಾತನಾಡುತ್ತಿರುವುದರಲ್ಲಿರುವ ಕುತೂಹಲವನ್ನೂ ಎಷ್ಟು ಚೆನ್ನಾಗಿ ಚಿತ್ರಿಸಿರುವುದು ನೋಡಿ! ಸ್ತ್ರೀಯರ ಸೌಂದರ್ಯ, ಕೊಳದ ರೀತಿ, ದೇವಾಲಯ ಇವೆಲ್ಲವೂ ಅದೆಷ್ಟು ಸೊಗಸಾಗಿವೆ!

ಮೂರನೆಯ ಚಿತ್ರವು ಮಾಯಾ ದೇವಿಯು ರಥವನ್ನು ಹತ್ತಿ ತನ್ನ ಪರಿವಾರದವರೊಡನೆ ಲಂಬಿನೀ ವನಕ್ಕೆ ಹೋದುದನ್ನು ತೋರಿಸುತ್ತದೆ. ಲೋಕಗುರುವಾಗುವ ಮಹಾತ್ಮನನ್ನು ನೀನು ಅಲ್ಲಿ ಪಡೆಯುವೆಯೆಂದು ಆಕೆಗೆ ಕನಸಾಗಿದೆ ಅದಕ್ಕಾಗಿ ತಾನು

ಪರಿವಾರದೊಡನೆ ಅಲ್ಲಿಗೆ ಹೊರಟಿದ್ದಾಳೆ ಕೆಲವರು ರಾಜ ಚಿಹ್ನಗಳಾದ ಛತ್ರಚಾಮರ ಗಳನ್ನು ಹಿಡಿದಿದ್ದಾರೆ. ಮುಂದೆ ಕೆಲವರು ಹೋಗುತ್ತಿದ್ದಾರೆ. ಉಳಿದವರು ಸಂಭ್ರಮ ದಿಂದ ಮಾತನಾಡಿಕೊಂಡು ಹೋಗುತ್ತಿದ್ದಾರೆ. ಅದರ ಕೆಳಗಿರುವುದು ಮತ್ತೊಂದು ಜಾತಕದ ಕಥೆಯ ಚಿತ್ರ. ಒಬ್ಬ ರಾಜಕುಮಾರಿಯು ಒಂದು ದೇವಾಲಯದಲ್ಲಿ ಪೂಜೆ ಮಾಡುತ್ತಿದ್ದಾಳೆ. ಕೆಲವರು ಕೈಯಲ್ಲಿ ಕಾಣಿಕೆಗಳನ್ನು ಹಿಡಿದು ಆಕೆಯ ಅಪ್ಪಣೆಯನ್ನು ಎದುರುನೋಡುತ್ತ ಕುಳಿತಿದ್ದಾರೆ. ಇನ್ನಿಬ್ಬರು ಅತ್ತನಿಂತಿದ್ದಾರೆ. ಈ ಚಿತ್ರವು ಅದೆಷ್ಟು ಮನೋಹರವಾಗಿದೆ!

ನಾಲ್ಕನೆಯ ಚಿತ್ರವೂ ಹೀಗೆಯೇ ಮನೋಹರವಾದುದು. ಬುದ್ಧನು ನಿರ್ವಾಣ ವನು ಹೊಂದಿ ನೈರಂಜನ ನದಿಯಲ್ಲಿ ಸ್ನಾನಮಾಡುವುದಕ್ಕೆ ಇಳಿದಿದ್ದಾನೆ. ಲೋಕದಲ್ಲಿ ರುವ ಮಾನವರು ಇಂದ್ರಿಯಗಳಿಗೆ ಅಧೀನರಾಗಿ ಕಷ್ಟಪಡುವಂತೆ ಇನ್ನು ಮುಂದೆ ಆತನು ಕಷ್ಟಪಡಬೇಕಾಗಿಲ್ಲ. ಆತನ ಚಿತ್ತವಿಂದು ಪರಿಶುದ್ಧವಾಗುತ್ತದೆ. ಬ್ರಹ್ಮಾಂಡದಲ್ಲಿರುವ ಜೀವರಾಶಿಗಳೆಲ್ಲ ಆತನು ಪವಿತ್ರನಾದನೆಂಬುದನ್ನು ಅರಿತಿವೆ ಸಿದ್ಧವಿದ್ಯಾಧರರಾದಿ ಯಾದ ದೇವತೆಗಳು ಸುಗಂಧ ಕುಸುಮಗಳನ್ನು ವರ್ಷಿಸುತ್ತಿದ್ದಾರೆ ಪಾತಾಳಲೋಕ ದಿಂದ ನಾಗರು ಬಂದು ನಮಸ್ಕಾರಮಾಡುತ್ತಿದ್ದಾರೆ ಈ ಚಿತ್ರವನ್ನು ಕೊರೆಯುವುದ ರಲ್ಲಿ ಶಿಲ್ಪಿಯು ಅದೆಷ್ಟು ಕೌಶಲವನ್ನು ತೋರಿದ್ದಾನೆ. ಆ ಬುದ್ಧನ ಮುಖದಲ್ಲಿರುವ ಭಕ್ತಿಯನ್ನು ನೋಡಿ, ಈ ಮೂಲೆಯಲ್ಲಿರುವ ಮೃಗಗಳೆಷ್ಟು ಸುಂದರವಾಗಿವೆ ಅದನ್ನು ನೋಡಿ

ಹಾಗೆಯೇ ಅದರಡಿಯಲ್ಲಿರುವ ಚಿತ್ರವನ್ನೂ ಗಮನಿಸಿ, ಪೂರ್ವದಲ್ಲಿ ನಮ್ಮವರು ಎಂತಹ ನಾವೆಗಳಲ್ಲಿ ಕುಳಿತು ದ್ವೀಪಾಂತರಗಳಿಗೆ ಹೋಗಿ ಬರುತ್ತಿದ್ದರು. ಎಂಬುದನ್ನು ತೋರಿಸುವ ಚಿತ್ರವಿದು ತುಫಾನು ಎದ್ದಿದೆ ವಿಶ್ವಪ್ರಯತ್ನಮಾಡಿ ನಾವೆಯನ್ನು ಉಳಿಸಿಕೊಂಡು ತೀರಕ್ಕೆ ಬಂದು ಮುಟ್ಟಿದ್ದಾರೆ ತೀರದಲ್ಲಿ ಯಾವನೋ ಪುಣ್ಯಾತ್ಮ ನೊಬ್ಬನು ಆತನ ಭಾರ್ಯೆಯೊಡನೆ ಬಂದು ದಣಿದು ಬಳಲಿಬಂದಿರುವ ನಾವಿಕರಿಗೆ ಅನ್ನೋದಕಗಳನ್ನು ನೀಡುತ್ತಿದ್ದಾನೆ ತುಫಾನಿನಿಂದ ಸಮುದ್ರದಲ್ಲಿ ಏಳುತ್ತಿರುವ ತರಂಗ ಗಳನ್ನೂ ಮೋಡಗಳೆದ್ದು ಬರುತ್ತಿರುವುದನ್ನೂ ಶಿಲ್ಪಿಯು ಅದೆಷ್ಟು ಮನೋಹರವಾಗಿ ಚಿತ್ರಿಸಿದ್ದಾನೆ. ಇಂತಹ ಚಿತ್ರಗಳು ಬೋರೋಬುದರಿನಲ್ಲಿ ೧೩೦೦ ಇವೆಯಂತೆ !

ಚಂಡಿಮೆಂಡೂತು ಎಂಬಲ್ಲಿನ ದೇವಾಲಯದಲ್ಲಿರುವ ಅನೇಕ ಚಿತ್ರಗಳಲ್ಲಿ ಶಿಶು ಸಂರಕ್ಷಣೆಯಿಂದು ಪ್ರಸಿದ್ಧಳಾದ ಹಾರೀತಿ ಚಿತ್ರವು ಹೆಸರಾದುದು. ಹಾರೀತಿಯನ್ನು ಉತ್ತರ ಹಿಂದೂಸ್ಥಾನದಲ್ಲಿ ಅಲ್ಲಲ್ಲಿ ಪೂಜಿಸುತ್ತಿದ್ದರಂತೆ ! ಆಕೆಯು ಮೊದಲು ಒಬ್ಬ ಯಕ್ಷಿಣಿ. ರಾಜಗೃಹವೆಂಬ ಪಟ್ಟಣದಲ್ಲಿ ಮಕ್ಕಳನ್ನು ಹಿಡಿದು ತಿನ್ನುತ್ತಿದ್ದಳಂತೆ.

ಆಕೆಯು ತನ್ನ ೫೦೦ ಮಕ್ಕಳಲ್ಲಿ ೪೯೯ ಮಂದಿಯನ್ನು ತಿಂದು ಹಾಕಿದಳಂತೆ ಆಗ ಗೌತಮ ಬುದ್ಧನು ಕೊನೆಯ ಪಿಂಡೋಲನೆಂಬುವನನ್ನು ತನ್ನ ಭಿಕ್ಷಾಪಾತ್ರವನ್ನು ಮರೆಯಾಗಿಟ್ಟು ಆಕೆಯ ಕಣ್ಣಿಗೆ ಬೀಳದಂತೆ ಕಾಪಾಡಿದನಂತೆ. ಅನಂತರ ಆಕೆಗೆ ಉಪದೇಶಮಾಡಿ, ಬೌದ್ಧಭಿಕ್ಷುಗಳು ತಮ್ಮ ಆಹಾರವನ್ನು ಅವಳಿಗೂ ಕೊಡುವೆವೆಂದು ಮಾತುಕೊಟ್ಟ ಮೇಲೆ ಆಕೆಯು ಭಿಕ್ಷುಣಿಯಾದಳಂತೆ ! ಆ ವೇಲೆ ಆ ಶಿಶುಮಾರಿಯು ಶಿಶುಸಂರಕ್ಷಕಳಾದಳೆಂದು ಬೌದ್ಧಗ್ರಂಥಗಳಲ್ಲಿ ಹೇಳಿದೆ. ಈಕೆಗೆ ಅಂದಿನಿಂದ ಮಾಂಸದ ಬಣ್ಣವಾದ ದಾಳಿಂಬದ ಬೀಜಗಳು ಆಹಾರವಂತೆ ! ಈಕೆಯ ಚಿತ್ರಗಳು ಉತ್ತರ ಹಿಂದೂದೇಶದ ಬೌದ್ಧವಿಹಾರಗಳಲ್ಲಿದ್ದುವೆಂದು ಹುಯೆನ್‌ತ್ಸಾಂಗ್, ಐತ್ಸಿಂಗ್ ಮೊದಲಾದವರು ಹೇಳಿದ್ದಾರೆ. ಜಂಬಾಲ (ಕುಬೇರ)ನ ವಿಗ್ರಹದ ಎದುರಾಗಿ ಈ ವಿಗ್ರಹವನ್ನು ಇಡುತ್ತಿದ್ದರಂತೆ ಅನೇಕರು ಕುಬೇರನ ಪತ್ನಿಯಾದ ವಸುಂಧರೆಯೇ ಈ ಹಾರೀತಿಯೆಂದೂ ಅಭಿಪ್ರಾಯಪಡುತ್ತಾರೆ

ಹಾರೀತಿಯು ಒಂದು ಎಳೆಯ ಕಂದನನ್ನು ಎತ್ತಿಕೊಂಡು ಒಂದು ದಾಳಿಂಬದ ಹಣ್ಣನ್ನು ಹಿಡಿದುಕೊಂಡಿರುವಂತೆ ಕೆತ್ತಿದ ಚಿತ್ರಗಳು ಗಾಂಧಾರದಲ್ಲಿವೆ ಆದರೆ ಇಲ್ಲಿ ಹಾಗಿಲ್ಲ ಕೊಂಚ ಭಿನ್ನೈಸಿದೆ ಇಲ್ಲಿ ಹಾರೀತಿಯು ಒಂದು ಮಗುವನ್ನು ಎತ್ತಿಕೊಂಡು ಅದಕ್ಕೆ ಸ್ತನ್ಯವನ್ನು ಕೊಡುತ್ತಿದ್ದಾಳೆ. ಆಕೆಯು ಕುಳಿತಿರುವ ಪೀಠದ ಕೆಳಗೆ ಬಂದು ಪಾತ್ರೆಯಲ್ಲಿ ದಾಳಿಂಬದ ಹಣ್ಣುಗಳಿವೆ ಮಕ್ಕಳು ಅನೇಕವಾಗಿ ಆಕೆಯ ಸುತ್ತಲೂ ಸೇರಿಕೊಂಡು ಸ್ವೇಚ್ಛೆಯಾಗಿ ಆಟವಾಡುತ್ತಿದ್ದಾರೆ. ಆಕೆಯು ಧರಿಸಿರುವ ಕಿರೀಟವಸ್ತ್ರಭೂಷಣಗಳು ಆ ಜಾವಾದೇಶದಲ್ಲಿ ಆಗಿನ ಕಾಲದಲ್ಲಿ ಪ್ರಚಾರದಲ್ಲಿದ್ದವು. ಮಕ್ಕಳ ಲೀಲೆಯೂ ಆಕೆಯ ಸಂತೋಷವೂ ಅದೆಷ್ಟು ಮುದ್ದಾಗಿವೆ! ಶಿಲ್ಪಿಯು ಇಂತಹ ಸುಂದರ ಚಿತ್ರವನ್ನು ಕೆತ್ತಲು ಅದೆಷ್ಟು ಶ್ರಮಪಟ್ಟಿರಬೇಕು !

ಪ್ರಾಂಬನವೆಂಬ ಇನ್ನೊಂದೆಡೆ ಮತ್ತೊಂದು ದೇವಸ್ಥಾನವಿದೆ (ಬ್ರಹ್ಮವನವು ಪ್ರಾಂಬನವಾಗಿದೆ) ಇಲ್ಲಿರುವ ಶಿಲ್ಪವೂ ಅದ್ಭುತವಾದುದು ಇಲ್ಲಿರುವ ಚಿತ್ರಗಳೆಲ್ಲವೂ ಹಿಂದೂಮತಕ್ಕೆ ಸಂಬಂಧಪಟ್ಟವು ಸ್ಫುಟವಾದ ಕೆತ್ತನೆ, ಪ್ರತಿಮೆಗಳಲ್ಲಿ ಭಾವಗಳೂ ಸ್ಫುಟವಾಗಿದ್ದು ಅವು ಜೀವಂತವಾಗಿವೆಯೋ ಎನ್ನುವಂತೆ ತೋರುವುದು ಮೊದಲಾದವುಗಳನ್ನು ಪರಿಗಣಿಸಿ ಇವು ಬೋರೋಬುದರು ಚಿತ್ರಗಳಿಗಿಂತ ಉತ್ತವಾಗಿವೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವುಗಳಲ್ಲಿ ಅಲಂಕಾರವು ಹೆಚ್ಚು. ಜಾವಾದಲ್ಲಿ ಹಿಂದೂಗಳ ಶಿಲ್ಪಕಲೆಯು ಎಷ್ಟು ಉನ್ನತಸ್ಥಿತಿಗೆ ಬಂದಿತ್ತು ಎಂಬುದನ್ನು ಇಲ್ಲಿ ಕಾಣಬಹುದು ಇಲ್ಲಿನ ಕೆಲವು ಚಿತ್ರಗಳನ್ನು ಶಿಲ್ಪಾಚಾರ್ಯರು ಕೆತ್ತಿದರೆಂದೂ ಉಳಿದವುಗಳನ್ನು ಅವರ ಶಿಷ್ಯರು ಮಾಡಿರಬೇಕೆಂದೂ ಸ್ಪಷ್ಟವಾಗಿ ತೋರುತ್ತದೆ. ಪ್ರತಿಯೊಂದು ಚಿತ್ರದಲ್ಲಿಯೂ ಮಾನವನ ಭಾವಗಳನ್ನು ಅತ್ಯದ್ಭುತವಾಗಿ ಬಿಡಿಸಿದ್ದಾರೆ ಹಾಗೆಯೇ ನೋಡುತ್ತಿದ್ದರೆ, ಎದುರಿಗೆ ಇರುವುದು ಕ ಠಿ ಣ ಶಿ ಲೆ ಯೆಂ ಬು ದು ಮರೆತುಹೋಗಿ

ಯಾವುದೋ ಉತ್ತಮ ಕಾವ್ಯವನ್ನು ಓದುತ್ತಿದ್ದೇವೆಯೋ ಎನ್ನಿಸುವಷ್ಟು ಮನೋಹರ ವಾಗಿದೆ ಈ ಚಿತ್ರಗಳ ಸಮುದಾಯ !

ಜಾವಾದಲ್ಲಿ ಆಳಿದ ರಾಜರಲ್ಲಿ ಅನೇಕರು ಶೈವರು. ಆದರೂ ಅವರು ರಾಮಾಯಣ ವನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಅದರಿಂದಲೇ ಇಲ್ಲಿಯೂ ರಾಮಾಯಣದ ಚಿತ್ರ ಗಳು ಹೆಚ್ಚು. ಚಂಪಾದಲ್ಲಿ ರಾಮಮಂದಿರಗಳು ಬೇಕಾದಷ್ಟು ಇದ್ದುವು. ಕಾಂಭೋಜ ದಲ್ಲಿ ಅಂಕೋರುವಾಟು, ಬಾಪು, ಎಂಬ ದೇವಾಲಯಗಳಲ್ಲಿ ರಾಮಾಯಣದ ಉತ್ತಮ ಚಿತ್ರಗಳಿರುವುದು ಮಾತ್ರವೇ ಅಲ್ಲ. ಆ ಮಂದಿರಗಳಲ್ಲಿ ರಾಮಾಯಣ ಪುರಾಣವು



ಚಿತ್ರ ಆರು

ದಿನವೂ ನಡೆಯಲೇಬೇಕೆಂಬ ನಿಯಮವೂ ಉಂಟು. ಬರ್ಮಾ, ಸಯ್ಯಾಂ ದೇಶಗಳಲ್ಲಿ ಈಗಲೂ ರಾಮಾಯಣದ ಕಥೆಗಳನ್ನು ನಾಟ್ಯವಾಗಿ ಪ್ರದರ್ಶಿಸುವುದುಂಟು (ಚಂಪಾ, ಟಿಬೆಟ್ಟುದೇಶಗಳ ಪ್ರಜೆಗಳು ತಾವು ಹನುಮಂತನ ಸಂತತಿಯವರೆಂದು ಹೇಳಿಕೊಳ್ಳುವ ರಂತೆ) ಜಾವಾದ ಪುರಾತನ ಕಾವ್ಯಗಳಲ್ಲಿ ಪ್ರಸಿದ್ಧವಾದ ಸೇರತುರಾಮ ಎಂಬ ಕಾವ್ಯದಲ್ಲಿ ರಾವಣನ ಪೂರ್ವಚರಿತ್ರವುಂಟು. ಹಾಗೆಯೇ ಮಹಮ್ಮದೀಯ ಮತ ಜಾವಾ ಚರಿತ್ರೆ ಗಳೂ ಅದರಲ್ಲಿ ಬರೆದಿವೆ. ತಮಿಳಿನ ಕಂಬ ರಾಮಾಯಣವು ಈ ಜಾವಾ ರಾಮಾಯಣಕ್ಕೆ ಆಧಾರವೆಂಬ ಅಭಿಪ್ರಾಯವು ಕೆಲವರಿಗುಂಟು. ಆದರೆ ಅದು ಸರಿಯೆನ್ನುವುದಕ್ಕೆ ತಕ್ಕಷ್ಟು ಪ್ರಮಾಣಗಳಿಲ್ಲ.

ಪ್ರಾಂಬನದ ರಾಮಾಯಣ ಚಿತ್ರಗಳಿರುವುದು ಒಂದು ಶಿವಾಲಯದಲ್ಲಿ ಈ ಚಿತ್ರ ಗಳು ಯಾವುದಾದರೂ ಒಂದು ಗ್ರಂಥವನ್ನು ಅನುಸರಿಸಿ ಹುಟ್ಟಿರುವಂತೆ ತೋರುವುದಿಲ್ಲ. ಆರನೆಯ ಚಿತ್ರವನ್ನು ನೋಡಿದರೆ ಈ ವಿಷಯವು ಸ್ಪಷ್ಟವಾಗುವುದು. ಇದು ರಾಮಾ

ಯಣ ಚಿತ್ರಗಳಲ್ಲಿ ಮೊದಲನೆಯದು. ಲೋಕವನ್ನು ಸಂತಾಪಗೊಳಿಸುತ್ತಿರುವ ರಾವಣನನ್ನು ಸಂಹರಿಸುವುದಕ್ಕೆ ಅವತರಿಸಬೇಕೆಂದು ದೇವತೆಗಳು ವಿಷ್ಣುವನ್ನು ಪ್ರಾರ್ಥಿಸಲು ಬಂದಿದ್ದಾರೆ ವಿಷ್ಣುವು ಸಮುದ್ರದಲ್ಲಿದ್ದಾನೆ ಸಮುದ್ರವನ್ನು ತೋರಿಸುವುದಕ್ಕೆ ಶಿಲ್ಪಿಯು ಅಲ್ಲಿ ಜಲಚರಗಳನ್ನು ಕೆತ್ತಿದ್ದಾನೆ. ದೇವತೆಗಳ ವಿಗ್ರಹಗಳೆಷ್ಟು ಗಂಭೀರವಾಗಿ ಮನೋಹರವಾಗಿವೆಯೋ ವಿಷ್ಣುವಿನ ವಿಗ್ರಹವೂ ಹಾಗೆಯೇ ಸು ಂ ದ ರ ವಾ ಗಿ ದೆ. ವಿಷ್ಣುವು ಏನೋ ಗಾಢಯೋಚನೆಯಲ್ಲಿದ್ದಾನೆ ಯೆನ್ನುವಂತಿದೆ. ಆತನ ವಾಹನನಾದ ಗರುಡನು ಒಂದು ಕಮಲವನ್ನು ವಿನಯದಿಂದ ಒಪ್ಪಿಸುತ್ತಾ “ ಸ್ವಾಮಿ ! ಅವತಾರ ಮಾಡಿ ಲೋಕವನ್ನುದ್ಧರಿಸು ” ಎಂದು ಕೇಳಿಕೊಳ್ಳುತ್ತ ಮಹಾವಿಷ್ಣುವಿನ ಬಲಗಡೆಯಲ್ಲಿ ಇದ್ದಾನೆ. ಇಂತಹುದೇ ಒಂದು ಚಿತ್ರವನ್ನು ಕಾಳಿದಾಸನು ತನ್ನ ರಘುವಂಶದಲ್ಲಿ ವರ್ಣಿಸಿದ್ದಾನೆ ಆದರೆ ಜಾವಾ ರಾಮಾಯಣದಲ್ಲಿ ಈ ಘಟ್ಟವಿಲ್ಲ

ಮುಂದಿನ ಚಿತ್ರಗಳು ರಾಮಾಯಣ ಕಥೆಯನ್ನು ಕಣ್ಣೆದುರಿಗೆ ನಡೆವಂತೆ ಚಿತ್ರಿಸುತ್ತವೆ. ರಾಮನು ಸೀತೆಯನ್ನು ಹುಡುಕುತ್ತಿರುವಾಗ ಬಾಯಾರಿಕೆಯಿಂದ ಬಳಲುತ್ತಾನೆ. ಆಗ ಲಕ್ಷ್ಮಣನು ಹೋಗಿ ನೀರುತರುತ್ತಾನೆ ಆ ನೀರು ಉಪ್ಪಾಗಿರಲು, ರಾಮನು ಅಳುತ್ತಿರುವ ಸುಗ್ರೀವನ ಕಣ್ಣೀರಿನ ಹೊಳೆಯನೀರು ಅದು ಎಂದು ಅರಿತು ಅಣ್ಣ ತಮ್ಮಂದಿರು ಆ ಕಪೀಶ್ವರನನ್ನು ಹುಡುಕಿಕೊಂಡು ಹೋಗುತ್ತಾರೆ ಈ ಕಥೆಯು ಹಿಂದೂದೇಶದ ರಾಮಾಯಣಗಳಲ್ಲಿ ಇಲ್ಲ. ಹೀಗೆ ಅಲ್ಲಲ್ಲಿ ಕೆಲವು ಬದಲಾವಣೆಗಳಿದ್ದರೂ ರಾಮಾಯಣಕ್ಕಾಗಲೀ ರಾಮನಿಗಾಗಲೀ ಕಳಂಕವನ್ನು ಹಚ್ಚುವ ಬದಲಾವಣೆಗಳು ಮಾತ್ರ ಇಲ್ಲ ಜಾವಾದ್ವೀಪದ ಪೂರ್ವಭಾಗದಲ್ಲಿರುವ ದೇವಾಲಯಗಳ ಚಿತ್ರಗಳಲ್ಲಿ ಶಿಲ್ಪಕಲೆಯ ತೇಜಸ್ಸು ಇಳಿಮೊಗವಾಗಿದೆ ಆಗಲೇ ಜಾವಾದ್ವೀಪದ ಪೂರ್ವನಿವಾಸಿಗಳ ರುಚಿಗೆ ತಕ್ಕಂತೆ ಅಲಂಕಾರಾದಿಗಳೂ ಬದಲಾಯಿಸಿವೆ

ಬ್ಲಿಟಾರು ಬಳಿಯಿರುವ ಚಂಡಿಪನಾತರಣದಲ್ಲಿ ಮೇಲೆ ಕೃಷ್ಣಚರಿತ್ರೆ ಕೆಳಗೆ ರಾಮಚರಿತ್ರೆ ಹೀಗೆ ಚಿತ್ರಗಳನ್ನು ಕೊರೆದಿದ್ದಾರೆ ಹನುಮಂತನು ಲಂಕೆಗೆ ಹೋಗುವುದು, ಅಶೋಕವನದಲ್ಲಿ ಸೀತೆಯನ್ನು ಕಾಣುವುದು, ರಾವಣನು ಇಬ್ಬರು ರಾಣಿಯರೊಡನೆ ಕುಳ್ಳಿರುವುದು ಹನುಮಂತನು ರಾಕ್ಷಸರನ್ನು ಸಂಹರಿಸುವುದು, ಮೊದಲಾದ ಸುಂದರಕಾಂಡ ಯುದ್ಧಕಾಂಡ ದೃಶ್ಯಗಳು ಬಹಳ ಮನೋಹರವಾಗಿವೆ, ಮೇಘಗಳನ್ನೇ ಜಂತುಗಳಂತೆ, ಮನುಷ್ಯರಂತೆ ತೋರಿಸಿರುವುದುಂಟು! ಅದು ಭಾರತೀಯ ಶಿಲ್ಪದಲ್ಲಿ ಅಪರೂಪ ! ಚೀನಾ ಸಂಪ್ರದಾಯವದು.

ಹೀಗೆ ಹೊರಗೆ ಗೋಡೆಗಳ ಮೇಲೆ ಹಿಂದೂ ಸಂಪ್ರದಾಯಕ್ಕೆ ಕೊಂಚ ಭಿನ್ನವಾಗಿರುವುದು ಕಂಡುಬಂದರೂ ಗರ್ಭಗುಡಿಗಳಲ್ಲಿರುವ ಚಿತ್ರಗಳು ಮಾತ್ರ ಶುದ್ಧಭಾರತೀಯ ಸಂಪ್ರದಾಯದವು. ಕೊಂಚಭೇದವುಂಟು. ಆದರೆ ಅದು ಅಷ್ಟು ಪ್ರಬಲವಾಗಿಲ್ಲ.

---

# ಕುಮಾರಸಂಭವ

ಉತ್ತರದಲ್ಲಿ ಹಿಮಾಲಯವೆಂಬ ಪರ್ವತವುಂಟು ಆ ಗಿರಿರಾಜನನ್ನು ದೇವತೆಗಳೂ ಆಶ್ರಯಿಸಿರುವರು. ಅದು ಪೂರ್ವ ಪಶ್ಚಿಮವಾಗಿ ಸಮುದ್ರದಿಂದ ಸಮುದ್ರದವರೆಗೂ ಭೂಮಿಯನ್ನು ಅಳೆಯುವ ಕೋಲೋ ಎಂಬಂತೆ ಹಬ್ಬಿರುವುದು. ಅಲ್ಲಿ ಆನೆಗಳು, ಸಿಂಹಗಳು ಮೊದಲಾದ ಭಾರಿಭಾರಿಯ ಜಂತುಗಳುಂಟು. ಆನೆಗಳು ಸರಲವೆಂಬ ಮರಗಳಿಗೆ ಕೆನ್ನೆಯನ್ನು ತಿಕ್ಕಿದಾಗ ಅವುಗಳಿಂದ ಹಾಲುಸುರಿದು, ಆ ಪರ್ವತ ಭಾಗವೆಲ್ಲ ಸುಗಂಧಿತವಾಗಿರುವುದು ಆ ಆನೆಗಳನ್ನು ಸಿಂಹಗಳು ಹೊಡೆದು ಅವುಗಳ ಕುಂಭಸ್ಥಳದ ಮುಕ್ತಾಫಲಗಳನ್ನು ಚೆಲ್ಲಾಡಿರುವುವು. ಕಿರಾತಸ್ತ್ರೀಯರು ಅವುಗಳನ್ನು ಆರಿಸಿಕೊಳ್ಳುವರು ಅಲ್ಲಿ ಹೆಬ್ಬಿದುರುಗಳುಂಟು ಅವುಗಳ ತೂತುಗಳಲ್ಲಿ ಗಾಳಿಯು ತೂರಿ ಕೊಳಲಿನಂತೆ ಶಬ್ದಮಾಡಿದರೆ, ಹಾಡುತ್ತಿರುವ ಕಿನ್ನರಿಯರನ್ನು ಕಂಡು ಹಿಮವಂತನು ತಾನೂ ಹಾಡಬೇಕೆಂದುಕೊಂಡಂತೆ ತೋರುವುದು ಅಲ್ಲಿ ಚಮರೀಮೃಗಗಳು ಬಾಲವನ್ನು ಎತ್ತಿಕೊಂಡು ತಿರುಗುತ್ತಿದ್ದರೆ, ಹಿಮಾದ್ರಿರಾಜನಿಗೆ ಎತ್ತಿರುವ ಚಾಮರಗಳಂತೆ ಇರುವುವು. ಆ ಪರ್ವತದ ನೆತ್ತಿಯಲ್ಲಿ ಸಪ್ತರ್ಷಿಗಳು ಬಂದು ಕೊಯ್ದುಕೊಂಡು ಹೋಗುವ ಕಮಲಗಳನ್ನುಳ್ಳ ಸರೋವರಗಳುಂಟು. ಅನೇಕಾನೇಕ ಯಜ್ಞಸಾಧನಗಳಿಂದ ತುಂಬಿರುವ ಆ ಪರ್ವತಕ್ಕೆ ಬ್ರಹ್ಮದೇವನು ಭೂಲೋಕವನ್ನು ಧರಿಸಲು ಇವನೇ ಸರಿಯೆಂದು ಪರ್ವತರಾಜ ಪದವಿಯನ್ನು ಅನುಗ್ರಹಿಸಿರುವನು.

ಆ ಹಿಮಾದ್ರಿಗೂ ಆತನ ಪತ್ನಿಯಾದ ಮೇನಾದೇವಿಗೂ ಮಗನಾಗಿ ಮೈನಾಕನೆಂಬ ಪರ್ವತವೂ ಮಗಳಾಗಿ ಪಾರ್ವತಿಯೂ ಹುಟ್ಟಿದರು. ಆ ಮೈನಾಕನು ಇತರ ಬೆಟ್ಟಗಳಂತೆ ಇಂದ್ರನಿಂದ ರೆಕ್ಕೆಗಳನ್ನು ಕತ್ತರಿಸಿಕೊಳ್ಳದವನು ಆ ಪಾರ್ವತಿಯು ಪೂರ್ವದಲ್ಲಿ ದಕ್ಷಪುತ್ರಿಯಾಗಿದ್ದು ಆತನಿಂದಾದ ಅಪಮಾನವನ್ನು ಸಹಿಸಲಾರದೆ ಯೋಗದಿಂದ ದೇಹವನ್ನು ಬಿಟ್ಟುಬಂದವಳು.

ಆ ಮಗಳು ಶುಕ್ಲಪಕ್ಷದ ಚಂದ್ರಕಲೆಯಂತೆ ದಿನ ದಿನಕ್ಕೂ ಬೆಳೆದಳು ಉಜ್ವಲವಾದ ಕಾಂತಿಯಿಂದ ಬೆಳಗುವ ದೀಪದಂತೆ, ಮಂದಾಕಿನಿಯಿಂದ ಮೆರೆಯುವ ಆಕಾಶದಂತೆ, ಶುದ್ಧವಾಕ್ಕಿನಿಂದ ಶೋಭಿಸುವ ವಿದ್ವಾಂಸನಂತೆ, ಆ ಹಿಮವಂತನೂ ಆ ಮಗಳಿಂದ ಪರಿಶೋಭಿಸಿದನು. ಆಕೆಯು ಮಂದಾಕಿನಿಯ ತೀರದ ಮರಳು ದಿಣ್ಣೆಗಳ ಮೇಲೆ

ಬೊಂಬೆ, ಚಂಡುಗಳನ್ನು ಇಟ್ಟುಕೊಂಡು ಆಡುತ್ತಿದ್ದಳು ಆಕೆಗೆ ಉಪನಯನ ವಾಗುತ್ತಿದ್ದ ಹಾಗೆಯೇ ಹಿಂದೆ ಅಭ್ಯಾಸಮಾಡಿದ್ದ ವಿದ್ಯೆಗಳೆಲ್ಲವೂ ಮತ್ತೆ ಲಭಿಸಿದುವು' ಕುಂಚದಿಂದ ಬಿಡಿಸಿದ ಚಿತ್ರದಂತೆ, ಸೂರ್ಯನ ಕಿರಣಗಳು ತಗುಲಿ ಅರಳಿದ ತಾವರೆ ಯಂತೆ, ಆಕೆಯ ಅಂಗಗಳು ಬೆಳೆದು ಆಕೆಯು ಯೌವ್ವನವಂತೆಯಾದಳು ಆ ಪಾರ್ವತೀದೇವಿಯ ರೂಪವು ಮನೋಹರವಾಗಿತ್ತು ಆಕೆಯು ಹಂಸೆಗಳಿಗೆ ನಡೆಯನ್ನು ಕಲಿಸುವಳು. ಶಿರೀಷ (ಬಾಗೆ) ಪುಷ್ಪಕ್ಕಿಂತ ಮೃದುವಾದ ಆ ಬಾಹುಗಳು, ತನ್ನನ್ನು ಗೆದ್ದಿರುವ ಹರನನ್ನು ಕಟ್ಟಬೇಕೆಂದು ಮನ್ಮಥನು ಹುರಿಮಾಡಿ ಇಟ್ಟಿರುವ ಪಾಶಗಳಂತಿ ದ್ದುವು ಆಕೆಯು ಕತ್ತಿನಲ್ಲಿ ಧರಿಸಿದ ಮುತ್ತಿನ ಮಾಲೆಗಳು ಆಕೆಗೆ ಅಲಂಕಾರವಾಗುವು ದಿರಲಿ; ತಾವು ಅಲ್ಲಿದ್ದು ಶೋಭಿಸಿದುವು ಚಂದ್ರನಲ್ಲಿಯೂ ಪದ್ಮದಲ್ಲಿಯೂ ಇರುವ ಗುಣಗಳನ್ನೆಲ್ಲ ತಳೆದಿದ್ದ ಆ ಪಾರ್ವತೀಮುಖವೂ ಚಿಗುರಿನಲ್ಲಿ ತೋರಿರುವ ಹೂವಿ ನಂತೆಯೂ ಬಿರಿದ ಹವಳದ ನಡುವಿಟ್ಟಿರುವ ಮುತ್ತಿನಂತೆಯೂ ಶೋಭಿಸುತ್ತಿದ್ದ ಆ ಎಳನಗೆಯೂ, ಕೋಕಿಲ ಧ್ವನಿಯನ್ನೂ ನಿಂದಿಸುವ ಆಕೆಯ ಅಮೃತವಾಣಿಯೂ, ಗಾಳಿಗೆ ಸಿಕ್ಕಿದ ನೀಲೋತ್ಪಲದಂತೆ ಮೆರೆಯುವ ಆ ಕಣ್ಣುಗಳೂ, ಕಡ್ಡಿಯಿಂದ ತಿದ್ದಿದಂತಿರುವ ಹುಬ್ಬುಗಳೂ, ಚಮರೀಮೃಗದ ಬಾಲಕ್ಕಿಂತಲೂ ಸುಂದರವಾದ ಕೇಶಪಾಶಗಳೂ, ಒಂದನ್ನೊಂದು ಮೀರಿಸುವಂತಿದ್ದುವು ಅಷ್ಟೇನು? ಸಮಸ್ತವನ್ನು ಸೃಷ್ಟಿಮಾಡಿದ ಬ್ರಹ್ಮನು ಬಹುಪ್ರಯತ್ನಪಟ್ಟು ಉಪಮಾದ್ರವ್ಯಗಳನ್ನೆಲ್ಲ ಶೇಖರಿಸಿ, ಅವುಗಳನ್ನು ಎಲ್ಲೆಲ್ಲಿ ಇಡಬೇಕೋ ಅಲ್ಲಲ್ಲಿ ಇಟ್ಟು, ಸೌಂದರ್ಯವನ್ನೆಲ್ಲ ಒಂದೇ ಕಡೆಯಲ್ಲಿ ನೋಡಬೇಕೆಂಬ ಆಸೆಯಿಂದ, ಅಕ್ಕರೆಯಿಂದ, ಸೃಷ್ಟಿಸಿದನೋ ಎಂಬಂತೆ ಆ ಪಾರ್ವತಿಯು ಶೋಭಿಸು ತ್ತಿದ್ದಳು.

ನಾರದ ಮಹರ್ಷಿಗಳು ಹಿಮವಂತನ ಬಳಿಗೆ ಬಂದು ಆಕೆಯು ಯಾರು ಎಂಬು ದನ್ನು ತಿಳಿಸಿ ಆಕೆಯನ್ನು ಈಶ್ವರನಿಗೇ ಕೊಟ್ಟು ಮದುವೆಮಾಡಬೇಕೆಂದು ಹೇಳಿ ಹೋದರು ಪರ್ವತೇಶ್ವರನೂ ಆಗಲೆಂದು ಒಪ್ಪಿಕೊಂಡನು ಆದರೆ, ಪರಶಿವನು ದಾಕ್ಷಾಯಣಿಯು ದೇಹವನ್ನು ಬಿಟ್ಟಂದಿನಿಂದಲೂ ಅಸಂಗನಾಗಿ ಗಂಗಾತೀರದಲ್ಲಿ ಹಗಲಿ ರುಳೂ ಅಗ್ನಿಯನ್ನು ಸೇವಿಸುತ್ತ ತಪಸ್ಸುಮಾಡಿಕೊಂಡು ಇದ್ದುಬಿಟ್ಟನು; ಇಂಥವನು ಬಂದು ಹೆಣ್ಣುಕೇಳುವುದೆಲ್ಲಿ? ಆದರಿಂದ ಅದ್ರೀಶ್ವರನು ತನ್ನ ಮಗಳನ್ನು ತಾನೇ ಕರೆದು ಕೊಂಡುಹೋಗಿ ದೇವದೇವನಾದ ಆ ಪರಮೇಶ್ವರನಿಗೆ ಸಖೀಸಮೇತಳಾದ ಆಕೆಯನ್ನು ಆತನ ಆರಾಧನಕ್ಕೆಂದು ಒಪ್ಪಿಸಿದನು ಪರಮೇಶ್ವರನು ಇಂತಹ ರೂಪವತಿಯನ್ನು ಪರಿ ಗ್ರಹಿಸಿದರೆ ತನ್ನ ತಪಸ್ಸಿಗೆ ಸಂಚಕಾರಬಂದೀತೆಂಬ ಭೀತಿಯೇ ಇಲ್ಲದೆ ಆಕೆಯನ್ನು ಪರಿ ಗ್ರಹಿಸಿದನು. ಆಕೆಯು ತಾನು ರಾಜಕುಮಾರಿಯಾದರೂ ಆತನ ಪೂಜೆಗೆ ಹೂವ್ವು ತರುವುದು, ಆತನ ಹೋಮವೇದಿಯನ್ನು ಸಾರಿಸುವುದು, ಅಗ್ರೋದಕವನ್ನು ತರುವುದು,

ಮೊದಲಾದ ರೀತಿಗಳಿಂದ, ತನ್ನ ಕಷ್ಟವನ್ನು ಪರಿಗಣಿಸದೆ, ಆತನನ್ನು ಸೇವಿಸಿದಳು. ಆತನ ಶಿರಸ್ಸಿನಲ್ಲಿದ್ದ ಚಂದ್ರನ ಕಿರಣಗಳು ಆಗಾಗ ಆಕೆಯ ಕಷ್ಟವನ್ನು ಪರಿಹರಿಸುತ್ತಿದ್ದುವು.

ಬ್ರಹ್ಮನ ವರವನ್ನು ಪಡೆದು ಪರಾಕ್ರಮಿಯಾದ ತಾರಕನೆಂಬ ರಾಕ್ಷಸನುಂಟು. ಅವನು ದೇವತೆಗಳೆಲ್ಲವನ್ನೂ ಜಯಿಸಿದವನು. ಅವನಿಗೆ ಅಂಜಿ ಸೂರ್ಯನು ಹೆಚ್ಚಾಗಿ ಬಿಸಿಲು ಕಾಯನು, ಚಂದ್ರನು ಶಿವನ ಶಿರಸ್ಸಿನಲ್ಲಿರಲು ಬೇಕಾದ ಒಂದು ಕಳೆಯನ್ನು ಬಿಟ್ಟು ಮಿಕ್ಕ ಕಳೆಗಳೆಲ್ಲದರಿಂದಲೂ ಆ ತಾರಕನ ಲೋಕದಲ್ಲಿ ಬೆಳಗುವನು ವಾಯುವು ಬೀಸಣಿಗೆಯ ಗಾಳಿಯಷ್ಟು ಮಂದವಾಗಿ ಬೀಸುವನು. ವಸಂತಾದಿ ಷಡೃತುಗಳು ಒಟ್ಟಿಗೆ ಬಂದು ಅವನನ್ನು ಸೇವಿಸುವುವು. ವರುಣನು ತನ್ನಲ್ಲಿರುವ ಅತ್ಯುತ್ತಮ ರತ್ನಗಳನ್ನು ಅವನಿಗೆ ಕಾಣಿಕೆಯಾಗಿ ಒಪ್ಪಿಸುವನು ವಾಸುಕಿ ಮೊದಲಾದ ನಾಗರಾಜರು ತಮ್ಮ ತಲೆಯಲ್ಲಿರುವ ರತ್ನಗಳೇ ಅವನಿಗೆ ದೀಪಗಳಾಗುವಂತೆ ದೀವಟಿಗೆಗಳನ್ನು ಹಿಡಿದಿರುವರು. ಇಂದ್ರನೂ ಕೂಡ ಅವನಿಗೆ ಹೆದರಿ ಅವನು ಕೋಪಗೊಳ್ಳದಿರಲಿ ಎಂದು ಕಲ್ಪದ್ರುಮದ ಹೂಗಳನ್ನು ಪದೇ ಪದೇ ಕಳುಹಿಸಿಕೊಡುವನು ಹೀಗೆ ದೇವತೆಗಳು ಸೇವಿಸುತ್ತಿದ್ದರೂ ಅವನು ಕೋಪಗೊಂಡು ಭುವನತ್ರಯವನ್ನೂ ಗೋಳುಹುಯ್ದುಕೊಳ್ಳುವನು. ಇಂತಹವನನ್ನು ಗೆಲ್ಲಬೇಕೆಂದು ದೇವತೆಗಳು ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲವಾಯಿತು. ವಿಷ್ಣುವು ಅವನನ್ನು ಸಂಹರಿಸಬೇಕೆಂದು ತನ್ನ ಚಕ್ರವನ್ನು ಪ್ರಯೋಗಿಸಿದನು. ಆ ಧೂರ್ತನು ಅದನ್ನು ಹಿಡಿದು ಮುರಿದು ಕಂಠದಲ್ಲಿ ಆಭರಣದಂತೆ ಧರಿಸಿಕೊಂಡನು. ಇಂಥಾ ಪರಾಕ್ರಮಶಾಲಿಯಾದ ತಾರಕನನ್ನು ಗೆಲ್ಲುವ ದಾರಿಕಾಣದೆ ದೇವತೆಗಳು ಹೋಗಿ ಬ್ರಹ್ಮನ ಮರೆಹೊಕ್ಕರು.

ಆತನು ಇವರ ಗೋಳನ್ನು ಕೇಳಿ, '' ಅವನು ಅಪಾರವಾದ ತಪಸ್ಸುಮಾಡಿದವನು ಪರಮೇಶ್ವರನ ಪುತ್ರನ ವಿನಾ ಇನ್ನಾರೂ ಅವನನ್ನು ಗೆಲ್ಲಲಾರರು ಪರಂಜ್ಯೋತಿಯಾದ ಆತನು ಈಗ ತಪಸ್ಸಿನಲ್ಲಿ ಕುಳಿತಿರುವನು. ಆತನ ಪತ್ನಿಯಾಗುವಾಕೆಯು ಉಮೆಯಾಗಿ ಹಿಮವಂತನ ಪುತ್ರಿಯಾಗಿ ಹುಟ್ಟಿರುವಳು ನೀವು ಪ್ರಯತ್ನಪಟ್ಟು ಅವರಿಬ್ಬರಿಗೂ ಮದುವೆಮಾಡಿಸಿರಿ. ಆ ದಂಪತಿಗಳ ಪುತ್ರನು ನಿಮ್ಮ ಸೇನಾಪತಿಯಾಗಿ ನಿಂತು ಸುರಬಂದಿಗಳ ಬಂಧನವನ್ನು ತಪ್ಪಿಸುವನು '' ಎಂದು ಅನುಗ್ರಹಮಾಡಿದನು.

ಈ ಸಂಗತಿಯನ್ನು ತಿಳಿದ ಇಂದ್ರನು ಕೂಡಲೇ ತನ್ನ ಸ್ನೇಹಿತನಾದ ಮನ್ಮಥನನ್ನು ಬರಮಾಡಿಕೊಂಡನು. ಅವನಿಗೆ ಬೇಕಾದ ಹಾಗೆ ಉಪಚಾರಮಾಡಿ ಕುಳ್ಳಿರಿಸಿಕೊಂಡು '' ಮಿತ್ರ ! ಲೋಕದಲ್ಲಿ ನನಗೆ ಬೇಕಾದ ಕೆಲಸವನ್ನು ಸಾಧಿಸಿಕೊಡುವವರು ಇಬ್ಬರು. ನೀನು ಮತ್ತು ನನ್ನ ವಜ್ರಾಯುಧ. ವಜ್ರಾಯುಧವೂ ಒಂದು ವೇಳೆ ಸೋತರೂ ಸೋಲ

ಬಹುದು. ನೀನು ಮಾತ್ರ ಎಂದಿಗೂ ಸೋಲುವುದಿಲ್ಲ. ಈಗ ಭಾರಿಯ ಕಾರ್ಯವೊಂದ ರಲ್ಲಿ ನಿನ್ನನ್ನು ಉಪಯೋಗಿಸಬೇಕೆಂದಿರುವೆನು. ದೇವಶತ್ರುಗಳಿಂದ ಬಾಧೆ ಪಡುತ್ತಿರುವ ನಮ್ಮನ್ನು ಕಾಪಾಡಲು ನೀನು ವೃಷಭಧ್ವಜನ ಮೇಲೆ ನಿನ್ನ ಬಾಣವನ್ನು ಪ್ರಯೋಗಿಸ ಬೇಕಾಗಿರುವುದು ನಿನ್ನ ಪರಾಕ್ರಮದಿಂದ ಪರಾಭೂತನಾದ ಈಶ್ವರನು ಉಮೆಯನ್ನು ವರಿಸಲಿ. ಈಗ ಆಕೆಯು ತಂದೆಯ ಆಜ್ಞೆಯಂತೆ ಆತನನ್ನು ಸೇವಿಸುತ್ತಿರುವಳು ಅದರಿಂದ ಈಗ ನೀನು ಹೊರಟು ದೇವಕಾರ್ಯವನ್ನು ಸಾಧಿಸು ಇದರಿಂದ ನಿನಗೆ ಯಶಸ್ಸು ಲಭಿಸುವುದು. ಈ ಕಾರ್ಯವಾದರೋ ಮೂರುಲೋಕಗಳಿಗೂ ಉಪಕಾರಕ ವಾದುದು ಮತ್ತು ಯಾರಿಗೂ ಉಪದ್ರವಕಾರಿಯಲ್ಲದುದು ನೀನೂ ಆ ಕಾರ್ಯ ಮಾಡಬಲ್ಲ ಧೀರನು ಅದರಿಂದ ನಿನ್ನ ಸಖರಾದ ಮಧುಮಂದಾನಿಲರನ್ನು ಕರೆದುಕೊಂಡು ಹೊರಡು" ಎಂದನು ಇಂದ್ರನಿಂದ ಭುಜತಟ್ಟಿಸಿಕೊಂಡು ಅಗಲೆಂದು ಕೈಮುಗಿದು ಮದ ನನು ಮಧುವಿನೊಡನೆ ಹೊರಟನು. ರತಿಯು ಏನಾಗುವುದೋ ಎಂದು ಶಂಕಿಸುತ್ತ ಹಿಂದೆ ಹೊರಟಳು

ಆ ಈಶ್ವರನ ತಪೋವನದಲ್ಲಿ ವಸಂತರುತುವು ತಲೆದೋರಿತು. ತೆಂಕಣ ಗಾಳಿಯು ಬೀಸಲಾರಂಭಿಸಿತು. ಅಶೋಕವು ಚಿಗುರಿತು. ಮಾವು ಹೂಬಿಟ್ಟಿತು. ಕರ್ಣಿಕಾರದ ಹೂಗಳೂ ಮೆರೆದುವು ಮುತ್ತುಗದ ಕೆಂಪು ಹೂಗಳು ಬಾಲಚಂದ್ರ ನಂತೆಸೆದುವು. ಹೀಗೆ ವನಲಕ್ಷ್ಮಿಯು ದುಂಬಿಗಳೆಂಬ ಕಪ್ಪಿನಿಂದ ತಿಲಕವನ್ನಿಟ್ಟು ಮಾವಿನಚಿಗುರೆಂಬ ಕೆಂದುಟಿಗಳಿಂದ ಮೆರೆದಳು ಮದೋದ್ಧತವಾದ ಮೃಗಗಳು ಗಾಳಿಗೆ ಹಾರಿಬಂದು ಕಣ್ಣಲ್ಲಿ ಬಿದ್ದ ಪ್ರಿಯಾಲ ಪುಷ್ಪದ ದೂಳಿನಿಂದ ಕಣ್ಣುಮುಚ್ಚಿ ತರಗೆಲೆಗಳನ್ನು ತುಳಿಯುತ್ತ ಓಡಾಡಿದುವು ಮಾವಿನ ಚಿಗುರನ್ನು ಸವಿದು ದಪ್ಪವಾದ ಕಂಠದಿಂದ ಗಂಡುಕೋಗಿಲೆಯು ಮಧುರವಾಗಿ ಹಾಡಿದುದು ಮನ್ಮಥನ ಆಜ್ಞೆಯಂತೆ ಮೆರೆಯಿತು ಆ ಶಿವವನದಲ್ಲಿದ್ದ ತಪಸ್ವಿಗಳು ಈ ವಸಂತವೈಭವವನ್ನು ನೋಡಿ ಉಂಟಾದ ಮನಸ್ಸಿನವಿಕಾರವನ್ನು ಬಹುಕಷ್ಟದಿಂದ ನಿರೋಧಿಸಿದರು.

ಮದನನು ತನ್ನ ಪುಷ್ಪಚಾಪವನ್ನು ಕಟ್ಟಿಕೊಂಡು ರತಿಯೊಡನೆ ಬರಲು ಆ ವನ ದಲ್ಲಿದ್ದವರಿಗೆಲ್ಲಾ ಶೃಂಗಾರಭಾವವು ಉದ್ರೇಕವಾಯಿತು. ಮಧುಕರವು ತನ್ನ ಪ್ರಿಯೆ ಯನ್ನು ಅನುಸರಿಸಿ ಬಂದು ಒಂದೇ ಪುಷ್ಪಪಾತ್ರೆಯಲ್ಲಿ ಅದರೊಡನೆ ಮಧುವನ್ನು ಸವಿ ಯಿತು ಗಂಡು ಜಿಂಕೆಯು ಹೆಣ್ಣನ್ನು ತನ್ನ ಕೊಂಬಿನಿಂದ ಕೆರೆಯಿತು. ಹೆಣ್ಣಾನೆಯು ಕಮಲ ಗಂಧಯುಕ್ತವಾದ ಕೊಳದ ನೀರನ್ನು ತಾನು ಮುಕ್ಕುಳಿಸಿ ಗಂಡನಿಗೆ ಕುಡಿಯ ಕೊಟ್ಟಿತು ಹಾಡುತ್ತ ಬೆವರಿನಿಂದ ಕೊಂಚಕೊಂಚವಾಗಿ ಅಳಿಸಿರುವ ಪತ್ರಲೇಖನ ಗಳನ್ನುಳ್ಳ ಪ್ರಿಯೆಯನ್ನು ಪುಷ್ಪಾಸವ ಮದ್ಯಪಾನದಿಂದ ಕೆಂಪಾಗಿರುವ ಕಣ್ಣುಳ್ಳ

ಕಿಂಪುರುಷನು ಚುಂಬಿಸಿದನು. ಚಿಗುರೆಂಬ ಕೆಂದುಟಿಯಿಂದ ಚೆಲುವಾದ ಲತಾವಧುಗಳು ಬಾಗಿಬಳುಕುತ್ತಿರುವ ಶಾಖೆಗಳಿಂದ ಮಹಾವೃಕ್ಷಗಳನ್ನು ಆಲಿಂಗಿಸಿದುವು ಈ ಕಾಲಕ್ಕೆ ಸರಿಯಾಗಿ ಅಪ್ಸರೆಯರು ಹಾಡಿದರು. ಅದನ್ನು ಈಶ್ವರನು ಕೇಳಿ ಕಣ್ಣುಮುಚ್ಚಿ ಆತ್ಮಧ್ಯಾನಪರನಾದನು. ತಮ್ಮನ್ನು ತಾವು ಆಳಬಲ್ಲ ಧೀರರ ಸಮಾಧಿಯನ್ನು ಈ ವಿಘ್ನಗಳು ಭಂಗಪಡಿಸಬಲ್ಲವೆ ?

ಈಶ್ವರನ ತಪಸ್ಸಿನ ಸ್ಥಾನವಾದ ಲತಾಗೃಹದ ದ್ವಾರದಲ್ಲಿ ಚಿನ್ನದ ದಂಡವನ್ನು ಧರಿಸಿ ಕಾದುನಿಂತಿದ್ದ ನಂದಿಕೇಶ್ವರನು ಇದೆಲ್ಲವನ್ನೂ ನೋಡಿ, "ಇದೇನು ಇಷ್ಟು ಚಾಪಲ್ಯ !" ಎಂದು ತುಟಿಯ ಮೇಲೊಂದು ಬೆಟ್ಟನ್ನಿಟ್ಟು "ಕೂಡದೆಂ"ದು ಸನ್ನೆಯಿಂದಲೇ ಹೇಳಿದನು ಕೂಡಲೆ ಮದನನ ವಿಜೃಂಭಣವೆಲ್ಲವೂ ಅಡಗಿಹೋಯಿತು. ಮರಗಳು ಅಲ್ಲಾಡುವುದನ್ನೂ ಬಿಟ್ಟು ನಿಂತವು ಭ್ರಮರವು ಸುಮ್ಮನಾಯಿತು. ಹಕ್ಕಿಗಳು ಹಾಡುವುದನ್ನು ಬಿಟ್ಟು ಮೌನಿಗಳಾದುವು. ಮೃಗಗಳು ತಿರುಗಾಡುವುದನ್ನು ಬಿಟ್ಟು ನಿಂತಲ್ಲಿ ನಿಂತುವು ಅಷ್ಟೇನು ? ಆ ಮಹಾತ್ಮನಾಜ್ಞೆಯಿಂದ ಕಾನನಕ್ಕೆ ಕಾನನವೇ ಚಿತ್ರಾರ್ಪಿತವಾದಂತೆ ಮೌನಮುದ್ರೆಯನ್ನು ತಾಳಿತು

ಮದನನು ಆ ನಂದಿಯ ಕಣ್ಣಿಗೆ ಬೀಳದೆ ಸುರಹೊನ್ನೆಯ ತೋಪಿನಲ್ಲಿ ಬಿದ್ದು ಶಿವತಪಸ್ಸ್ಥಾನವಾದ ಲತಾಗೃಹದ ಬಳಿಗೆ ಬಂದನು ಅಲ್ಲಿ ದೇವದಾರು ಮರದ ಮಣೆಯ ಮೇಲೆ ಹುಲಿಯ ಚರ್ಮವನ್ನು ಹಾಸಿಕೊಂಡು ತಪಸ್ಸುಮಾಡುತ್ತ ಕುಳಿತಿರುವ ಪರಮೇಶ್ವರನನ್ನು (ಮಾರಿಯನ್ನು ಕಾಣುವ ಕೋಣನಂತೆ) ಮದನನು ಕಂಡನು ಪರಶಿವನು ವೀರಾಸನದಲ್ಲಿ ತೊಡೆಗಳ ಮೇಲಿರುವ ಕಮಲಗಳೋ ಎಂಬಂತಿರುವ ಅಂಗೈಗಳನ್ನು ಮೇಲು ಮಾಡಿ ಹಿಡಿದುಕೊಂಡು ಕುಳಿತಿದ್ದನು ಜಟಾಮಂಡಲದಲ್ಲಿ ಭುಜಂಗಮಗಳು ಮೆರೆಯುತ್ತಿದ್ದುವು ಜಪಮಾಲೆಯು ಕರ್ಣದ ಮೇಲೆ ಕುಳಿತಿತ್ತು. ಕೃಷ್ಣಾಜಿನವು ಕಂಠದಲ್ಲಿರುವ ಕರಿಯ ಮಚ್ಚೆಯೊಡನೆ ಸ್ಪರ್ಧಿಸುತ್ತಾ ಕತ್ತಿನಿಂದ ನೇತಾಡುತ್ತಿದ್ದಿತು. ಹುಬ್ಬುಗಳು ನಿಶ್ಚಲವಾಗಿದ್ದಂತೆ ಕಣ್ಣಾಲಿಗಳೂ ಅರ್ಧಾರ್ಧವಾಗಿ ಮರೆಯಾಗಿ, ಮುಚ್ಚದೆ ನಿಂತಿದ್ದ ರೆಪ್ಪೆಗಳ ಹಿಂದೆ ನಾಸಿಕಾಗ್ರವನ್ನು ನೋಡುತ್ತ ನಿಂತಿದ್ದುವು ಆಗ ಆ ಶಿವನನ್ನು ನೋಡಿದರೆ, ತುಂಬಿದ್ದರೂ ಮಳೆಗರೆಯುವ ಸಂಭ್ರಮವಿಲ್ಲದ ಮೋಡವೋ, ತರಂಗಗಳಿಂದ ಚಂಚಲವಾಗದಿರುವ ಮಡುವೋ, ಗಾಳಿಯಿಂದ ಅಲುಗದಿರುವ ದೀಪವೋ ಎನ್ನುವಂತೆ ಇದ್ದಿತು. ಹೀಗೆ ಆ ಪರಮೇಶ್ವರನು ವಾಯುನಿರೋಧವನ್ನು ಮಾಡಿ ಬ್ರಹ್ಮರಂಧ್ರದಿಂದ ಉದಯಿಸಿ ಬರುತ್ತಿರುವ ಜ್ಯೋತಿಃಪುಂಜದಿಂದ ಸುಂದರನಾಗಿ ಕಾಣಿಸುತ್ತಿದ್ದನು. ಆತನ ಮನಸ್ಸು ಯಾವುದೊಂದು ವಿಕಾರವೂ ಇಲ್ಲದೆ ಸಮಾಧಿಗೇರಿ ಹೃದಯದಲ್ಲಿ ಅಕ್ಷರವಾದ ಆತ್ಮನನ್ನು ನೋಡುತ್ತ ಕುಳಿತಿದ್ದಿತು.

ಆ ರೀತಿಯಾಗಿ ಕುಳಿತಿರುವ ತ್ರಿನೇತ್ರನನ್ನು ಸಮೀಪದಲ್ಲಿ ಕಂಡು, ಮನಸ್ಸಿನಿಂದಲೂ ಕೂಡ ಮದನನು ಆತನನ್ನು ಸಮೀಪಿಸಲಾರದೆ, ಹೆದರಿ, ತನ್ನ ಕೈಯ್ಯಿಂದ ಜಾರಿಬೀಳುತ್ತಿರುವ ಧನುರ್ಬಾಣಗಳನ್ನೂ ಗಮನಿಸಲಾರದವನಾದನು. ಹೀಗೆ ಕರಗಿ ಹೋಗುತ್ತಿರುವ ಮದನನನ್ನು ತನ್ನ ಸೌಂದರ್ಯದಿಂದಲೇ ಉದ್ಧಾರಮಾಡುವ ದೇವಿಯೋ ಎಂಬಂತೆ, ವನದೇವತೆಗಳೋಲೈಸುತ್ತಿರಲು ಗಿರಿರಾಜಕನ್ಯೆಯು ದಯಮಾಡಿದಳು ಆಕೆಯು ಪದ್ಮರಾಗಗಳನ್ನು ತಿರಸ್ಕರಿಸುವ ಅಶೋಕವನ್ನೂ, ಚಿನ್ನದ ಬಣ್ಣವನ್ನೂ ಇಳಿಗೈವ ಬೆಟ್ಟದಾವರೆಯನ್ನೂ, ಮುತ್ತಿನ ಜೊಂಪೆಗಳಂತೆ ತೋರಿಬರುವ ಸಿಂಧುವಾರವನ್ನೂ ಧರಿಸಿದ್ದಳು. ತರುಣ ರವಿ ರಾಗರಂಜಿತವಾದ ವಸ್ತ್ರವನ್ನು ಉಟ್ಟಿದ್ದಳು. ನೋಡಿದವರಿಗೆ, ಪುಷ್ಪಭಾರದಿಂದ ಬಗ್ಗಿರುವ ಲತೆಯೋನಾದರೋ ಓಡಾಡುತ್ತಿದ್ದೆಯೋ ಎನ್ನಿಸುವಂತಿದ್ದಳು. ಮದನನು ಕಾದಿಟ್ಟಿರುವ ಎರಡನೆಯ ಮೌರ್ವಿಯೋ ಎಂಬಂತಿರುವ ಕಾಂಚೀದಾಮವು ಜಾರುತ್ತಿರಲು ಅದನ್ನು ಆಗಾಗ ಸರಿಮಾಡಿಕೊಳ್ಳುತ್ತ ಆ ಪಾರ್ವತೀದೇವಿಯು ತನ್ನ ನಿಶ್ವಾಸದ ಕಮಲಗಂಧಕ್ಕಾಗಿ ಮೋಹಿಸಿ ಬಂದು ಮೇಲೆ ಬೀಳುತ್ತಿರುವ ದುಂಬಿಗಳನ್ನು ತನ್ನ ಕೈಯಲ್ಲಿರುವ ಲೀಲಾರವಿಂದದಿಂದ ನಿವಾರಿಸುತ್ತ ಬರುತ್ತಿದ್ದಳು ರತಿಯನ್ನು ನಾಚಿಸುವ ರೂಪಸೌಭಾಗ್ಯವನ್ನುಳ್ಳ ಆಕೆಯನ್ನು ನೋಡಿ "ಚಿಂತೆಯಿಲ್ಲ. ನನ್ನ ಕೈರ್ಯವು ಕೈಗೂಡಬಹುದು" ಎಂದು ಮದನನಿಗೆ ಮತ್ತೆ ಆಸೆಹುಟ್ಟಿತು

ಉಮಾದೇವಿಯು ತನ್ನ ಪತಿಯಾಗುವ ಶಂಭುವಿನ ಆಶ್ರಮದ ಬಾಗಿಲಿಗೆ ಬರಲು ಪರಮಾತ್ಮಾನುಸಂಧಾನದಲ್ಲಿದ್ದ ಪರಮೇಶ್ವರನು ಬಹಿರ್ಮುಖನಾದನು. ನಿರುದ್ಧವಾಗಿದ್ದ ಶ್ವಾಸವೂ ಬಲಿದಿದ್ದ ಆಸನ ಬಂಧವೂ ಸಡಲಿದುವು ಹೀಗೆ ಬಹಿರ್ಮುಖನಾದ ಪರಮೇಶ್ವರನಿಗೆ ಬಾಗಿಲಿನಲ್ಲಿದ್ದ ನಂದಿಯು 'ಶೈಲಸುತೆಯು ದಯಮಾಡಿಸಿರುವಳು' ಎಂಬುದನ್ನು ಅರಿಕೆಮಾಡಿ ಆಕೆಯನ್ನು ಕರೆದುತಂದನು. ಆಕೆಯು ಬಂದು ತ್ರ್ಯಂಬಕನ ಪಾದಮೂಲದಲ್ಲಿ ತಾನೂ ತನ್ನ ಸಖಿಯರೂ ತಂದಿದ್ದ ಹೂಗೊಂಚಲುಗಳನ್ನು ಒಪ್ಪಿಸಿದಳು ಬೈತಲೆಯ ಮೇಲಿದ್ದ ನವಕರ್ಣಿಕಾರವು ಜಾರುತ್ತಿರಲು, ಕಿವಿಯಲ್ಲಿದ್ದ ಹೊಸಚಿಗುರು ಬೀಳುತ್ತಿರಲು, ಆ ದೇವಿಯು ತಲೆಬಾಗಿ ನಮಸ್ಕರಿಸಿದಳು ಈಶ್ವರನು "ಇನ್ನಾರಿಗೂ ಲಭಿಸದಂತಹ ಪತಿಯು ನಿನಗೆ ದೊರೆಯಲಿ" ಎಂದು ಆಶೀರ್ವದಿಸಿದನು

ಇದನ್ನು ಕಂಡು ಮದನನು ಬೆಂಕಿಗೆ ಬೀಳುವ ಪತಂಗದಂತೆ, ಈಶ್ವರನ ಮೇಲೆ ಬಾಣವನ್ನು ಬಿಡಲು ಸಿದ್ಧವಾದನು ಆ ವೇಳೆಗೆ ಸರಿಯಾಗಿ ಗೌರೀದೇವಿಯು ಗಿರಿಶನಿಗೆ ಗಂಗಾನದಿಯಲ್ಲಿ ಬೆಳೆದ ತಾವರೆಗಳಿಂದ ಸಂಗ್ರಹಿಸಿದ ಮಣಿಗಳ ಮಾಲಿಕೆಯನ್ನು ಒಪ್ಪಿಸಿದಳು ಅದು ಆಕೆಯ ಕರತಲದ ಕೆಂಪುಬಣ್ಣದಿಂದ ಸೂರ್ಯಕಿರಣ ರಂಜಿತವಾದಂತೆ ಕಂಡುಬರುತ್ತಿದ್ದಿತು ಭಕ್ತಿಯಿಂದ ಒಪ್ಪಿಸಿದ ಆ ಮಾಲಿಕೆಯನ್ನು ತೆಗೆದುಕೊಳ್ಳಲು

ತ್ರಿಲೋಚನನು ಕೈನೀಡಿದನು ಮದನನು ಇದೇ ಸಮಯವೆಂದು ಸಂಮೋಹನವೆಂಬ ಬಾಣವನ್ನು ತೊಟ್ಟನು. ಈಶ್ವರನೂ ಕೊಂಚ ಹೊತ್ತು ಚಂದ್ರೋದಯ ಕಾಲದಲ್ಲಿ ಚಂಚಲವಾಗುವ ಅಂಬುಧಿಯಂತೆ ಚಂಚಲನಾಗಿ, ಬಿಂಬೋಷ್ಠಸುಂದರವಾದ ಉಮಾ ದೇವಿಯ ಮುಖದತ್ತ ಕಣ್ಣಿಟ್ಟು ನೋಡಿದನು. ಶೈಲರಾಜಸುತೆಯು ಆ ಭಾವವನ್ನು ಅರಿತಳು ಎಂಬುದನ್ನು ಬಾಲಕದಂಬಮುಕುಳದಂತೆಸೆವ ಪುಲಕಿತಗಳಿಂದ ಆಕೆಯ ಅಂಗಗಳು ಹೇಳುತ್ತಿರಲು, ನಾಚಿಕೆಯಿಂದ ಆಕೆಯು ಕಣ್ಣುತಿರುಗಿಸಿಕೊಂಡು ನಿಂತಳು.

ಹೀಗೆ ತನಗಾದ ಇಂದ್ರಿಯಕ್ಷೋಭವನ್ನು ಬಲವಾಗಿ ನಿಗ್ರಹಿಸಿ, ತ್ರಿನೇತ್ರನಾದ ಸ್ವಾಮಿಯು, ತನಗೂ ಹೀಗಾಗಲು ಕಾರಣವೇನೆಂದು ಅರಿಯಲು ಸುತ್ತಲೂ ನೋಡಿದನು ಅತ್ತ ಒಂದುಕಡೆ ವೀರಾಸನದಲ್ಲಿ ಕುಳಿತು ಶರಾಸನದಲ್ಲಿ ಬಾಣವನ್ನು ಆರೋಪಿಸಿ ತನ್ನ ಕಡೆಗೆ ಪ್ರಯೋಗಿಸಲು ಸಿದ್ಧನಾಗಿರುವ ಮದನನು ಕಾಣಸಲು, ತಪಸ್ಸಿನಿಂದ ಆಗತಾನೇ ಬಹಿರ್ಮುಖನಾಗಿದ್ದ ಗಿರಿಶನ ಹುಬ್ಬುಗಂಟಿಕ್ಕಿತು. ಥಟ್ಟನೆ ಮೂರನೆಯ ಕಣ್ಣು ತೆರೆದು ಅಗ್ನಿಜ್ವಾಲೆಯು ಹೊರಟು ಮದನನನ್ನು ಆವರಿಸಿತು. ಆಕಾಶದಲ್ಲಿದ್ದ ದೇವತೆಗಳೆಲ್ಲರೂ "ಪ್ರಭುವೇ! ಕ್ರೋಧವನ್ನು ಉಪಸಂಹರಿಸು" ಎಂದು ಹೇಳುತ್ತಿದ್ದ ಹಾಗೆಯೇ ಆ ಅಗ್ನಿಯು ಮದನನ್ನು ಭಸ್ಮಾವಶೇಷವನ್ನಾಗಿ ಮಾಡಿತು. ಅದನ್ನು ಕಂಡು ಆ ದುಃಖವನ್ನು ಸಹಿಸಲಾರದೆ ರತಿಯು ಮೂರ್ಛೆಹೋದಳು ಹೀಗೆ ತನ್ನ ತಪಸಿಗೆ ಒದಗಿದ ವಿಘ್ನವನ್ನು ಮರವನ್ನು ಹೊಡೆವ ಸಿಡಿಲಿನಂತೆ ಮುರಿದು, ಸ್ತ್ರೀಸನ್ನಿಧಾನವನ್ನು ಬಿಡಬೇಕೆಂದು ಭೂತಪತಿಯು ಅಂತರ್ಧಾನವನ್ನು ಹೊಂದಿದನು.

ಶೈಲಾತ್ಮಜೆಯು ತನ್ನ ತಂದೆಯ ಆಶೆಯೂ ತನ್ನ ಸೌಂದರ್ಯವೂ ಏಕಕಾಲದಲ್ಲಿ ವ್ಯರ್ಥವಾಯಿತೆಂದು ನಾಚಿ ನಿರುತ್ಸವಳಾಗಿ ಹೇಗೆ ಹೇಗೋ ಹಿಂತಿರುಗಿದಳು. ಕೂಡಲೇ ಅದ್ರೀಶ್ವರನಲ್ಲಿಗೆ ಬಂದು ರುದ್ರಸಂರಂಭಭೀತಳಾದ ಮಗಳನ್ನು ಕೊಂಬುಗಳಿಗೆ ಸಿಕ್ಕಿರುವ ಪದ್ಮಲತೆಯನ್ನು ಕೊಂಡೊಯ್ಯುವ ಐರಾವತದಂತೆ, ಬಾಹುಗಳಲ್ಲಿ ಎತ್ತಿಕೊಂಡು ಬೇಗ ಬೇಗ ಹೊರಟ ಹೋದನು.

ಇತ್ತ ರತಿಯು ಮೂರ್ಛೆಯಿಂದೆದ್ದು ತನಗೆ ಸಂಭವಿಸಿರುವ ನವವೈಧವ್ಯವನ್ನು ಅರಿತು ಬಹಳವಾಗಿ ಶೋಕಿಸಿದಳು. ಭೂಮಿಯಲ್ಲಿ ಬಿದ್ದು ಹೊರಳುತ್ತ ಪ್ರಲಾಪಿಸುತ್ತಿರುವ ರತಿಯನ್ನು ಕಂಡು ವನವೆಲ್ಲವೂ ದುಃಖಾಕ್ರಾಂತವಾಯಿತು "ಎಲೈ ಪ್ರಿಯನೆ ನೀನು ಮೃತನಾದರೂ ನಾನಿನ್ನೂ ಬದುಕಿರುವೆನಲ್ಲ ಮದನನ್ನು ಬಿಟ್ಟು ರತಿಯು ಒಂದು ಗಳಿಗೆ ಯಾದರೂ ಜೀವಿಸಿದ್ದಳು ಎಂಬ ಅಪಖ್ಯಾತಿಯು ನನಗೆ ಬಂದಿತಲ್ಲ! ಆದರೂ ಇದೊ ನಾನೂ ನಿನ್ನಬಳಿಗೆ ಬಂದುಬಿಡುವೆನು ಎಲೈ ವಸಂತನೆ! ಮದನನ ಪ್ರಿಯ ಸಖನಾದ ನೀನೆಲ್ಲಿ ಹೋದೆ?" ಎಂದು ಅತ್ತಳು ಅದನ್ನು ಕೇಳಿ, ವಸಂತನು ದುಃಖಾತಿರೇಖದಿಂದ ಮರೆಯಾಗಿದ್ದವನು ಮುಂದೆ ಬಂದುನಿಂತನು

ಆ ವಸಂತನನ್ನು ನೋಡಿ ರತಿಯು ಇನ್ನೂ ಪ್ರಲಾಪಮಾಡಿದಳು. ಎದೆಯಲ್ಲಿದ್ದ ದುಃಖವು ಸ್ವಜನರನ್ನು ಕಂಡು ಉಕ್ಕಿಬರುವುದಲ್ಲವೆ? "ವಸಂತ! ನೋಡು ನಿನ್ನ ಸಖನು ಭಸ್ಮವಾಗಿ ಬಿದ್ದಿರುವನು. ಗಾಳಿಯು ಆ ಭಸ್ಮವನ್ನೂ ಚೆಲ್ಲಾಡುತ್ತಿರುವುದು. ನಿನ್ನ ಮಿತ್ರನು ಗಾಳಿಗೆ ನೊಂದಿಹೋದ ದೀಪದ ಜ್ವಾಲೆಯಂತೆ ಹೋಗಿಯೇ ಹೋದನು. ನಾನು ಮಾತ್ರ ಹೊಗೆಯುತ್ತಿರುವ ಬತ್ತಿಯಂತೆ ನಿಂತಿರುವೆನು. ಆ ವಿಧಿಯು ನನ್ನ ಗಂಡನನ್ನು ಮಾತ್ರ ಕೊಂಡೊಯ್ದು ನನ್ನನ್ನು ಬಿಟ್ಟು ಮೋಸಮಾಡಿತು. ಮರವು ಮುರಿದು ಬಿದ್ದಮೇಲೆ, ಅದನ್ನು ಹಿಡಿದು ನಿಂತಿದ್ದ ಬಳ್ಳಿಯು ನಿಂತಿರುವುದುಂಟೆ? ಚಂದ್ರಿಕೆಯು ಚಂದ್ರನೊಡನೆಯೇ ಹೋಗುವಂತೆ, ಮಿಂಚು ಮೇಘದೊಡನೆ ಮಾಯವಾಗುವಂತೆ, ನಾನೂ ಗಂಡನೊಡನೆ ಹೋಗುವೆನು. ಚಿತಿಯನ್ನೊಡ್ಡು. ನಾನು ಸಹಗಮನಮಾಡುವೆನು" ಎಂದಳು.

ಹೀಗೆಂದು ಹೇಳಿ ದೇಹವನ್ನು ಬಿಡುವುದಕ್ಕೆ ಸಿದ್ಧಳಾಗಿದ್ದ ರತಿಯನ್ನು ಕುರಿತು ಆಕಾಶವಾಣಿಯು "ಎಲೌ ಮನ್ಮಥಪತ್ನಿಯೆ! ಪರಮೇಶ್ವರನ ಫಾಲನೇತ್ರಕ್ಕೆ ಸಿಕ್ಕಿದಗ್ಧನಾಗಿ ಹೋದ ನಿನ್ನ ಪತಿಯು ಶೀಘ್ರವಾಗಿ ನಿನ್ನ ಬಳಿಗೆ ಬರುವನು. ಹಿಂದೆ ಬ್ರಹ್ಮನು ತನ್ನ ಮಗಳಲ್ಲಿಯೇ ಮೋಹಗೊಳ್ಳುವಂತೆ ಮಾಡಿದನಾದ್ದರಿಂದ ನಿನ್ನ ಪತಿಗೆ ಆತನು ಶಾಪಕೊಟ್ಟನು. ಅದರಿಂದ ಹೀಗೆ ಈಗ ಹೀಗೆ ಆಯಿತು. ಈಗಲೂ ಈಶ್ವರನು ಪಾರ್ವತಿಯನ್ನು ಪರಿಣಯಮಾಡಿಕೊಂಡಂದು ಮನ್ಮಥನು ಮತ್ತೆ ತನ್ನ ಶರೀರವನ್ನು ಪಡೆದು ನಿನ್ನ ಬಳಿಗೆ ಬರುವನು. ಅದರಿಂದ ಎಲೌ ಶೋಭನೆಯೆ! ನೀನು ದೇಹವನ್ನು ಬಿಡದಿರು ಬತ್ತಿಹೋದ ನದಿಯು ಮತ್ತೆ ಪೂರ್ಣವಾಗುವಂತೆ ನೀನೂ ಸೌಭಾಗ್ಯವಂತೆಯಾಗುವೆ" ಎಂದು ಹೇಳಿತು ಅದನ್ನು ಕೇಳಿ ರತಿಯು ಮರಣಪ್ರಯತ್ನವನ್ನು ಮಂದಮಾಡಿದಳು

ಇತ್ತ ಪಾರ್ವತಿಯು ಪಿನಾಕಿಯು ತನ್ನ ಎದುರಿನಲ್ಲೇ ಮದನನನ್ನು ಸುಟ್ಟಿರುವುದನ್ನು ನೆನೆದು ಬಹುಶೋಕಪಟ್ಟಳು ತನ್ನ ಸೌಂದರ್ಯವು ಹಾಗೆ ವಿಫಲವಾದುದನ್ನು ಚಿಂತಿಸಿ ಇನ್ನು ಮುಂದೆ ತಪಸ್ಸುಮಾಡಿ ತನ್ನ ಆಸೆಯನ್ನು ನೆರವೇರಿಸಿಕೊಳ್ಳಬೇಕೆಂದು ಮನಸ್ಸುಮಾಡಿದಳು ಆಕೆಯ ತಾಯಿಯಾದ ಮೇನಾದೇವಿಯು ಈ ವೃತ್ತಾಂತವನ್ನು ಕೇಳಿ, ಅವಳನ್ನು ತಬ್ಬಿಕೊಂಡು "ಮಗಳೇ! ಕೋಮಲೆಯಾದ ನಿನಗೆ ತಪಸ್ಸೆಂತು ಸಾಧ್ಯ? ಬೇಡ" ಎಂದು ಕಣ್ಣೀರು ಬಿಟ್ಟುಕೇಳಿಕೊಂಡಳು

ಆದರೂ ಆಕೆಯು ತನ್ನ ಹಟವನ್ನು ಬಿಡಲಿಲ್ಲ. ತಂದೆಯ ಅಪ್ಪಣೆಯನ್ನು ಪಡೆದು ಗೌರೀ ಶಿಖರವೆಂದು ಪ್ರಸಿದ್ಧವಾದ ಹಿಮಾಲಯ ಶಿಖರಕ್ಕೆ ತಪಸ್ಸಿಗೆ ಹೊರಟು ಹೋದಳು. ಆ ಗೌರೀದೇವಿಯು ಹಾರಾದಿ ಆಭರಣಗಳನ್ನು ಬಿಟ್ಟು ಕೆಂಪಗಿರುವ ವಲ್ಕಲವನ್ನು ಉಟ್ಟಳು. ತಲೆಯ ಕೂದಲುಗಳನ್ನು ಹೊಸೆದು ಜಟೆಗಳನ್ನು ಮಾಡಿದಳು.

ಮೌಂಜಿ (ಮುಂಜಿಹುಲ್ಲಿನಿಂದ ಮಾಡಿದ ಹಗ್ಗ) ಯನ್ನು ನಡುವಿಗೆ ಬಿಗಿದಳು ಕಯ್ಯಲ್ಲಿ ಅಕ್ಷಮಾಲೆಯನ್ನು ಧರಿಸಿದಳು. ಭಾರಿಯ ಸುಪ್ಪತ್ತಿಗೆಗಳಲ್ಲಿ ಮಲಗುತ್ತಿದ್ದವಳು ಹೂವ್ವು ಒತ್ತಿಕೊಂಡರೆ ಕಂದುತ್ತಿದ್ದ ಮೆಯ್ಯಿನ ಆಕೆಯು ಬರಿಯ ನೆಲದಮೇಲೆ ಮಲಗುವುದಕ್ಕೆ ಆರಂಭಿಸಿದಳು ಆಕೆಯು ನಿತ್ಯವೂ ಸ್ನಾನಮಾಡಿ ಕೃಷ್ಣಾಜಿನವನ್ನು ಮಾತ್ರ ಉಟ್ಟು ಕೊಂಡು ಅಗ್ನಿಹೋತ್ರವನ್ನು ಆಚರಿಸಿ, ಅಧ್ಯಯನ್ನು ಮುಗಿಸುವಳು ಹೀಗೆ ತಪಸ್ಸು ಮಾಡುತ್ತಿದ್ದ ಅವಳ ಆಶ್ರಮದಲ್ಲಿ ಪ್ರಾಣಿಗಳು ಪರಸ್ಪರ ವೈರವನ್ನು ತೊರೆದು ಬಾಳಿದುವು. ಆಕೆಯು ಮಾಡುವ ಅತಿಥಿ ಪೂಜೆಗೆ ಬೇಕಾದ ವಸ್ತುಗಳನ್ನು ಆಶ್ರಮದಲ್ಲಿರುವ ವೃಕ್ಷಗಳೇ ಕೊಟ್ಟುವು, ತನ್ನ ಮೃದುವಾದ ಶರೀರವು ತಡೆಯುವುದೇ ಇಲ್ಲವೇ ಎಂಬ ಯೋಚನೆಯೂ ಇಲ್ಲದೆ ಮಹತ್ತಪವನ್ನು ಆಕೆಯು ಆಚರಿಸಿದಳು.

ಆಕೆಯ ತಪಸ್ಸು ಅತಿತೀವ್ರವಾಗಿದ್ದಿತು. ಕಮಲದಂತೆ ಕೋಮಲವಾಗಿದ್ದ ಆ ದೇಹದಲ್ಲಿ ಚಿನ್ನದ ದೃಢತೆಯು ಇರಬೇಕು ಇಲ್ಲದಿದ್ದರೆ ಆ ರೀತಿಯ ತಪಸ್ಸನ್ನು ಮಾಡಲು ಹೇಗೆ ಸಾಧ್ಯವಾದೀತು ? ಆಕೆಯು ಜ್ವಲಿಸುತ್ತಿರುವ ನಾಲ್ಕು ಅಗ್ನಿಗಳ ನಡುವೆ ನಿಂತು ಕಣ್ಣು ಕುಕ್ಕುತ್ತಿರುವ ಸೂರ್ಯನನ್ನು ನೋಡುತ್ತ ಬೇಸಿಗೆಯಲ್ಲಿ ಚಂದ್ರಕಿರಣ ಗಳು ಮತ್ತು ತಾನಾಗಿ ಲಭಿಸಿದ ಮಳೆಯನೀರು ಇವಿಷ್ಟನ್ನು ಮಾತ್ರ ಆಹಾರಮಾಡುತ್ತ ತಪಸ್ಸು ಮಾಡಿದಳು

ಮಳೆಗಾಲದಲ್ಲಿ, ಬೀಸುತ್ತಿರುವ ಗಾಳಿ ಸುರಿಯುತ್ತಿರುವ ಮಳೆಗಳಲ್ಲಿ ಬಯಲಿನಲ್ಲಿ ಕಲ್ಲಿನ ಮೇಲೆ ಮಲಗುತ್ತಾ ತಪಸ್ಸುಮಾಡಿದ ಆಕೆಯನ್ನು ನೋಡುತ್ತಿದ್ದವೆಂಬಂತೆ ರಾತ್ರಿ ಗಳು ಆಗಾಗ ಮಿಂಚುತ್ತಿದ್ದುವು. ಆಕೆಯು ತಪಸ್ಸಿಗೆ ಆರಂಭಿಸಿದಾಗ ಮೊದ ಮೊದಲು ಉದುರಿದ ಎಲೆಗಳನ್ನು ತಿನ್ನುತ್ತಿದ್ದಳು ಆ ಮೇಲೆ ಅದನ್ನೂ ಬಿಟ್ಟುಬಿಟ್ಟಳು ಅದ ರಿಂದ ಆಕೆಗೆ ಅಪರ್ಣಾ ಎಂದು ಹೆಸರಾಯಿತು (ಪರ್ಣ ಎಲೆ)

ಹೀಗೆ ಕಠಿನವಾದ ತಪಸ್ಸನ್ನು ಆಚರಿಸಿದ ಆಕೆಯು ಇತರ ತಪಸ್ವಿಗಳಿಗಿಂತ ಹೆಚ್ಚಿನ ಯೋಗ್ಯತೆಯನ್ನು ಪಡೆದಳು ಒಂದು ದಿನ ಅಜಿನದಂಡಗಳನ್ನು ಧರಿಸಿ ಬ್ರಹ್ಮ ತೇಜಸ್ಸಿನಿಂದ ಮೆರೆಯುತ್ತಿರುವ ಒಬ್ಬ ಬ್ರಹ್ಮಚಾರಿಯು ಆಕೆಯ ತಪೋವನಕ್ಕೆ ಬಂದನು ಪಾರ್ವತೀದೇವಿಯು ಆತನಿಗೆ ಬಹುಮಾನ ಪೂರ್ವಕವಾಗಿ ಅತಿಥಿಗಳಿಗೆ ಸಲ್ಲಬೇಕಾದ ಪೂಜೆಯನ್ನೆಲ್ಲ ಸಲ್ಲಿಸಿದಳು. ಆತನು ಆ ಉಪಚಾರದಿಂದ ಸಂತೃಪ್ತನಾಗಿ ಆಕೆಯೊಡನೆ ಮಾತನಾಡಲು ಆರಂಭಿಸಿದನು. “ ಎಲೌ ! ಶರೀರವು ಹುಟ್ಟಿರುವುದು ಧರ್ಮವನ್ನು ಸಾಧಿಸುವುದಕ್ಕಾಗಿ ಅದರಿಂದ ನಿನ್ನ ಶಕ್ತಿಗೆ ಅನುಗುಣವಾಗಿ ತಪಸ್ಸುಮಾಡುತ್ತಿರುವೆಯಾ? ನೀನು ಬೆಳೆಸಿರುವ ಗಿಡಗಳು ಪ್ರಾಣಿಗಳೂ ಚೆನ್ನಾಗಿವೆಯೆ? ಲೋಕದಲ್ಲಿ ಲಕ್ಷಣವಂತರು ಪಾಪವನ್ನು ಮಾಡುವುದಿಲ್ಲ ಎನ್ನುವರು. ನಿನ್ನಂತಹ ಸುರೂಪವತಿಯು ತಪಸ್ವಿಗಳೆಲ್ಲರಿಗೂ ಗುರುವಾಗುವಂತಹ ಪದವಿಯನ್ನು ಆರ್ಜಿಸಿದುದರಿಂದ ಆ ಮಾತು ಸತ್ಯವಾಯಿತು ಈ

ಹಿಮಾಲಯದಲ್ಲಿ ಸಪ್ತರ್ಷಿಗಳು ಪೂಜಾತಪಸ್ಸುಗಳನ್ನು ಮಾಡಿರುವ ಸ್ಥಳಗಳುಂಟು : ದಿವ್ಯಗಂಗೆಯೇ ಈತನಲ್ಲಿಗೆ ಇಳಿದು ಬಂದಿರುವಳು : ಹೀಗೆ ಇವೆರಡರಿಂದ ಆಗಲೇ ಪಾವನನಾಗಿದ್ದ ಹಿಮವಂತನು ನಿನ್ನ ಸುಚರಿತಗಳಿಂದ ಇನ್ನೂ ಪಾವನನಾದನು ನಿನ್ನಂತಹವಳು ಅರ್ಥಕಾಮಗಳನ್ನು ಬಿಟ್ಟು ಧರ್ಮವೊಂದನ್ನೇ ಸೇವಿಸುತ್ತಿರುವುದರಿಂದ ತ್ರಿವರ್ಗ ಸಾಂಭೂತವಾದ ಧರ್ಮವು ಇನ್ನೂ ವಿಶೇಷವಾಯಿತು ನೀನು ನನಗೆ ಈಗ ಈ ಸತ್ಕಾರಗಳನ್ನು ಮಾಡಿರುವೆ ಆದರಿಂದ ನನ್ನನ್ನೂ ಆತ್ಮೀಯನೆಂದು ಭಾವಿಸಿ, ಬ್ರಹ್ಮಚಾರಿ ಚಾಪಲ್ಯದಿಂದ ಕೇಳುವ ಒಂದು ಪ್ರಶ್ನೆಗೆ, ರಹಸ್ಯವೇನೂ ಇಲ್ಲದಿದ್ದರೆ, ಉತ್ತರಕೊಡುವವಳಾಗು. ನೀನು ಹಿರಣ್ಯಗರ್ಭನ ಕುಲದಲ್ಲಿ ಹುಟ್ಟಿದವಳು. ನಿನ್ನ ದೇಹವು ತ್ರಿಲೋಕ ಸೌಂದರ್ಯ ಯುಕ್ತವಾದುದು ನಿನ್ನ ಐಶ್ವರ್ಯವೂ ಸುಖವೂ ಯೌವನವೂ ಅಪೂರ್ವವಾದವು ಆದರೂ ನೀನು ತಪಸ್ಸುಮಾಡುತ್ತಿರುವುದೇಕೆ ? ಯಾವುದಾದರೂ ಅನಿಷ್ಟದ ಪರಿಹಾರಕ್ಕಾಗಿ ಹೀಗೆ ತಪಸ್ಸುಮಾಡುತ್ತಿರುವೆಯೆಂದರೆ, ಅಂತಹ ಅನಿಷ್ಟವಾವುದೂ ನಿನಗಿರುವಂತೆ ತೋರುವುದಿಲ್ಲ ಆದರೂ ನಿನ್ನ ದೇಹವು ಯಾವುದೋ ದುಃಖದಿಂದ ಕಂಗೆಟ್ಟಿರುವುದು ನೀನು ಯೌವ್ವನೋಚಿತವಾದ ಆಭರಣಗಳನ್ನು ಧರಿಸದೆ ವೃದ್ಧರಂತೆ ವಲ್ಕಲವನ್ನು ಧರಿಸಲು ಕಾರಣವೇನು ? ಅಥವಾ ನೀನು ಒಪ್ಪಿದ ವರನು ನಿನ್ನನ್ನು ಒಪ್ಪದೆ ಹೀಗೆ ತಪಸ್ಸಿಗೆ ಗುರಿಮಾಡಿ ಹಗಲಿನ ಚಂದ್ರನಂತೆ ಮಾಡಿರುವನೋ ? ನಿನ್ನಂತಹವಳನ್ನು ವರಿಸದಿರುವ ಆ ಅಭಾಗ್ಯನಾದರೂ ಯಾರೂ ? ಎಲೌ ಗೌರೀದೇವಿಯೆ ! ನಿನ್ನ ಅಭೀಷ್ಟವಾದರೂ ಏನು ಎಂಬುದನ್ನು ಹೇಳು. ನಾನು ಕೊಂಚ ತಪಸ್ಸುಮಾಡಿದ್ದೇನೆ ಅದರಲ್ಲಿ ಅರ್ಧವನ್ನು ನಿನ್ನ ಇಷ್ಟಸಿದ್ಧಿಗಾಗಿ ಕೊಡಲೂ ಸಿದ್ಧನಾಗಿದ್ದೇನೆ ಆದರಿಂದ ಹೇಳು ''

ಆ ಗೌರೀದೇವಿಯು ಆತನ ಮಾತನ್ನು ಕೇಳಿದಳು ಆದರೆ ತನ್ನ ಹೃದಯದಲ್ಲಿರುವ ಆಶೆಯನ್ನು ಹೇಳಲಾಕೆಗೆ ಸಾಧ್ಯವಾಗಲಿಲ್ಲ ಆದರಿಂದ ತನ್ನ ಸಮೀಪದಲ್ಲಿರುವ ಸಖಿಯನ್ನು ನೋಡಲು, ಆಕೆಯು ಮಾತನಾಡಿದಳು: ''ಎಲೈ ಸಾಧುವೆ ! ಕುತೂಹಲದಿಂದ ಕೇಳಿದೆ ಆಲಿಸು. ಮಾನವತಿಯಾದೀಕೆಯು ಮಹೇಂದ್ರಾದಿಗಳನ್ನು ಒಲ್ಲದೆ ಪರಮೇಶ್ವರನನ್ನು ಮದುವೆಯಾಗಲು ಇಚ್ಛಿಸಿದಳು ಆತನು ಸೌಂದರ್ಯಾದಿಗಳಿಗೆ ಒಲಿಯುವವನಲ್ಲ ಮತ್ತು ಈಕೆಗೋಸ್ಕರವಾಗಿ ಮನ್ಮಥನೆಸೆದ ಬಾಣವು ಆತನಿಂದ ನಿರಾಕೃತವಾಗಿ ಈಕೆಯ ಎದೆಯನ್ನು ಭೇದಿಸಿತು ಮದನನೂ ದಗ್ಧನಾಗಿ ಹೋದನು. ಆಗಿನಿಂದಲೂ ಈಕೆಯು ಚಿಂತೆಗೊಂಡು ಮನಸ್ಸೆಲ್ಲವನ್ನೂ ಆ ಪರಶಿವನಲ್ಲಿಟ್ಟು ವ್ಯಥಿಸಿದಳು ಸ್ವಾಮಿಯೆ! ನಿನ್ನನ್ನು ತಿಳಿದವರು ಸರ್ವಗತನೆಂದು ಹೇಳುವರು ಆದರೂ ನಿನ್ನನ್ನೇ ಧ್ಯಾನಿಸುತ್ತಿರುವ ನನ್ನನ್ನೇಕೆ ಅರಿಯದಿರುವೆ ? ಎಂದು ಅಳಲಿದಳು ಹೀಗೆ ದುಃಖಿಸುತ್ತಾ ಜಗತ್ಪತಿಯಾದ ಆ ಶಿವನನ್ನು ಒಲಿಸಲು ಬೇರೆ ಉಪಾಯವನ್ನು ಕಾಣದೆ ತಂದೆಯ ಅಪ್ಪಣೆಯನ್ನು ಪಡೆದು ಈಕೆಯು ಹೀಗೆ ತಪಸ್ಸನ್ನು ಆಚರಿಸುತ್ತಿರುವಳು. ನಮ್ಮ ಸಖಿಯು ನೆಟ್ಟ ಮರಗಳೆಲ್ಲವೂ ಫಲ ಬಿಟ್ಟುವಾದರೂ ಆಕೆಯ ತಪಸ್ಸುಮಾತ್ರ ಇನ್ನೂ ಫಲವಾಗಿಲ್ಲ.

ಮಳೆಯಿಲ್ಲದಾಗ ಬೆಂದುಹೋದ ಉತ್ತ ನೆಲದಂತೆ ಆಗಿರುವ ನಮ್ಮ ಈ ಸಖಿಯನ್ನು ಆತನು ಯಾವಾಗ ಅನುಗ್ರಹಿಸುವನೋ ?" ಎಂದು ಕಣ್ಣೀರು ಬಿಟ್ಟಳು.

ಆ ಮಾತುಗಳನ್ನು ಕೇಳಿ ಪರಶಿವನಿಗೆ ಬಹಳ ಸಂತೋಷವಾಯಿತು ಪಾರ್ವತಿಯು ತನ್ನ ಅಕ್ಷಮಾಲೆಯನ್ನು ತಿರುಗಿಸುತ್ತಾ "ಎಲೈ ಬ್ರಾಹ್ಮಣಶ್ರೇಷ್ಠನೆ! ಈ ಸಖಿಯರು ಹೇಳಿದುದು ನಿಜ ಅದಕ್ಕಾಗಿಯೇ ನಾನು ತಪಸ್ಸುಮಾಡುತ್ತಿರುವುದು" ಎಂದಳು

ಬ್ರಹ್ಮಚಾರಿಯು ಮತ್ತೆ ಹೇಳಿದನು: "ಎಲೌ! ನೀನು ಆ ಪರಮೇಶ್ವರನಲ್ಲಿ ಮನಸ್ಸಿಟ್ಟಿರುವುದು ನನ್ನ ಮನಸ್ಸಿಗೆ ಒಪ್ಪಲಿಲ್ಲ. ಹಾವು ಸುತ್ತಿರುವ ಆತನ ಹಸ್ತವನ್ನು ಹಿಡಿಯಲೇಕೆ ಮನಸ್ಸುಮಾಡಿದೆ! ನೀನೇ ಯೋಚಿಸು ನೀನು ಕಲಹಂಸಗಳನ್ನು ನೇದಿರುವ ಉತ್ತಮದುಕೂಲವನ್ನು ಉಡುವವಳು ಆತನು ರಕ್ತವು ಸೋರುತ್ತಿರುವ ಗಜಚರ್ಮವನ್ನು ಉಟ್ಟವನು ನಿಮ್ಮಿಬ್ಬರಿಗೂ ಸರಿಹೋಗ ವುದೆ? ಅಲಕ್ತರಸದಿಂದ ಕೆಂಪಾದ ಕಾಲುಗಳುಳ್ಳ ನೀನು ದಿವ್ಯ ಭವನದಲ್ಲಿ ಹೂವಿನ ಮೇಲೆ ನಡೆಯುಬೇಕಾದವಳು ಆತನನ್ನು ಮದುವೆಯಾಗಿ ಸ್ಮಶಾನದಲ್ಲಿ ಶವಭಸ್ಮಾದಿಗಳು ತುಂಬಿರುವೆಡೆಯಲ್ಲಿ ನಡೆದಾಡುವೆಯಾ? ಉತ್ತಮವಾದ ಆನೆಯನ್ನೇರಿ ತಿರುಗಬೇಕಾದ ನೀನು ಪರಶಿವನನ್ನು ಮದುವೆಯಾಗಿ ಆತನ ಮುದಿಯೆತ್ತನ್ನೇರಿ ತಿರುಗುವೆಯಾ ಲೋಕದಲ್ಲಿ? ಹೀಗೆ ಹಾಸ್ಯಕ್ಕೆಗುರಿಯಾದವರಿಬ್ಬರು ಆ ಬಾಲಚಂದ್ರಕಲೆಯೊಂದು, ಇನ್ನೊಂದು ನೀನು ಹೋಗಲಿ, ಆತನಾದರೂ ಎಂಥವನು ವಿರೂಪಾಕ್ಷನು. ಎಲ್ಲಿ ಹುಟ್ಟಿದನೋ ಎಲ್ಲಿ ಬೆಳೆದನೋ ಯಾರೂ ಕಾಣರು ದಿಗಂಬರನಾಗಿರುವುದರಿಂದಲೇ ಆತನ ಐಶ್ವರ್ಯವೆಲ್ಲವೂ ತಿಳಿದಿದೆ ಹೀಗಿರುವಾಗ ಯಾವ ಸೌಭಾಗ್ಯಕ್ಕಾಗಿ ಅತನನ್ನು ವರಿಸಿದೆ? ಅಂತಹವನನ್ನು ಪುಣ್ಯಲಕ್ಷಣೆಯಾದ ನೀನು ವರಿಸುವುದೆಂದರೆ, ಶ್ಮಶಾನದಲ್ಲಿರುವ ಶೂಲವನ್ನು ತಂದು ಯೂಪಮಾಡಿದಂತಾಗುವುದು?

ಹೀಗೆ ಪ್ರತಿಕೂಲವಾಗಿ ಮಾತನಾಡುತ್ತಿರುವ ಆ ವಿಪ್ರವಟುವನ್ನು ನೋಡಿ ಆ ಪಾರ್ವತಿಗೆ ಕೋಪವು ಬಂದಿತು: "ನೀನು ಆ ಪರಮೇಶ್ವರನನ್ನು ಅರಿಯೆ! ಮಹಾತ್ಮರನ್ನು ಮಂದರೆಂತು ಅರಿಯುವರು? ದೇವಾದಿದೇವನಾದ ಆ ಸ್ವಾಮಿಯಲ್ಲಿ ನೀನು ದೋಷಗಳೆಂದು ತೋರಿಸಿದವೆಲ್ಲ ಆತನ ಗುಣಗಳೇ! ಸ್ವಯಂಭುವನಾದ ಆ ಪರಮೇಶ್ವರನನ್ನು ಬಲ್ಲವರಾರು? ನಿನ್ನೊಡನೆ ನನಗೆ ಹೆಚ್ಚುಮಾತೇಕೆ? ಆತನು ನೀನು ಹೇಳಿದಂತೆಯೇ ಇದ್ದರೆ ತಾನೇ ಏನು? ನನಗೆ ಆತನೇ ಬೇಕು." ಎಂದಳು

ವಟುವು ಮತ್ತೆ ಮಾತನಾಡುವುದಕ್ಕೆ ಬಾಯಾರಿಸಿದನು ಆಕೆಗೆ ಅದು ಸಹಿಸಲಿಲ್ಲ 'ಸಖಿಯರೇ ಇವನನ್ನು ಕಳುಹಿಸಿಬಿಡಿ ಅಥವಾ ನಾನೇ ಇಲ್ಲಿಂದ ಎದ್ದು ಹೋಗುವೆನು ಈ ಪಾಪವಾಕ್ಯಗಳನ್ನು ನಾನೇಕೆ ಕೇಳಲಿ?" ಎಂದು ತಾನೇ ಹೊರಟು ಹೋಗಲು ಎದ್ದಳು. ಸ್ವಾಮಿಯು ತಟ್ಟನೆದ್ದು ತನ್ನ ನಿಜರೂಪವನ್ನು ತೋರಿಸಿ ಆಕೆಯ ಎದುರು ನಿಂತು ತಡೆದನು

ಸ್ವಾಮಿಯೇ ಎದುರಿಗೆ ಬಂದುದನ್ನು ನೋಡಿ ಪಾರ್ವತಿಗೆ ಏನುಮಾಡುವುದಕ್ಕೂ ತೋರದೆ ಹೋಯಿತು. ತಡೆಗಟ್ಟಿರುವ ಮಹಾನದಿಯಂತೆ ಮುಂದೆಹೋಗಲಾರದವಳಾಗಿ ಹಾಗೆಯೇ ನಿಲ್ಲಲಾರದವಳೂ ಆದಳು. ಹಾಗೆ ನಡುಗುತ್ತ ನಿಂತಿರುವ ಆಕೆಯನ್ನು ಪರಮೇಶ್ವರನೇ ಮಾತನಾಡಿಸಿ " ದೇವಿ ! ನಿನ್ನ ತಪಸ್ಸಿನಿಂದ ನನ್ನನ್ನು ಕೊಂಡುಕೊಂಡಿರುವೆ ಇಂದಿನಿಂದ ನಾನು ನಿನಗೆ ದಾಸನಾಗಿರುವೆನು " ಎಂದು ಹೇಳಿ ಆಕೆಯ ಶ್ರಮವನ್ನೆಲ್ಲ ಪರಿಹಾರಮಾಡಿದನು

ಪಾರ್ವತೀದೇವಿಯು " ಸ್ವಾಮಿಯೆ ! ತಂದೆಯಪ್ಪಣೆಯನ್ನು ಪಡೆದು ನನ್ನನ್ನು ವರಿಸು " ಎಂದು ಸಖೀಮುಖದಿಂದ ಪ್ರಾರ್ಥಿಸಿದಳು. ಮಹೇಶ್ವರನೂ ಹಾಗೇ ಆಗಲೆಂದು ಸಪ್ತರ್ಷಿಗಳನ್ನು ಸ್ಮರಿಸಿದನು. ತೃತೀಯಾಶ್ರಮದಲ್ಲಿರುವ ಕಲ್ಪವೃಕ್ಷಗಳೋ ಎಂಬಂತಿರುವ ಅವರು ಕೂಡಲೇ ಅರುಂಧತೀ ಸಮೇತರಾಗಿ ಬಂದು ಈಶ್ವರನನ್ನು ಕಾಣಿಸಿಕೊಂಡರು. ಪಾರ್ವತಿಯನ್ನು ಧರ್ಮಪತ್ನಿಯನ್ನಾಗಿ ಮಾಡಿಕೊಳ್ಳಬೇಕೆಂದು ಪರಮೇಶ್ವರನು ಮನಸ್ಸುಮಾಡಿದಾಗಲೇ ಸ್ಮರನು ಬದುಕಿದೆನೆಂದು ಹಿಗ್ಗಿದನು

ತನ್ನನ್ನು ಸುತ್ತಿಮಾಡುತ್ತ " ಸಾಮಿಯೆ ! ಯಾವಕಾರ್ಯಕ್ಕಾಗಿ ನಮ್ಮನ್ನು ಒರಮಾಡಿರುವೆ ? ಅಪ್ಪಣೆಯಾಗಲಿ " ಎಂದು ಕೇಳುತ್ತಿರುವ ಆ ಸಪ್ತರ್ಷಿಗಳನ್ನು ಕುರಿತು ಈಶ್ವರನು "ದೇವತೆಗಳು ಸ್ವಕಾರ್ಯಕ್ಕಾಗಿ ನನ್ನನ್ನು ಪುತ್ರವಂತನಾಗಬೇಕೆಂದು ಯಾಚಿಸುತ್ತಿರುವುದನ್ನು ಬಲ್ಲಿರಿ. ಆ ಯಾಚನೆಯನ್ನು ಸಲ್ಲಿಸಲು ನಾನು ಪಾರ್ವತಿಯನ್ನು ಮದುವೆಯಾಗಬೇಕೆಂದಿರುವೆನು ಅದರಿಂದ ತಾವು ಹಿಮಾದ್ರಿರಾಜನನ್ನು ನನಗೋಸ್ಕರವಾಗಿ ಕನ್ಯೆಯನ್ನು ಯಾಚಿಸಿರಿ ತಾವು ಹೋಗಿ ಕಾರ್ಯವನ್ನು ಮಾಡಿಕೊಂಡು ಮಹಾಕೇಶೀನದಿಯ ಸಂಗಮದ ಬಳಿ ಇರುವ ನನ್ನನ್ನು ಬಂದುನೋಡಿರಿ" ಎಂದು ಹೇಳಿದನು

ಆ ಸಪ್ತರ್ಷಿಗಳೂ ಕೂಡ ಅದುವರೆಗೂ ಏನನ್ನೂ ಯಾರಿಂದಲೂ ಪರಿಗ್ರಹಿಸದವರಾಗಿದ್ದರೂ ಸಂಯಮಿಗಳಲ್ಲಿ ಅಗ್ರಗಣ್ಯನಾದ ಪರಶಿವನಿಗೋಸ್ಕರ ಕನ್ಯಾಯಾಚನೆ ಮಾಡಲು ಮನೋವೇಗದಿಂದ ಹೊರಟರು. ಅವರು ಸರ್ವಸಂಪತ್ತುಗಳಿಗೂ ಸ್ಥಾನವಾದ ಮತ್ತು ಸ್ವರ್ಗದ ನೆರೆಹೊರೆಯೋ ಎಂಬಂತಿರುವ ಅಲಕಾನಗರವನ್ನು ದಾಟಿ, ಗಂಧಮಾದನ ಪರ್ವತಕ್ಕೆ ಬಂದರು. ಹಿಮವಂತನ ರಾಜಧಾನಿಯಿರುವ ಅಲ್ಲಿ ರತ್ನಶಿಲೆಗಳು ವಿರಾಜಿಸುವುವು. ಅಲ್ಲಿ ಸಿಂಹಕ್ಕೂ ಹೆದರದ ಆನೆಗಳು, ಬಿಲಗಳಲ್ಲಿ ಹುಟ್ಟಿದ ಕುದುರೆಗಳು, ಯಕ್ಷಕಿಂಪುರುಷಾದಿಗಳು ವನದೇವತೆಗಳು, ಇರುವರು. ಅಲ್ಲಿನವರು ಯಾವಾಗಲೂ ಯೌವ್ವನವಂತರಾಗಿಯೇ ಇರುವರು. ಅವರು ಭಯವೆಂಬುದನ್ನೇ ತಿಳಿಯರು ಅಲ್ಲಿನ ಉದ್ಯಾನಗಳಲ್ಲಿ ಕಲ್ಪತರುಗಳು ತುಂಬಿರುವುವು

ಹಿಮವಂತನ ಇಂತಹ ರಾಜಧಾನಿಗೆ ಬಂದು ಆ ಸಪ್ತರ್ಷಿಗಳು ಸೂರ್ಯರಂತೆ ಪ್ರಕಾಶಮಾನರಾಗಿ ಆತನನ್ನು ಕಾಣಿಸಿಕೊಂಡರು. ಅವರಿಗೆ ಆತನು ಯಥೋಚಿತವಾಗಿ

ಸತ್ಕರಿಸಿದನು "ಎಲೈ ಮಹಾನುಭಾವರೇ! ಮೋಡಕಾಣಿಸದೆ ಮಳೆಯಾದಂತೆ, ಕುಸುಮವು ಕಾಣಿಸದೆ ಫಲವು ಬಂದಂತೆ, ತಾವು ನನಗೆ ದರ್ಶನಕೊಟ್ಟಿರುವಿರಿ ಚಿನ್ನವಾದ ಕಬ್ಬಿಣದಂತೆ ತಮ್ಮ ಅನುಗ್ರಹದಿಂದ ನಾನೂ ಕೃತಾರ್ಥನಾದೆನು ಇನ್ನು ಮೇಲೆ ಶುದ್ಧರಾಗಬೇಕೆನ್ನುವ ಭೂತಗಳೆಲ್ಲವೂ ತಮ್ಮ ದರ್ಶನದಿಂದ ಪವಿತ್ರನಾದ ನನ್ನನ್ನು ಸೇವಿಸುವಂತೆ ಆಯಿತು. ಗಂಗಾದೇವಿಯು ಕೃಪೆಮಾಡಿ ನನ್ನ ತಲೆಯ ಮೇಲಿಳಿದು ನನ್ನನ್ನು ಪವಿತ್ರಮಾಡಿದಂತೆ ತಮ್ಮ ಪಾದೋದಕವೂ ನನ್ನನ್ನು ಪವಿತ್ರಗೊಳಿಸಿದೆ ಹೀಗೆ ನನ್ನನ್ನು ಉದ್ಧರಿಸಲು ದಯಮಾಡಿಸಿದ ತಮ್ಮನ್ನು ಹೇಗೆ ಸತ್ಕರಿಸಲಿ? ತಮ್ಮ ಯಾವ ಅಪ್ಪಣೆಯನ್ನು ಪಾಲಿಸಲಿ?" ಎಂದು ಪ್ರಾರ್ಥಿಸಿದನು.

ಆಗ ಆ ಸಪ್ತರ್ಷಿಗಳಲ್ಲಿ ಶ್ರೇಷ್ಠನಾದ ಅಂಗಿರಸನು ಹೀಗೆ ಮಾರ್ನುಡಿದನು: "ಎಲೈ! ಹಿಮವಂತನೆ! ನಿನ್ನ ಮನಸ್ಸು ನಿನ್ನ ಶಿಖರಗಳಂತೆಯೇ ಉನ್ನತವಾಗಿರುವುದು ನಿನ್ನನ್ನು ವಿಷ್ಣುವೆಂದು ಹೊಗಳುವುದು ನ್ಯಾಯವು. ನೀನು ಈ ಭೂಮಂಡಲವನ್ನು ಧರಿಸದಿರಲು, ಮೃದುವಾದ ಫಣಗಳಿಂದ ನಾಗರಾಜನು ಧರಿಸುವುದು ಸಾಧ್ಯವಾದೀತೆ? ನಿನ್ನ ನದಿಗಳೂ ಕೀರ್ತಿಯೂ ಸಮುದ್ರಕ್ಕಿಂತಲೂ ಅಪಾರವಾಗಿದ್ದು ಲೋಕವನ್ನು ಪುಣ್ಯವಂತವನ್ನಾಗಿ ಮಾಡುತ್ತಿರುವುವು. ದೇವತಾರೂಪನಾದ ನಿನ್ನ ಶಿಖರವು ಸುಮೇರುವನ್ನೂ ಮೀರುವಂತಹುದು ನೀನು ಸತ್ಪುರುಷರ ಆರಾಧನೆಗೇ ಮೀಸಲಾಗಿರುವೆ. ಈಗ ನಾವು ಬಂದಿರುವ ಕಾರ್ಯವನ್ನು ಮಾಡಿಕೊಟ್ಟು ಶ್ರೇಯೋಭಾಗಿಯಾಗು ವಿಶ್ವಸಾಕ್ಷಿಯೂ ಕರ್ಮಸಾಕ್ಷಿಯೂ ಚಂದ್ರಶೇಖರನೂ ಆದ ಸ್ವಾಮಿಯು ನಿನ್ನ ಕುಮಾರಿಯನ್ನು ಮದುವೆಯಾಗಲೆಳಸುವನು. ಆಕೆಯು ಶಿವಪತ್ನಿಯಾಗಿ ಲೋಕಮಾತೆಯಾಗುವಳು ಆಕೆಗೆ ದೇವಾದಿ ದೇವತೆಗಳೆಲ್ಲ ಮಣಿಯುವರು. ವಧುವು ಉಮಾದೇವಿಯು ; ಕನ್ಯಾದಾನಮಾಡುವವನು ನೀನು : ಕನ್ಯಾರ್ಥಿಗಳು ನಾವು : ಪರಿಣಯಮಾಡಿಕೊಳ್ಳುವ ವರನು ಶಂಭುವು. ಈ ಕಾರ್ಯದಿಂದ ನಿನ್ನ ವಂಶವೆಲ್ಲ ಸಮುನ್ನತವಾಗುವುದು. ನೀನು ಸರ್ವವಂದ್ಯನಾದ ಪರಮೇಶ್ವರನಿಗೂ ವಂದ್ಯನಾಗುವೆ"

ಈ ಮಾತುಕಥೆಗಳು ನಡೆಯುವಾಗ ತಂದೆಯ ಪಕ್ಕದಲ್ಲಿಯೇ ನಿಂತಿದ್ದ ಪಾರ್ವತಿಯು ಇದನ್ನು ಕೇಳಿ ನಾಚಿ ತಲೆಬಗ್ಗಿಸಿದಳು ಶೈಲರಾಜನು ತನಗೆ ಸಂಪೂರ್ಣಸಮ್ಮತಿಯಿದ್ದರೂ ಪತ್ನಿಯಾದ ಮೇನಾದೇವಿಯ ಮುಖವನ್ನ ನೋಡಿದನು ಹೀಗೆ ಮಗಳ ಮತ್ತು ಮಡದಿಯ ಒಪ್ಪಿಗೆಯನ್ನೂ ಪಡೆದು "ಮಗಳೇ! ವಿಶ್ವಾತ್ಮನಿಗೆ ನಿನ್ನನ್ನು ಭಿಕ್ಷೆಯಾಗಿ ಒಪ್ಪಿಸಿದ್ದೇನೆ" ಎಂದು ಹೇಳಿ, "ತ್ರಿಲೋಚನ ವಧುವಾದೀಕೆಯು ತಮಗೆ ನಮಸ್ಕರಿಸುವಳು" ಎಂದು ಆಕೆಯಿಂದ ಅವರಿಗೆ ನಮಸ್ಕಾರಮಾಡಿಸಿದನು ಅವರೂ ಆ

ದಾನದಿಂದ ಪರಿತೃಪ್ತರಾಗಿ ಗಿರಿರಾಜನನ್ನು ಆಶೀರ್ವದಿಸಿ, "ಇನ್ನು ನಾಲ್ಕನೆಯ ದಿವಸ ಮುಹೂರ್ತವು ನಡೆಯಲಿ" ಎಂದು ಗೊತ್ತುಮಾಡಿ ಹಿಂತಿರುಗಿ ಬಂದು, ಈಶ್ವರನಿಗೆ ಎಲ್ಲವನ್ನೂ ಅರಿಕೆಮಾಡಿ ಬೀಳ್ಕೊಂಡರು.

ಹಿಮವಂತನ ರಾಜಧಾನಿಯಲ್ಲಿ ರಾಜಕನ್ಯಾ ವಿವಾಹಕ್ಕಾಗಿ ಮನೆ ಮನೆಯಲ್ಲಿಯೂ ಸಂಭ್ರಮವಾಗಿ ಎಲ್ಲವೂ ಅಣಿಗೊಂಡಿತು. ಮಂದಾರ ವೃಕ್ಷಗಳು ನಿಬಿಡವಾಗಿರುವ ಅಲ್ಲಿನ ರಾಜವೀಧಿಗಳು ಸಣ್ಣಪುಟ್ಟ ಧ್ವಜಗಳ ಮಾಲೆಯಿಂದಲೂ ಚಿನ್ನದ ತೋರಣಗಳಿಂದಲೂ ಅಲಂಕೃತವಾಗಿ ಸ್ವರ್ಗದಂತೆ ಮೆರೆಯಿತು ಪಾರ್ವತೀದೇವಿಗೆ ಗಳಿಗೆ ಗಳಿಗೆಗೆ ಹೊಸ ಹೊಸ ಅಲಂಕಾರಗಳಾದುವು. ಕೊನೆಗೆ ವಿವಾಹದೀಕ್ಷೆಯನ್ನು ಅಳವಡಿಸಿ, ಆಕೆಗೆ ಮಂಗಳ ಸ್ನಾನಾದಿಗಳನ್ನು ಮಾಡಿಸಿ ಪೂರ್ವಾಭಿಮುಖವಾಗಿ ಮಂಗಳವೇದಿಯಲ್ಲಿ ಕುಳ್ಳಿರಿಸಿ ನೋಡಿ, ಈ ಸೊಬಗುಗಾರ್ತಿಗೆ ಇನ್ನೇನು ಅಲಂಕಾರಬೇಕು! ಎಂದು ಎಲ್ಲರೂ ಮುಗ್ಧರಾದರು ಧೂಪವನ್ನು ಹಾಕಿ ತಲೆಯನ್ನಾರಿಸಿ, ಹೂವ್ವು ಮುಡಿಸಿದರು: ಗಂಧಾನುಲೇಪನಗಳನ್ನು ಹಚ್ಚಿದರು: ಕೆನ್ನೆಯ ಮೇಲೆ ಪನ್ನೆಯನ್ನು ತಿದ್ದಿದರು: ಅಂಗಾಲಿಗೆ ಅಲಕ್ತರಸವನ್ನು ಹಚ್ಚಿದರು: ಕಣ್ಣಿಗೆ ಕಾಡಿಗೆಯನ್ನು ಹಚ್ಚಿದರು ಆಗ ಆಕೆಯು ಕುಸುಮರಂಜಿತವಾದ ಲತೆಯಂತೆ, ಪ್ರಕಾಶವಾದ ನಕ್ಷತ್ರಗಳಿಂದ ಶೋಭಿಸುತ್ತಿರುವ ರಾತ್ರಿಯಂತೆ, ಹಕ್ಕಿಗಳಿಂದ ಕೂಡಿರುವ ನದಿಯಂತೆ, ವಿಭೂಷಣಗಳಿಂದ ಶೋಭಿಸಿದಳು. ಆಗ ತಾಯಿಯು ಮಾಂಗಲ್ಯವಾದ ಹರಿತಾಲ ಮನಶ್ಶಿಲೆಗಳನ್ನು ಹಚ್ಚಿದಳು. ಆ ಪಾರ್ವತೀದೇವಿಯ ಧಾತ್ರಿಯು ಕಂಬಳಿಯ ದಾರವನ್ನು ಕೈಗೆ ಕಟ್ಟಿದಳು. ನವವಸ್ತ್ರವನ್ನುಟ್ಟ ಆಕೆಯು ಫೇನಪುಂಜಪರಿಶೋಭಿತವಾದ ಕ್ಷೀರಸಮುದ್ರದಂತೆ ವಿರಾಜಿಸಿದಳು. ಮೇನಾದೇವಿಯು ಮಗಳಿಂದ ಕುಲದೇವತಾ ಪೂಜೆಯನ್ನು ಮಾಡಿಸಿ ಸುವಾಸಿನಿಯರಿಗೆ ನಮಸ್ಕಾರಮಾಡಿಸಿ ವಿವಾಹಮಂಟಪಕ್ಕೆ ಕರೆತಂದಳು

ಇತ್ತ ದೇವೇಂದ್ರನ ಅಪ್ಪಣೆಯಿಂದ ಸಪ್ತಮಾತೃಕೆಯರು ಬಂದು ಈಶ್ವರನಿಗೆ ವಿವಾಹದೀಕ್ಷಾಲಂಕಾರವನ್ನು ತಂದರು ಆತನು ಒಮ್ಮೆ ಆ ಅಲಂಕಾರವನ್ನು ಮುಟ್ಟಿದನು ಕೂಡಲೇ ಆತನಿಗೆ ಅಲಂಕಾರವಾಗಿ ಹೋಯಿತು ಭಸ್ಮವು ದಿವ್ಯಗಂಧಾನುಲೇಪನವಾಯಿತು ಕಪಾಲವು ಉತ್ತಮ ಕಿರೀಟವಾಯಿತು ಗಜಾಜಿನವು ದಿವ್ಯದುಕೂಲವಾಯಿತು. ಲಲಾಟನೇತ್ರವು ತಿಲಕವಾಯಿತು. ಭುಜಂಗಗಳೆಲ್ಲವೂ ಮಣಿಭೂಷಣಗಳಾದುವು. ಹೀಗೆ ಅಲಂಕೃತನಾಗಿ ಒರೆಯಲ್ಲಿರುವ ಖಡ್ಗದಂತೆ ಶೋಭಿಸುತ್ತಿರುವ ಪರಮೇಶ್ವರನು ನಂದೀಶ್ವರನ ಭುಜದ ಮೇಲೆ ಕೈಹಾಕಿಕೊಂಡು ನಡೆದು ಬಂದು, ಹುಲಿಯ ಚರ್ಮವನ್ನು ಹೊದಿಸಿರುವ ಗೂಳಿಯ ಮೇಲೆ ಕುಳಿತು ಸಪ್ತಮಾತೃಕಾಪರಿವಾರನಾಗಿ, ಹೊರಟನು.

ಶಿವಗಣಂಗಳು ಮಂಗಲವಾದ್ಯಗಳನ್ನು ಘೋಷದೂಡುತ್ತ - ಮುಂದೆ ಹೊರಟರು. ತ್ವಷ್ಟೃವು ಹೊಸದಾಗಿ ನಿರ್ಮಿಸಿದ ಛತ್ರವನ್ನು ಸೂರ್ಯನು ಹಿಡಿದನು. ಗಂಗಾಯಮುನೆಯರು ಚಾಮರಗಳನ್ನು ಬೀಸಿದರು. ವಿಷ್ಣುವಿರಂಚಿಗಳು ಜಯಜಯಕಾರವನ್ನು ಮಾಡುತ್ತ ಮುಂದೆ ಹೊರಟರು. ಲೋಕಪಾಲರೆಲ್ಲರೂ ಕಾಣಿಸಿಕೊಂಡು ಪ್ರಣಾಮಮಾಡಿದರು. ಆಗ ಪರಶಿವನು ತಲೆಯನ್ನಲ್ಲಾಡಿಸಿ ಬ್ರಹ್ಮನನ್ನು, ಮಾತನಾಡಿಸಿ ವಿಷ್ಣುವನ್ನು, ಮುಗುಳುನಗೆ, ನಕ್ಕು ದೇವೇಂದ್ರನನ್ನು, ಕಣ್ಣಿಂದನೋಡಿ ಅಶೇಷದೇವತೆಗಳನ್ನು ಸಂಭಾವಿಸಿ ಮುಂದೆ ನಡೆದನು ವಿಶ್ವಾವಸುಪ್ರಮುಖರಾದ ಗಂಧರ್ವರು ತ್ರಿಪುರವಿಜಯವನ್ನು ವೀಣೆಯೊಡನೆ ಹಾಡುತ್ತ ನಡೆದರು.

ಹೀಗೆ ಆ ಸ್ವಾಮಿಯು ನಗಾಧಿರಾಜನ ನಗರೋಪವನದ ಬಳಿ ಬಂದನು. ಅಲ್ಲಿ ಅದ್ರಿರಾಜನು ಆತನನ್ನು ಎದುರ್ಗೊಂಡನು ತ್ರೈಲೋಕ್ಯವಂದ್ಯನಾದ ಸ್ವಾಮಿಯು ಮಾವನಾದ ಹಿಮಾಚಲನಿಗೆ ವಂದಿಸಿ ಆತನ ಪ್ರತಿವಂದನೆಯನ್ನು ಪರಿಗ್ರಹಿಸಿ, ಮಾವನು ಮಾರ್ಗವನ್ನು ತೋರಿಸುತ್ತಿರಲು, ನಗರವನ್ನು ಪ್ರವೇಶಮಾಡಿದನು.

ಹೂವು ಹಾಸಿದ್ದ ರಾಜವೀಧಿಯಲ್ಲಿ, ಆ ನಗರದ ಹರ್ಮ್ಯಪ್ರಾಸಾದಗಳನ್ನೆಲ್ಲ ತನ್ನ ತಲೆಯಲ್ಲಿರುವ ಚಂದ್ರಕಾಂತಿಯಿಂದ ಬೆಳಗಿಸುತ್ತ, ಬರುತ್ತಿರುವ ಆ ಪರಮೇಶ್ವರನನ್ನು ಪೌರರು ಮೆಯ್ಯೆಲ್ಲಾ ಕಣ್ಣಾಗಿ ದರ್ಶನಮಾಡಿದರು. "ಇಂತಹ ಪತಿಯನ್ನು ಪಡೆಯುವುದಕ್ಕೆ ನಮ್ಮ ಗೌರೀದೇವಿಯು ತಪಸ್ಸುಮಾಡಿದುದು ಏನಾಶ್ಚರ್ಯ ? ಈ ಸ್ವಾಮಿಯನ್ನು ಕಂಡು ನಾಚಿಕೆಯಿಂದಲೇ ಕುಸುಮಾಯುಧನು ತನ್ನ ದೇಹವನ್ನು ಬಿಟ್ಟಿರಬೇಕು ; ಇಂತಹ ಅಳಿಯನನ್ನು ಪಡೆದ ಶೈಲರಾಜನೇ ಪುಣ್ಯವಂತನು " ಎಂದು ಬಹುತರವಾಗಿ ಹೊಗಳಿದರು ಹೀಗೆ ಹೊಗಳಿಸಿಕೊಳ್ಳುತ್ತ ಮಂಗಳಲಾಜ(ಅರಳು)ಗಳನ್ನು ಸ್ವೀಕರಿಸುತ್ತ ಪರಶಿವನು ಅರಮನೆಗೆ ಬಂದನು.

ಅಲ್ಲಿ ವೃಷಭವಾಹನದಿಂದಿಳಿದು ಅಚ್ಯುತನು ಹಸ್ತಲಾಘವವೀಯುತ್ತಿರಲು, ಕಮಲಾಸನನು ದಾರಿತೋರಿಸುತ್ತಿರಲು, ಸಪ್ತರ್ಷಿಪ್ರಮುಖರಾದ ಋಷಿಗಣಗಳೂ ಇಂದ್ರಮುಖರಾದ ದೇವತೆಗಳೂ ಶಿವಗಣಗಳೂ ಹಿಂದೆ ಬರುತ್ತಿರಲು ಸ್ವಾಮಿಯು ಅರಮನೆಯನ್ನು ಪ್ರವೇಶಿಸಿ, ಹಿಮಾಚಲೇಂದ್ರನು ದಾನಮಾಡಿದ ಮಧುಪರ್ಕವನ್ನು ಗ್ರಹಿಸಿದನು ಮುಂದೆ ಶೈಲೇಂದ್ರನು ಉಮಾದೇವಿಯ ಹಸ್ತವನ್ನು ಪರಶಿವನ ಹಸ್ತದಲ್ಲಿಟ್ಟು ಕನ್ಯಾದಾನಮಾಡಿದನು. ಸ್ವಾಮಿಯು ವಿವಾಹ ಸಾಕ್ಷಿಯಾದ ಯಜ್ಞೇಶ್ವರನಿಗೆ ತನ್ನ ನವವಧುವಿನೊಡನೆ ಮೂರುಸಲ ಪ್ರದಕ್ಷಿಣಮಾಡಿದನು. ಪುರೋಹಿತನು ಇಬ್ಬರನೂ ಒಟ್ಟಿಗೆ ಕೂಡಿಸಿ ಲಾಜಾಹೋಮ ಮಾಡಿಸಿ "ಎಲೆ ವತ್ಸೆ! ಭರ್ತೃವಾದ ಈ ಶಿವನೊಡನೆ

ನೀನು ಧರ್ಮಚರ್ಯೆಯನ್ನು ನಡೆಸು '' ಎಂದು ಹೇಳಿದನು. ಆಕೆಯು ಅದನ್ನು ಅಂಗೀಕರಿಸಿದಳು. ಅನಂತರ ದಂಪತಿಗಳಿಗೆ ಧ್ರುವದರ್ಶನಮಾಡಿಸಿದನು.

ಹೀಗೆ ಪಾಣಿಗ್ರಹಣೋಪಚಾರವನ್ನು ಪಡೆದ ಆ ಜಗತ್ಪಿತೃಗಳು ಪದ್ಮಾಸನಸ್ಥನಾಗಿದ್ದ ಪಿತಾಮಹನ ಬಳಿಗೆ ಬಂದು ನಮಸ್ಕಾರಮಾಡಿದರು. ಆತನು ''ವೀರಮಾತೆಯಾಗು'' ಎಂದು ಆಶೀರ್ವದಿಸಿದನು. ಅನಂತರ ಹಸೆಯ ಮೇಲೆ ಕುಳಿತ ಆ ದಂಪತಿಗಳಿಗೆ ಅಕ್ಷತಾರೋಪಣವಾಯಿತು. ಶ್ರೀದೇವಿಯು ತನ್ನ ಕರದಲ್ಲಿದ್ದ ಕಮಲವನ್ನು ಆ ದಂಪತಿಗಳಿಗೆ ಛತ್ರವಾಗಿ ಹಿಡಿದಳು. ಭಾರತಿಯು ಆಶೀರ್ವಾದದ ಹಾಡುಗಳನ್ನು ಹಾಡಿದಳು. ಉರ್ವಶ್ಯಾದಿ ಅಪ್ಸರೆಯರು ಒಂದು ಮುಹೂರ್ತಕಾಲ ಮನೋಹರವಾದ ನಾಟಕವನ್ನಾಡಿದರು. ಹೀಗೆ ಮದುವಣಿಗನಾದ ಸ್ವಾಮಿಗೆ ದೇವಾದಿ ದೇವತೆಗಳೆಲ್ಲರೂ ಬಂದು ನಮಸ್ಕಾರಮಾಡಿ ''ಮಹಾದೇವನೆ! ಈಗ ಶಾಪಾವಸಾನಗೊಳಿಸಿ ಮನ್ಮಥನನ್ನು ಬದುಕಿಸಿ ಆತನಿಂದ ಸೇವೆಯನ್ನು ಕೈಗೊಳ್ಳುವನಾಗು '' ಎಂದು ಯಾಚಿಸಿದರು.

ಮಹಾದೇವನು ಹಾಗೆಯೇ ಆಗಲೆಂದು ಅವರಿಗೆ ವರವನ್ನು ಕೊಟ್ಟು ಪತ್ನೀದ್ವಿತೀಯನಾಗಿ ಏಕಾಂತವಾಸಿಯಾದನು.



# ಏಳರ ಕತೆ

ಜಗತ್ತಿನಲ್ಲಿ ಏಳರ ಸ್ಥಾನವು ಅತಿವಿಚಿತ್ರವಾದದ್ದು. ಈಗ ಪೂರ್ವದೇಶೀಯರು ಪಶ್ಚಿಮದೇಶೀಯರು ಎಂದು ಎರಡು ಗುಂಪಾಗಿದೆ ಏಷ್ಯಾಖಂಡವೆಲ್ಲಾ ಪೂರ್ವದೇಶೀಯರು ಈ ಖಂಡದಲ್ಲಿ ಬಹು ಪುರಾತನವಾದ ದೇಶಗಳುಂಟು. ಈ ದೇಶಗಳ ನಾಗರಿಕತೆಯು ಬಹಳ ಪ್ರಾಚೀನವಾದುದು ಇಂಡಿಯಾ ಚೈನಾ ಪರ್ಶಿಯ ಮಧ್ಯಏಷ್ಯ ಅರೇಬಿಯ ಮೊದಲಾದ ಸ್ಥಾನಗಳಲ್ಲಿ ಸಾವಿರಾರು ವರ್ಷದ ನಾಗರಿಕತೆಯಿತ್ತೆಂದು ಹೇಳಲಾಗಿದೆ ಈಜಿಪ್ಟಿನಲ್ಲಿಯೂ ೧೦ ೧೫, ಸಾವಿರವರ್ಷಗಳ ನಾಗರಿಕತೆಯಿತ್ತೆಂದು ಗ್ರಂಥಗಳಿಂದಲೂ ಈಚೆಗೆ ಸಿಕ್ಕಿದ ವಸ್ತುಗಳಿಂದಲೂ ಗೊತ್ತಾಗಿದೆ ಈಗಿನ ಯೂರೋಪು ಖಂಡವು ಹೊಸದೊಂದು ನಾಗರಿಕತೆಯನ್ನು ಸೃಷ್ಟಿಸಿದೆ ಇದನ್ನು ಬಲ್ಲವರು ಯಂತ್ರ ನಾಗರಿಕತೆ ಎನ್ನುತ್ತಾರೆ. ಆ ದೇಶದವರು ಪ್ರತಿಯೊಂದು ಯಂತ್ರಗಳನ್ನು ಉಪಯೋಗಿಸುವರು. ಮತ್ತು ಅನೇಕವಾದ ಯಂತ್ರಗಳನ್ನು ಕಂಡು ಹಿಡಿದಿರುವರು ಆದುದರಿಂದ ಈ ನಾಗರಿಕತೆಗೆ ಈ ಹೆಸರು.

ಮೊದಲಿನಿಂದ ಇದ್ದವರು ಈ ಯಂತ್ರಗಳ ಕಡೆಗೆ ತಮ್ಮ ‘‘ ಬುದ್ಧಿಯನ್ನು ಓಡಿಸಿರಲಿಲ್ಲ ಈಜಿಪ್ಟಿನಲ್ಲಿರುವ ಪಿರಮಿಡ್ಡುಗಳನ್ನು ನೋಡಿದರೆ ಅವರೂ ಭಾರಿ ಭಾರಿ ಯಂತ್ರಗಳನ್ನು ಉಪಯೋಗಿಸಿ ಆ ಭಾರಿ ಭಾರಿ ಕಲ್ಲುಗಳನ್ನು ಎತ್ತಿಟ್ಟು ಪಿರಮಿಡ್ಡುಗಳನ್ನು ಕಟ್ಟಿರಬೇಕು ಎನ್ನಿಸುವುದಂತೆ. ಡೆಲ್ಲಿಯಲ್ಲಿರುವ ಉಕ್ಕಿನ ಸ್ತಂಭವನ್ನು ನೋಡಿದವರು ಇದನ್ನು ಎರಕಹುಯಿದುದು ಹೇಗೆ ಎಂದು ಆಶ್ಚರ್ಯಪಡುವಹಾಗಿದೆಯಂತೆ ಅದು ಪುರಾಣಗಳಲ್ಲಿ ಬರುವ ತ್ರಿಪುರರ ಹಾರಾಡುವ ಪಟ್ಟಣಗಳು, ಕಥೆಗಳಲ್ಲಿ ಬರುವ ಕೀಲುಕುದುರೆಗಳು ಇವುಗಳೆಲ್ಲವೂ ಯಂತ್ರಗಳಿಂದಲೇ ನಡೆಯುತ್ತಿದ್ದುವು. ಎಂದು ಹೇಳುವವರೂ ಇದ್ದಾರೆ. ಆದರೂ ಈಗಿರುವಂತೆ, ಆಗ ಯಂತ್ರಗಳು ವಿಶೇಷವಾಗಿದ್ದುವೇ ಎಂಬುದು ಸಂದೇಹ. ಅಲ್ಲದೆ ಹಿಂದಿನವರು ಈ ಯಂತ್ರ ವಿಶೇಷಗಳನ್ನು ಮಾಡಿದರೂ ಈಗ ಇರುವಂತೆ ಯಾರಿಗೆ ಬೇಕಾದರೂ ಸಿಕ್ಕುವ ಹಾಗೆ ಮಾತ್ರ ಇರಲಿಲ್ಲ ಈಗ ಯಂತ್ರಗಳನ್ನು ಮಾಡುವವರು ಸಹಸ್ರಾರುಮಾಡುತ್ತಾರೆ. ಅವುಗಳನ್ನು ತೆಗೆದುಕೊಂಡ ಹೋಗಿ ಊರೂರಿನಲ್ಲಿಯೂ ಮಾರುತ್ತಾರೆ. ಆದರಿಂದ ಯಂತ್ರಗಳು ಇಷ್ಟು ಹೆಚ್ಚಾಗಿವೆ

ಹೀಗೆ ಯಂತ್ರಗಳಿಂದ ತುಂಬಿ ಹೋಗಿರುವ ಯೂರೋಪಿನಲ್ಲಿಯೂ ಪೂರ್ವಕಾಲ ದಿಂದ ಏಳರ ಪ್ರಭಾವವು ಹೆಚ್ಚಾಗಿಯೇ ಇದೆ ಪೂರ್ವಕಾಲದ ಯೂರೋಪಿನಲ್ಲಿ ಏಳು ನಗರಗಳು ಪ್ರಸಿದ್ಧವಾದುವುಗಳು ಎಂದು ಗಣನೆಯಿತ್ತು. ರೋಂ. ಆಂಟಿಯೋಕ್, ನಿನ್ನೆವಾ. ಬ್ಯಾಬಿಲೋನ್, ಅಥೆನ್ಸ್, ಟೈರ್, ಕಾರ್ಥೇಜು, ಈ ಏಳು ಪಟ್ಟಣಗಳು ಪ್ರಾಚೀನಕಾಲದಲ್ಲಿ, ಪ್ರಸಿದ್ಧವಾಗಿದ್ದುವು ಹಾಗೆಯೇ ಪ್ರಪಂಚದಲ್ಲಿ ಏಳು ಆಶ್ಚರ್ಯ ಕರವಾದ ನೋಟಗಳಿವೆ ಎಂದು ಅಲ್ಲಿನವರು ಹೇಳುತ್ತಾರೆ. ಅದರಲ್ಲಿ ರೋಡ್ಸ್ ದ್ವೀಪ ದಲ್ಲಿದ್ದ ರಾಕ್ಷಸಪ್ರತಿಮೆಯೊಂದು ಇದು ಗ್ರೀಸ್ ದೇಶದ ಪಕ್ಕದಲ್ಲಿರುವ ಏಜಿಯನ್ ಸಮುದ್ರದಲ್ಲಿರುವ ರೋಡ್ಸ್ ದ್ವೀಪದ ರೇವಿನಲ್ಲಿತ್ತು. ಆ ರೇವಿನಲ್ಲಿ ಆ ಪಕ್ಕ ಈ ಪಕ್ಕ ಗಳಿಗೆ ಒಂದೊಂದು ಕಾಲು ಹಾಕಿಕೊಂಡು ನಿಂತಿದ್ದ ಅದ್ಭುತಾಕಾರ ವಿಗ್ರಹವಿದು.

ಈಜಿಪ್ಟಿನಲ್ಲಿದ್ದ ಪಿರಮಿಡ್ಡುಗಳು ಎರಡನೆಯ ಆಶ್ಚರ್ಯ ಇವು ಶಿಖರದ ಹಾಗೆ ಕಟ್ಟಿರುವ ಅದ್ಭುತ ಕಟ್ಟಡಗಳು. ಇದನ್ನು ಕಟ್ಟುವುದಕ್ಕೆ ಎಷ್ಟೋ ವರ್ಷಗಳು ಹಿಡಿಯಿತು ಅದನ್ನು ಹೇಳುವುದಕ್ಕೂ ಸಾಧ್ಯವಿಲ್ಲ ಇದರಲ್ಲಿರುವ ಒಂದೊಂದು ಕಲ್ಲು ನೂರಾರು ಜನರೂ ಎತ್ತುವುದಕ್ಕೆ ಸಾಧ್ಯವಿಲ್ಲದಷ್ಟು ಭಾರವಂತೆ ಇವುಗಳೊಳಗೆ ಈಜಿಪ್ಟನ್ನು ಆಳುತ್ತಿದ್ದ ಅರಸುಗಳ ಗೋರಿಗಳಿವೆ ಈ ಪಿರಮಿಡ್ಡುಗಳನ್ನು ಕಟ್ಟುವು ದರಲ್ಲಿ ಬಹುಬುದ್ಧಿವಂತರು ಅವರು ಮುಂದಾಗುವುದನ್ನೆಲ್ಲಾ ಅರಿತಿದ್ದವರು, ಪ್ರಪಂಚದ ಭವಿಷ್ಯವನ್ನೆಲ್ಲಾ ಈ ಪಿರಮಿಡ್ಡುಗಳಲ್ಲಿ ತೋರಿಸಿದ್ದಾರೆ ಈ ಪಿರಮಿಡ್ಡುಗಳ ರಹಸ್ಯ ವನ್ನರಿತರೆ ಪ್ರಪಂಚದ ಭವಿಷ್ಯವನ್ನೆಲ್ಲಾ ಕನ್ನಡಿಯಲ್ಲಿ ಕಾಣುವಂತೆ ಹೇಳಬಹುದು ಎಂದು ಹೇಳುವವರು ಇದ್ದಾರೆ ಮತ್ತೊಂದು ಡೆಯಿನಾದೇವತೆಗೆ ಕಟ್ಟಿದ್ದ ಗುಡಿ ಇದು ಗ್ರೀಸಿನಲ್ಲಿತ್ತು ಮಸೊಲಸ್ ಎಂಬ ದೊರೆಯುತನಗಾಗಿ ಕಟ್ಟಿಕೊಂಡಿದ್ದ ಒಂದು ಭಾರಿಯ ಗೋರಿಯು ಮತ್ತೊಂದು ನೋಡಬೇಕಾದುದು ಅದಕ್ಕಿಂತಲೂ ದೊಡ್ಡ ದಾಗಿರುವ ಗೋರಿಯನ್ನು-ಬಹುಶಃ ಪಿರಮಿಡುಗಳನ್ನು ಬಿಟ್ಟರೆ-ಇದುವರೆಗೂ ಯಾರೂ ಕಟ್ಟಿಲ್ಲ. ಬ್ಯಾಬಿಲಾನ್ ನಗರದ ತೋಟಗಳು ಮತ್ತೊಂದು ಆಶ್ಚರ್ಯ. ಇವುಗಳಿಗೆ ತೂಗು ತೋಟಗಳು ಎಂದು ಹೆಸರು ಇವು ನೆಲದಿಂದ ಏಳೆಂಟು ಅಡಿ ಎತ್ತರವಾಗಿರುವ ಮಹಡಿಗಳ ಮೇಲೆ ಬೆಳಸಿದ್ದ ತೋಟಗಳಂತೆ. ಮತ್ತೊಂದು ಆಶ್ಚರ್ಯವೆಂದರೆ ಜೂಪಿ ಟರ್‌ನ ವಿಗ್ರಹ ಇದನ್ನು ಸಂಪೂರ್ಣವಾಗಿ ದಂತದಿಂದಲೂ ಚಿನ್ನದಿಂದಲೂ ಮಾಡಿದ್ದ ರಂತೆ. ಅಲೆಗ್ಜಾಂಡ್ರಿಯಾದ ಆಚೆಯಿರುವ ಒಂದು ದ್ವೀಪದ ಮೇಲೆ ಟಾಲೆಮಿ ಎಂಬ ಧೊರೆಯು ಒಂದು ಅದ್ಭುತವಾದ 'ಫೆರೋಸ್'' ಎಂಬ ಹೆಸರಿನ ಒಂದು ದೀಪಸ್ತಂಭವನ್ನು ಕಟ್ಟಿಸಿದನು. ಈ ಏಳು ವಿಚಿತ್ರಗಳೂ ಯೂರೋಪಿನಲ್ಲಿ ಪ್ರಾಚೀನಕಾಲದಿಂದ ಪ್ರಸಿದ್ಧ ವಾದುವು. ಅದರ ಜತೆಗೆ ಈಗ ಈಗ ನಿರ್ಮಿತವಾದ ಕೆಲವು ವಿಚಿತ್ರಗಳೂ ಸೇರಿವೆ. ಪ್ಯಾರಿಸ್ಸಿನಲ್ಲಿರುವ ಸುಮಾರು ೯೦೦ ಅಡಿ ಎತ್ತರವಿರುವ ಈಪೆಲ್‌ಗೋಪುರವೊಂದು.

ಅಮೇರಿಕಾದಲ್ಲಿ ಪೆಸಿಫಿಕ್ ಸಾಗರವನ್ನು ಅಟ್ಲಾಂಟಿಕ್ ಸಾಗರವನ್ನು ಸೇರಿಸಿರುವ ಪನಾಮಾ ಕಡಲುಗಾಲುವೆ ಒಂದು. ಇವೇಮೊದಲಾದುವುಗಳು ಈ ವಿಚಿತ್ರಗಳ ಗುಂಪಿಗೆ ಸೇರಿವೆ.

ಇಂಡಿಯಾಕ್ಕೆ ಬಂದರೆ, ಈ ಏಳರ ಪ್ರಭಾವವು ಚನ್ನಾಗಿ ಕಾಣುತ್ತದೆ. ವಾರ ಗಳು ಏಳು. ಸೂರ್ಯನಿಗೆ ಕಟ್ಟಿರುವ ಕುದುರೆಗಳು ಏಳು ಸೂರ್ಯನ ಕಿರಣಗಳಲ್ಲಿ ರುವ ಬಣ್ಣಗಳು ಏಳು. ಗ್ರಹಗಳು, ರಾಹುಕೇತುಗಳನ್ನು ಬಿಟ್ಟು ಏಳು ಸಂಗೀತದಲ್ಲಿ ರುವ ಸ್ವರಗಳು ಏಳು. ದೇವತೆಗಳಲ್ಲಿ ಮಾತೃಕೆಯರೆಂಬುವರು ಏಳುಜನರು. ಸಾಗರ ಗಳು ಏಳು ಕುಲಪರ್ವತಗಳು ಏಳು, ಹಾಗೆಯೇ ಪ್ರಾಚೀನ ಭರತಖಂಡದಲ್ಲಿ ಪ್ರಸಿದ್ಧ ವಾದ ಮೋಕ್ಷದಾಯಕವಾದ ಪುರಿಗಳೂ ಏಳು ಅಗ್ನಿಯ ಜ್ವಾಲೆಗಳು ಏಳು. ರಾಮನು ಸುಗ್ರೀವನಿಗೆ ತನ್ನ ಪ್ರಭಾವವನ್ನು ತೋರಿಸಲು ಕತ್ತರಿಸಿದ ತಾಳವೃಕ್ಷಗಳು ಏಳು. ಹೀಗೆ ಏಳು ಎಂಬ ಸಂಖ್ಯೆಯು ಏನೋ ಕಾರಣದಿಂದ ಮೊದಲಿನಿಂದಲೂ ಜನಗಳ ಮನಸ್ಸನ್ನು ಹಿಡಿದಿದೆ

ಈ ಏಳನ್ನು ಅವಲಕ್ಷಣವೆಂದು ಭಾವಿಸುವರು ನಮ್ಮಲ್ಲಿ ಅನೇಕರುಂಟು. ವ್ಯಾಪಾರ ಗಾರರು ಎಣಿಸುವಾಗ ಆರು ಮತ್ತೊಂದು ಎಂದು ಹೇಳುವರೇ ಹೊರತು ಏಳು ಎನ್ನು ವುದಿಲ್ಲ. ಹಾಗೇ ಏಳು ಹನ್ನೊಂದು ಹಿಡಿದು ಹೋದರೆ ದಿವಾಳಿಯಾಗಿ ಹೋದ ಎಂದರ್ಥ. ಹಾಗೇ ಶನಿಯು ಕಾಡುವುದಕ್ಕೆ ಆರಂಭಿಸಿದರೆ ಏಳರಾಟದ ಶನಿ ಎಂದು ಹೇಳುವುದು ವಾಡಿಕೆ.



# ಜಾನ್ ಮಿಲ್ಟನ್

ಇಂಗ್ಲೆಂಡಿನ ಬಹುಪ್ರಸಿದ್ಧನಾದ ಕವಿಷೇಕ್ಸ್‌ಪಿಯರ್. ಆತನು ಪ್ರಪಂಚದಲ್ಲೆಲ್ಲಾ ಹೆಸರುವಾಸಿಯಾದವನು. ಆತನಷ್ಟು ಭಾರಿಯ ಕವಿಯಲ್ಲದಿದ್ದರೂ ಆತನಿಗೆ ಎಡಗೈ ಬಲಗೈ ಎನ್ನುವಂತಹ ಇನ್ನೊಬ್ಬ ಕವಿಯು ಇಂಗ್ಲೆಂಡಿನಲ್ಲಿ ಬಾಳಿದನು ಆತನ ಹೆಸರು ಜಾನ್‌ಮಿಲ್ಟನ್. ಈತನು ಪ್ಯಾರಡೈಸ್ ಲಾಸ್ಟ್, ಪ್ಯಾರಡೈಸ್‌ರಿಗೇಯ್ನ್‌ಡ್, ಮೊದಲಾದ ಮಹಾಕಾವ್ಯಗಳನ್ನೂ ಅನೇಕಾನೇಕ ಸಣ್ಣಪುಟ್ಟ ಕಾವ್ಯಗಳನ್ನು ಬರೆದಿದ್ದಾನೆ

ಈತನು ಲಂಡನ್ನಿನಲ್ಲಿ ೧೬೦೮ರ ಕೊನೆಯಲ್ಲಿ (ಡಿಸಂಬರ , ೯) ಹುಟ್ಟಿದನು. ಈತನ ತಂದೆಯು ಲೇವಾದೇವಿ, ಪತ್ರಗಳನ್ನು ಬರೆದುಕೊಡುವುದು, ಮೊದಲಾದ ಕಾರ್ಯಗಳಿಂದ ಜೀವಿಸುತ್ತಿದ್ದರೂ, ಬಹಳ ಕಟ್ಟುನಿಟ್ಟಿನವನು. ನಿರ್ದಾಕ್ಷಿಣ್ಯವಾಗಿ ತನ್ನ ಮನಸ್ಸಿಗೆ ಸರಿಯೆಂದು ತೋರಿದಂತೆ. ಆಗಿನ ಕಾಲದ ಇಂಗ್ಲೆಂಡಿನಲ್ಲಿ ನಡೆಯುವವನು. ಆಗಿನ ಕಾಲದ ಇಂಗ್ಲೆಂಡಿನಲ್ಲಿ ಪ್ಯೂರಿಟನ್ಸ್ ಎಂಬ ಒಂದುಸಂಗಡದ ಕ್ರಿಶ್ಚಿಯನ್ನರಿದ್ದರು ಅವರು ಬೈಬಲ್ಲನ್ನು ಬಹಳ ಶ್ರದ್ಧೆಯಿಂದ ಅನುಸರಿಸುವವರು ಆ ಪಂಗಡಕ್ಕೆ ಸೇರಿದವನು ಈ ಮಿಲ್ಟನ್.

ಕವಿಮಿಲ್ಟನನು ಚೆನ್ನಾಗಿ ಓದಿದವನು ಆಗಿನ ಕಾಲದ ಪ್ರಸಿದ್ಧ ವಿದ್ವಾಂಸರಂತೆ ಆತನೂ ಲ್ಯಾಟಿನ್. ಗ್ರೀಕ , ಹೀಬ್ರ್ಯೂ ಭಾಷೆಗಳನ್ನು ಚೆನ್ನಾಗಿ ಓದಿದ್ದನು. ಅವುಗಳಲ್ಲಿ ಗದ್ಯಪದ್ಯಗಳೆರಡರಲ್ಲಿಯೂ ಬರೆಯುವಷ್ಟು ಬುದ್ಧಿವಂತನಾಗಿದ್ದನಂತೆ

ಆತನು ಹುಡುಗನಾಗಿದ್ದಾಗಲೂ ಆಟಪಾಟಗಳಲ್ಲಿ ಕಾಲಕಳೆಯುತ್ತಿರಲಿಲ್ಲ. ಮಧ್ಯರಾತ್ರಿಯವರೆಗೂ ಪುಸ್ತಕಗಳನ್ನು ಓದುವುದರಲ್ಲೇ ಕಾಲಕಳೆಯುತ್ತಿದ್ದನು ಆತನಿಗೆ ಕಣ್ಣುಗಳಲ್ಲಿ ಮೊದಲೇ ದೌರ್ಬಲ್ಯ ಆದರಿಂದ ಆಗಾಗ ತಲೆನೋವುಬರುವುದು. ಅದನ್ನೂ ಲೆಕ್ಕಿಸದೆ ಆತನು ಪುಸ್ತಕಗಳನ್ನು ಓದುತ್ತ ಕುಳಿತುಕೊಳ್ಳುವನು ಹೀಗೆ ಕಣ್ಣುಗಳ ಬೇನೆಯನ್ನು ಗಮನಿಸದೆ ಕೆಲಸಮಾಡಿದುದರ ಫಲವಾಗಿ ಆತನಿಗೆ ಮಧ್ಯವಯಸ್ಸಿನಲ್ಲಿ ಕಣ್ಣುಗಳು ಹೋಗಿ ಕುರುಡುತನವು ಬಂದಿತು

ಆತನು ಕೆಂಬ್ರಿಡ್ಜ್‌ವಿಶ್ವವಿದ್ಯಾನಿಲಯ (ಯೂನಿವರ್ಸಿಟಿ)ಯಲ್ಲಿ ಓದಿದನು ಆತನು ಬಹಳ ಲಕ್ಷಣವಾಗಿದ್ದವನು ಸಾಲದೆ, ಆತನಿಗೆ ತಲೆಯ ತುಂಬಾ ಉದ್ದವಾದ ಕೂದಲು

ಅದನ್ನು ನಮ್ಮ ಹೆಂಗಸರಂತೆ, ನಡುವೆ ಬೈತಲೆ ತೆಗೆದು ಬಾಚಿಕೊಳ್ಳುತ್ತಿದ್ದನು ಅದರಿಂದ ಆತನನ್ನು ಕಾಲೇಜಿನಲ್ಲಿ ಲೇಡಿ ಆಫ್ ದಿ ಕಾಲೇಜ್ ಎಂದು ಕರೆಯುತ್ತಿದ್ದರಂತೆ. ಆತನಿಗೆ ಇತರ ಅಪಹಾಸ್ಯಾದಿಗಳಿಂದ ಕೊಂಚವೂ ವ್ಯಥೆಯಾಗುತ್ತಿರಲಿಲ್ಲವಂತೆ. ಆತನು ಯಾವ ಕೆಲಸವನ್ನೂ ಅವಸರವಿಲ್ಲದೆ, ಸಮಾಧಾನವಾಗಿ ಸರಿಯಾಗಿ ಮಾಡುತ್ತಿದ್ದನಂತೆ ಕಾಲೇಜಿನಲ್ಲಿ ಏಳುವರ್ಷಗಳು ವ್ಯಾಸಂಗಮಾಡಿ ಎಂ ಎ ಡಿಗ್ರಿಯನ್ನು ಪಡೆದು ಬಂದನು

ಆತನು ಕಾಲೇಜಿನಿಂದ ಹಿಂತಿರುಗಿ ಬರುವ ವೇಳೆಗೆ ಮನೆಯಲ್ಲಿ ಆತನ ತಾಯಿಗೆ ಬಹಳ ಕಾಯಿಲೆಯಾಗಿದ್ದಿತು ಅದರಿಂದ ಆತನು ಮನೆಯಲ್ಲಿಯೇ ಕೆಲವುಕಾಲ ಮಾತೃಸೇವೆಯಲ್ಲಿದ್ದನು. ಮಾತೃವಿಯೋಗವಾದನಂತರ ದೇಶಾಟನಕ್ಕೆ ಹೊರಟು, ತಾನು ಗ್ರಂಥಗಳಲ್ಲಿ ಓದಿದ್ದ ಇಟಲಿ, ಫ್ರಾನ್ಸ್ ಮೊದಲಾದ ದೇಶಗಳ ಪ್ರಸಿದ್ಧಪಟ್ಟಣಗಳನ್ನು ತಿರುಗಿಕೊಂಡು ಬರಲು ಹೊರಟನು ಹೀಗೆ ಹದಿನೈದು ತಿಂಗಳು ದೇಶಗಳನ್ನು ಸುತ್ತಿಕೊಂಡು ಬಂದುದು ಮುಂದಕ್ಕೆ ಮಹಾಕಾವ್ಯಗಳನ್ನು ಬರೆಯುವುದಕ್ಕೆ ಎಷ್ಟೋ ಅನುಕೂಲವಾಯಿತು.

ಆತನು ಲಂಡನ್ನಿಗೆ ಹಿಂತಿರುಗಿ ಬರುವ ವೇಳೆಗೆ ಅಲ್ಲಿ ದೊರೆಗೂ ಪ್ರಜೆಗಳಿಗೂ ಯುದ್ಧವು ಆರಂಭವಾಗಿತ್ತು. ಮಿಲ್ಟನನು ಪ್ರಜಾಪಕ್ಷಪಾತಿಯಾಗಿದ್ದರೂ ಯುದ್ಧದಲ್ಲಿ ಭಾಗವಹಿಸುವ ಆಸಕ್ತಿಯಿಲ್ಲದವನು ಅದರಿಂದ, ತನ್ನ ಶಾಂತವೃತ್ತಿಗೆ ಅನುಗುಣವಾಗಿ ಒಂದು ಶಾಲೆಯನ್ನು ಆರಂಭಿಸಿ, ಕೆಲವು ಕಾಲ ನಡೆಯಿಸಿದನು ಆದರೆ ದೇಶವೆಲ್ಲ ಎದ್ದು ಯುದ್ಧದ ಹುಚ್ಚು ಹಿಡಿದು ಕುಣಿಯುತ್ತಿರವಾಗ, ಈತನ ವಿದ್ಯಾಶಾಲೆಯು ಮುಂದುವರಿಯುವುದುಂಟೆ? ಅದು ಕೆಲವು ವರ್ಷಗಳು ನಡೆದು ನಿಂತುಹೋಯಿತು

ಈತನು ದೇಶದ ಯುದ್ಧದಲ್ಲಿ ಭಾಗವಹಿಸದಿದ್ದರೂ ಆ ಯುದ್ಧವು ಈತನ ಮೇಲೆ ಬಿದ್ದು ಗೋಳಾಡಿಸಿತು ಈತನು ಮದುವೆಮಾಡಿಕೊಂಡ ಹೆಂಡತಿಯು ದೊರೆಯ ಮೇಲೆ ಅಭಿಮಾನವಿಟ್ಟುಕೊಂಡಿದ್ದವರ ಗುಂಪಿನವಳು ಮತ್ತು ಅಂದಚೆಂದಗಳ ವೈಯ್ಯಾರದಲ್ಲಿ ಕಾಲಕಳೆಯಬೇಕೆಂದು ಹಂಬಲಿಸುವ ಜಾತಿಗೆ ಸೇರಿದವಳು ಇವಳಿಗೂ ಮಿಲ್ಟನ್ನಿಗೂ ಸರಿಬೀಳಲಿಲ್ಲ. ಅದರಿಂದ ಮದುವೆಯಾದ ಕೊಂಚಕಾಲದಲ್ಲಿಯೇ ಅವಳು ಗಂಡನನ್ನು ಬಿಟ್ಟು ತಂದೆಯ ಮನೆಗೆ ಹೊರಟುಹೋದಳು ಆದರೆ ಮತ್ತೆ ಎರಡು ವರ್ಷಗಳಲ್ಲಿ ಕಾಲಚಕ್ರವು ತಿರುಗಿ ಆ ಹೆಂಡಿತಿಯ ಬುದ್ಧಿಯು ಬದಲಾಯಿಸಿತು. ದೊರೆಯ ಕಡೆಯವರಿಗೆ ಸೋಲಿನ ಮೇಲೆ ಸೋಲಾಗಿ ಹೊಟ್ಟೆಯತುಂಬ ಅನ್ನ, ಮೈತುಂಬ ಬಟ್ಟೆ ಸಿಕ್ಕುವುದು ಕಷ್ಟವಾಯಿತು. ಆ ದುಷ್ಕಾಲದಲ್ಲಿ ಹೆಂಡತಿಗೆ ಬುದ್ಧಿ ಬಂದು ಮತ್ತೆ ಬಂದು ಗಂಡನನ್ನು ಸೇರಿಕೊಂಡಳು

ಮುಂದೆ ಇಂಗ್ಲೆಂಡಿನಲ್ಲಿ ದೊರೆಯು ಸೋತು ಹೋದನು. ಸರಕಾರವು ಪ್ರಜೆಗಳ ಕೈಗೆ ಬಂತು. ಪ್ರಜೆಗಳ ಮುಖಂಡನಾಗಿದ್ದ ಕ್ರಾಂವೆಲ್ಲನು ಸರಕಾರವನ್ನು ನಡೆಯಿಸುವ ಅಧ್ಯಕ್ಷನಾದನು ಆಗಿನ ಕಾಲದಲ್ಲಿ ಸರಕಾರವು ಹೊರ ದೇಶಗಳೊಡನೆ ನಡೆಯಿಸುವ ವ್ಯವಹಾರವನ್ನೆಲ್ಲಾ ಲ್ಯಾಟಿನ್ ಭಾಷೆಯಲ್ಲಿಯೇ ಬರೆಯುತ್ತಿದ್ದರು ಅದರಿಂದ, ಆ ಭಾಷೆಯನ್ನು ಬಲು ಚೆನ್ನಾಗಿ ಬರೆಯುತ್ತಿದ್ದ ಮಿಲ್ಟನ್ನಿಗೆ ಅವಕಾಶವು ಸಿಕ್ಕಿ ಆತನು ಸರಕಾರದಲ್ಲಿ ಒಂದು ಅಧಿಕಾರವನ್ನು ಪಡೆದನು. ಅದಕ್ಕಾಗಿ ಆತನಿಗೆ ಭಾರಿಯ ವೇತನವೂ ದೊರೆಯುತ್ತಿತ್ತು,

ಆ ಅಧಿಕಾರದಲ್ಲಿ ಆತನು ಚೆನ್ನಾಗಿ ಶೋಭಿಸಿದನು ಕ್ರಾಂವೆಲ್ಲನು ಮಿಲ್ಟನ್ನಿನ ಸ್ನೇಹಿತನು. ಜೊತೆಗೆ ಮಿಲ್ಟನ್ನನು ಯಾವುದೊಂದು ದುರಾಚಾರವೂ ಇಲ್ಲದ ಸಜ್ಜನ. ಮತ್ತು ವಿದ್ವಾಂಸ, ಅದರಿಂದ ಎಲ್ಲರೂ ಅವನಿಗೆ ಬೇಕಾದವರಾದರು. ಇಷ್ಟಾದರೂ, ಆತನು ಅಧಿಕಾರ, ಐಶ್ವರ್ಯಗಳಿಂದ ಕೂಡಿ ಹಲವರಿಗೆ ಬೇಕಾದವನಾಗಿದ್ದರೂ. ಅದರಿಂದ ಲೋಕಕ್ಕೆ ಆದ ಉಪಕಾರವು ಮಾತ್ರ ಬಹಳ ಅಲ್ಪವೆನ್ನಬಹುದು ಬೆಳಗಿಂದ ಸಂಜೆಯವರೆಗೆ ಆತನ ಕಾಲವೆಲ್ಲ ಸರಕಾರದ ಕಾಗದ ಪತ್ರಗಳನ್ನು ಬರೆಯುವುದರಲ್ಲಿಯೇ ಕಳೆದುಹೋಗುತ್ತಿತ್ತು

ಮಿಲ್ಟನ್ನಿನ ಅಧಿಕಾರದ ಅವಧಿಯು ಬಹಳ ಕಾಲವಿರಲಿಲ್ಲ. ಕೆಲವು ಕಾಲವಾದ ಮೇಲೆ ಕ್ರಾಂವೆಲ್ಲನು ಮೃತನಾದನು ಆತನ ಮಗನು ಆತನಷ್ಟು ಶಕ್ತನಾಗಿರಲಿಲ್ಲವಾಗಿ ಸರಕಾರವು ಮತ್ತೆ ಹಿಂದಿನ ದೊರೆಯ ಮಗನನ್ನು ಬರಮಾಡಿಕೊಂಡಿತು. ಆತನು ಬಂದ ಮೇಲೆ ಪ್ರಜಾ ಪಕ್ಷಪಾತಿಗಳ ಕೆಲಸವು ಹೋಗುವುದಿರಲಿ : ಅವರು ಉಳಿಯುವುದೇ ಕಷ್ಟವಾಯಿತು ಈ ಹುಯಿಲಿನಲ್ಲಿಯೂ ಕೂಡ, ಮಿಲ್ಟನ್ನರು ಉಳಿದುದು ಆಶ್ಚರ್ಯ. ಈತನು ದೊರೆಗಳ ಹುಚ್ಚು ಹುಚ್ಚು ಆಡಳಿತಗಳ ವಿರೋಧವಾಗಿ ಬೇಕಾದ ಹಾಗೆ ಬರೆದಿದ್ದನು. ಅದರಿಂದ ಈತನಿಗೆ ಪ್ರಾಣಾಂತಶಿಕ್ಷೆಯಾಗುವುದೆಂದು ಹಲವರು ಹೆದರಿದ್ದರು. ಆದರೆ ಈತನು ವಿದ್ವಾಂಸನೆಂಬುದರಿಂದ ರಾಜಕ್ರೋಧವು ಈತನನ್ನು ನುಂಗದೆ ಉಳಿಸಿತು.

ಆದರೂ ವಿಧಿಯು ಮಾತ್ರ ತನ್ನ ಕ್ರೋಧವನ್ನು ಈತನ ಮೇಲೆ ಚಲಾಯಿಸಿತು ಈತನಿಗೆ ಬಾಲ್ಯದಿಂದಲೂ ಕಣ್ಣು ದುರ್ಬಲ ಆ ದೌರ್ಬಲ್ಯವು ಬಲಿಯುತ್ತಾ ಬಂದು ಕೊನೆಗೆ ಅದೇ ಮಾರಿಯಾಗಿ ಆತನ ನಲವತ್ತಾರನೆಯ ವರ್ಷದಲ್ಲಿ ಆತನ ಕಣ್ಣುಗಳನ್ನು ಬಲಿಗೊಂಡಿತು ಮಿಲ್ಟನ್ನಿಗೆ ಈ ಲೋಕದ ಚರ್ಮ ಚಕ್ಷುಗಳು ಹೋದುವು ಆದರೆ ಈ ಕುರುಡುತನವು ಬಂದಮೇಲೆಯೇ ಮಿಲ್ಟನ್ನನು ಮಹಾಕವಿಯೆಂಬುದು ಸಿದ್ಧವಾದುದು ಕಣ್ಣು ಕಿತ್ತುಕೊಂಡು ಕ್ರೂರಿಯೆನ್ನಿಸಿಕೊಂಡ ದೈವವು, ಇಂಗ್ಲೀಷ್ ಭಾಷೆ

ಯಿರುವವರೆಗೂ ಇರುವ, ಅಮೋಘವಾದ ಮಹಾಕಾವ್ಯಗಳನ್ನು ಬರೆಯಲೆಂದೋ ಏನೋ ಆತನ ಕಣ್ಣು ಕಿತ್ತುಕೊಂಡಿತು ಆ ಕುರುಡು ದಶೆಯಲ್ಲಿ ತನ್ನ ಹೆಣ್ಣುಮಕ್ಕಳಿಗೆ ಹೇಳಿ ಆತನು ಎರಡು ಮೂರು ಮಹಾಕಾವ್ಯಗಳನ್ನು ಬರೆಯಿಸಿದನು.

ಒಂದೆಡೆ ಇದೇ ಕವಿಯೇ ತನ್ನ ಕುರುಡುತನವನ್ನು ಕುರಿತು ಒಂದು ಪದ್ಯವನ್ನು ಬರೆದಿದ್ದಾನೆ ಅದರಲ್ಲಿ "ನಾನು ಕುರುಡ ಕಣ್ಣಿಲ್ಲದವನು ನನ್ನಿಂದ ಆ ದೇವನಿಗೆ ಆಗ ಬೇಕಾದ ಸೇವೆಯೇನು?" ಎಂದು ಒಂದು ಪ್ರಶ್ನೆ ಜೊತೆಯಲ್ಲಿಯೇ "ಆ ಪ್ರಭುವಿನ ಸೇವೆಗೆಂದು ಮೀಸಲಾಗಿರುವವರು ಅನೇಕಕೋಟಿ ಮಂದಿಯಿದ್ದಾರೆ. ನಿನ್ನಿಂದ ಆತನಿಗೆ ಆಗಬೇಕಾದುದೇನೂ ಇಲ್ಲ. ನಿನ್ನ ಪಾಡಿಗೆ ನೀನಿರು ಅದೇ ಸೇವೆ"ಯೆಂದು ಮಗ್ಗುಲಲ್ಲಿಯೇ ಉತ್ತರ. ಹೀಗೆ ಇದ್ದು ಆತನ ಮನಸ್ಸಿನ ಸ್ಥಿತಿಯನ್ನು ಅದು ಚೆನ್ನಾಗಿ ಚಿತ್ರಿಸುತ್ತಿದೆ.

ಆತನು ಕಣ್ಣು ಕಳೆದುಕೊಂಡು ಕುರುಡನಾದರೂ ಆತನ ಕಾವ್ಯಗಳು ಸಾಹಿತ್ಯ ಪ್ರಪಂಚದ ಸೌಭಾಗ್ಯವಾಗಿ ಬೆಳಗಿದುವು ತಿರಿಯದೆ ತಿನ್ನುವಷ್ಟು ಇದ್ದರೂ ಶ್ರೀಮಂತನೆನ್ನಿಸಿಕೊಳ್ಳುವಷ್ಟು ಇಲ್ಲದೆ, ಸಣ್ಣದೊಂದು ಮನೆಯಲ್ಲಿ ಕುಳಿತು ಪ್ಯಾರಡೈಸ್‌ಲಾಸ್ಟ್ ಪ್ಯಾರಡೈಸ್ ರಿಗೇಯ್ನ್‌ಡ್, ಸ್ಯಾಂಸನ್ ಅಗೋನಿಸ್ಟಿಸ್ ಎಂಬ ಅದ್ಭುತ ಕಾವ್ಯಗಳನ್ನು ಹೇಳಿಬರೆಯಿಸಿದನು.

ಆಗಿನ ಕಾಲದಲ್ಲಿ ಆತನ ಕಾವ್ಯಕ್ಕೆ ತಕ್ಕ ಬೆಲೆಯನ್ನು ಕೊಡುವವರು ಯಾರೂ ಇರಲಿಲ್ಲ ಯಾವನೋ ಒಬ್ಬನು ಅದಕ್ಕೆ ೧೦ ಪೌಂಡು ಕೊಟ್ಟು ಕೊಂಡುಕೊಂಡನಂತೆ, ಅದೂ ೧೩೦೦ ಪ್ರತಿಗಳನ್ನುಮಾರಿ ಚಿಲ್ಲರೆ ಚಿಲ್ಲರೆಯಾಗಿ ಆ ಹಣವನ್ನು ಕೊಟ್ಟು ತೀರಿಸಿದನಂತೆ! ಆತನಿಗೆ ಪುಸ್ತಕಗಳಿಂದ ಹಣವು ಬರದೆ ಇದ್ದರೂ ಕೀರ್ತಿಯು ಬಂದಿತು .

ಪ್ಯಾರಡೈಸ್ ಲಾಸ್ಟ್ ಎಂಬುದು ಬೈಬಲ್ಲಿನಲ್ಲಿ ಹೇಳಿರುವ ಕಥೆ ಆಡಂ ಮತ್ತು ಈವ್ ಎಂಬವರು ಆದಿ ಮನುಷ್ಯದಂಪತಿಗಳು. ಅವರು ಏಡನ್ನಿನ ನಂದನವನದಲ್ಲಿ ಸುಖವಾಗಿದ್ದರು ಅವರು ಪಾಪಮಾಡಿ ಅಲ್ಲಿನ ಸುಖವನ್ನು ನೀಗಿಕೊಂಡರು ಎಂಬ ಕಥೆಯು ಅಲ್ಲಿ ಸುಂದರವಾಗಿ ಚಿತ್ರಿತವಾಗಿದೆ. ಪ್ಯಾರಡೈಸ್ ರಿಗೇಯ್ನ್‌ಡ್ "ಎಂಬುದು ಕ್ರಿಸ್ತನ ಕಥೆ" ಸ್ಯಾಮ್ಸನ್ ಅಗೋನಿಸ್ಟ್ಸ್ ಎಂಬುದು ಸ್ಯಾಂಸನ್ ಎಂಬ ವೀರನ ಕಥೆ ಅವನು ಹೆಂಡತಿಯ ಮೋಸದಿಂದ ತನ್ನ ಶಕ್ತಿಯನ್ನೂ ಕಣ್ಣನ್ನೂ ಕಳೆದುಕೊಂಡು ಶತ್ರುವಶವಾದುದು, ಮತ್ತೆ ಶತ್ರುಗಳೆಲ್ಲರನ್ನೂ ಕೊಂದು ತಾನೂ ಸತ್ತುದು ಇವುಗಳನ್ನು ವರ್ಣಿಸಿದೆ

ಆತನಿಗೆ ಮೊದಲನೆಯ ಹೆಂಡಿತಿಯಲ್ಲಿ ಮೂವರು ಹೆಣ್ಣುಮಕ್ಕಳಾದರು ಅವರಿಗೆ ದಿಕ್ಕಾಗಿರಲಿ ಎಂದು ಎರಡನೆಯ ಮದುವೆಯನ್ನು ಮಾಡಿಕೊಂಡನು ಅವಳೂ ಉಳಿಯಲಿಲ್ಲ ಮತ್ತೆ ಆ ಹೆಣ್ಣುಮಕ್ಕಳು ಗಂಡನ ಮನೆಗೆ ಹೊರಟು ಹೋದ ಮೇಲೆ, ಮೂರನೆಯ ಸಲ ಮದುವೆಮಾಡಿಕೊಂಡನು ಮೂರನೆಯ ಹೆಂಡಿತಿಯು ಆತನಿಗೆ ಬಹಳ ಅನುಕೂಲೆಯಾಗಿದ್ದಳು ಆತನು ಅವಳೊಡನೆ ಹತ್ತು ಹನ್ನೊಂದು ವರ್ಷಗಳು ಸುಖವಾಗಿದ್ದು ತನ್ನ ೬೬ನೆಯ ವಯಸ್ಸಿನಲ್ಲಿ ಪರಲೋಕವಾಸಿಯಾದನು

[ಲೋಕದಲ್ಲಿ ಕುರುಡುಕವಿಗಳು ಅನೇಕರು ವಾಗ್ದೇವಿಯ ಭಂಡಾರವನ್ನು ಸೂರೆಹೊಡೆದಿದ್ದಾರೆ ಸುಮಾರು ೩೦೦೦ ವರ್ಷಗಳ ಕೆಳಗೆ ಹೋಮರ್ ಎಂಬುವನೊಬ್ಬ ಗ್ರೀಕ ಕವಿಯಿದ್ದನು ಆತನು ಕುರುಡ ಆದರೂ ಈಲಿಯಡ್ ಒಡೆಸ್ಸಿ ಎಂಬ ಅದ್ಭುತಕಾವ್ಯಗಳನ್ನು ಹೇಳಿ ಬರೆಯಿಸಿದನು ಹಾಗೆಯೇ ನಮ್ಮ ಭರತಖಂಡದಲ್ಲಿಯೂ ಅಕ್ಬರನ ಕಾಲದಲ್ಲಿ ಸೂರದಾಸ ಎಂಬೊಬ್ಬ ಮಹಾಕವಿಯಿದ್ದನು. ಹಿಂದೀ ಭಾಷೆಯನ್ನು ಬಲ್ಲವರಿಗೆ ಸೂರದಾಸನ ಕವಿತ್ವವೆಂದರೆ ''ಬೆಲ್ಲವನು ಮೆದ್ದಂತೆ''



# ಪ್ರಪಂಚದ ಶಕಸಂವತ್ಸರಗಳು

(ಸುರೇಶ್ವರಪ್ರಸಾದ ಮಿಶ್ರರ ಲೇಖನದ ಆಧಾರದಿಂದ)

ಪ್ರಾಚೀನಕಾಲದಲ್ಲಿ ವರ್ಷಗಳನ್ನು ಋತುಗಳ ಆಧಾರದಿಂದಲೇ ಎಣಿಸುತ್ತಿದ್ದರು. ಒಂದು ವರ್ಷ ಋತುವಿನ ಪ್ರಾರಂಭದಿಂದ ಮತ್ತೆ ವರ್ಷ ಋತುವು ಪ್ರಾರಂಭವಾಗುವವರೆವಿಗೂ ಒಂದು ವರ್ಷವೆಂದು ಭಾವಿಸಲ್ಪಡುತ್ತಿತ್ತಲ್ಲದೆ ನಾವು ಎಣಿಸುವ ಈಗಿನ ಎರಡು ತಿಂಗಳ ಋತುಗಳಂತಲ್ಲ. ಹೀಗೆ 'ಋತುಚಕ್ರಪರಿವರ್ತನ'ದಿಂದ ವರ್ಷವನ್ನು ಎಣಿಸುತ್ತಿದ್ದರು

ಇತಿಹಾಸ ನಿರ್ಮಾಣಕರ್ತರಾದ ಮನುಷ್ಯರು ತಮ್ಮ ಗಣಿತದಲ್ಲಿ ತಪ್ಪಬಹುದು. ಸೂರ್ಯಗತಿಯಲ್ಲಿ ತಪ್ಪು ಬರುವುದು ಎಂದೆಂದಿಗೂ ಸಂಭವವಲ್ಲ. ಇದೊಂದು ಮಾತ್ರ ಕ್ರಮಿಕ ಪದ್ಧತಿಯನ್ನು ಸರಿಸರಿಯಾಗಿ ಪಾಲಿಸುತ್ತಲೇ ಇರುತ್ತದೆ ವೈದಿಕ ಸಾಹಿತ್ಯದಲ್ಲಿ ಸೂರ್ಯನನ್ನು 'ಸವಿತಾದೇವ'ನೆಂದೂ ಋತುಗಳ ಉತ್ಪಾದಕನಾದುದರಿಂದ ಪಿತನೆಂದೂ ಕರೆದಿದೆ. ಪ್ರತಿಯೊಂದು ಋತುಚಕ್ರವನ್ನೂ 'ವತ'ವೆನ್ನುತ್ತಾರೆ ಇದರ ಉತ್ಪಾದನಾದುದರಿಂದ ಸೂರ್ಯನನ್ನು ಪಿತಾ ಎಂದೆನ್ನುತ್ತಾರೆ. ಈ 'ವತ್ಸ'ಶಬ್ದದಿಂದಲೇ ವತ್ಸ ಸಂವತ್ಸರವೆಂಬ ಹೆಸರುಗಳುಂಟಾದವು ಇವುಗಳಲ್ಲಿ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ಉದ್ವತ್ಸರಗಳೆಂಬ ಐದು ಋತುಚಕ್ರಗಳಾಗುತ್ತವೆ ಇವುಗಳನ್ನು ಬಹು ಸೂಕ್ಷ್ಮವಾಗಿ ಅನುಸಂಧಾನಮಾಡಿಯೇ ಪಂಚಾಂಗವು ನಿರ್ಮಾಣವಾಯಿತು. ಅತೀತಕಾಲದ ಈ ಗಣನೆಯಿಂದಲೇ ತಮ್ಮ ಯುಗಯುಗಾಂತರಗಳ ಭಾಗಗಳನ್ನು ಎಣಿಸುತ್ತ ಬಂದಿದ್ದಾರೆ ಮತ್ತು ಪ್ರಪಂಚದಲ್ಲಿ ನಾನಾ ವತ್ಸರಗಳಿವೆ. ಅವುಗಳನ್ನೆಲ್ಲಾ ನಾವು ಈ ಲೇಖನದಲ್ಲಿ ಕಾಲಕ್ರಮದಂತೆ ವಿಭಾಗಿಸಿ ಪರಿಚಯಮಾಡಿಕೊಡುತ್ತೇವೆ ಅವು ಕ್ರಮವಾಗಿ ಕಾಲಗಣನೆಯಂತೆ ಕೆಳಗೆ ಬರೆಯಲ್ಪಡುತ್ತವೆ ಪ್ರಪಂಚದ ವತ್ಸರಗಣನೆಯಲ್ಲೆಲ್ಲಾ ವೈದಿಕಸಂವತ್ಸರವೇ ಹಳೆಯದು. ಓದುಗರ ಲಕ್ಷ್ಯವು ಇತ್ತ ಕಡೆಗಿರಬೇಕು.

ವೈದಿಕಸಂವತ್ಸರ :—ಕೆಲವರು ಇದನ್ನು ಆರ್ಯಸಂವತ್ಸರ, ಸೃಷ್ಟಿಸಂವತ್ಸರಗಳೆಂದೂ ಕರೆಯುವುದುಂಟು. ಇದು ಸೃಷ್ಟಿಕಾಲದಿಂದಲೂ ಬಳಕೆಯಲ್ಲಿದೆ. ಆರ್ಯರ ನಂಬಿಕೆಯಂತೆ ಈಗ ಶ್ವೇತಾಶ್ವತರ ಕಲ್ಪದ ಆರು ಮನ್ವಂತರಗಳು ಕಳೆದಿವೆ ಇದು ಬ್ರಹ್ಮನಿಗೆ ಹಗಲಿನ ಎರಡನೆಯ ಯಾಮ. ಏಳನೆಯ ಮನ್ವಂತರದ ೨೮ನೆಯ ಚತುರ್ಯುಗಗಳಲ್ಲಿ ಕಲಿಯುಗದ ೫೦೩೬ ವರ್ಷಗಳು ಈಗ ಕಳೆದಿವೆ. ನಾಲ್ಕು ಯುಗಗಳಿಗೊಂದು ಚತುರ್ಯುಗದಂತೆ ೭೧ ಚತುರ್ಯುಗಗಳು ಕಳೆದರೆ ಒಂದು ಮನ್ವಂತರ ಹೀಗೆ ಕಲ್ಪಾದಿಯಿಂದಲೂ ಕಳೆದ ಮನ್ವಂತರಗಳ ವರ್ಷಗಳನ್ನೆಲ್ಲಾ ಎಣಿಸಿ ನೋಡಿದರೆ ವೈದಿಕ ಸಂವತ್ಸರವು ೧೯೭೨೯೬೪೯೭೩೭(?) ವರ್ಷಗಳಾಗುತ್ತವೆ. ಇದು ಹಿಂದುಗಳ

ಜ್ಯೋತಿಶ್ಶಾಸ್ತ್ರದಲ್ಲಿ ಸರ್ವಪ್ರಧಾನವಾಗಿ ಒಪ್ಪಲ್ಪಟ್ಟಿದೆ. ಇದು ಉತ್ತರ ಭಾರತದಲ್ಲಿ ಪೌರ್ಣಿಮಾಂತವಾಗಿಯೂ ದಕ್ಷಿಣದಲ್ಲಿ ಅಮಾಂತವಾಗಿಯೂ ವಿಭಾಗವಾಗಿ ಆಚರಣೆಯಲ್ಲಿರುತ್ತದೆ.

ಚೀನೀಸಂವತ್ಸರ :—ಚೀನಾದೇಶಕ್ಕೂ ಭಾರತ ವರ್ಷಕ್ಕೂ ಬಹಳ ಸಂಬಂಧವಿತ್ತು ಒಬ್ಬರೊಡನೊಬ್ಬರು ಯಾತ್ರಿಕರಾಗಿ ಬೆರೆಯುತ್ತಿದ್ದರು ಈಗ ಚೀನೀವರ್ಷವನ್ನು ಅಲ್ಲಿನವರು ೯೬೦೦೨೪೩೫ ವರ್ಷವೆಂದು ಒಪ್ಪುತ್ತಾರೆ ಇದು ಚೀನಿಗಳ ಪ್ರಥಮ ಚಕ್ರವರ್ತಿಯ ಆಳಿಕೆಯ ಕಾಲ ಚೀನಿಗಳ ಈ ವರ್ಷವನ್ನು ಪಾರ್ಶಿಗಳು ತಮ್ಮ ಗ್ರಂಥಗಳಲ್ಲಿ ಖತಮ್ ಎಂದು ಕರೆದಿದ್ದಾರೆ ಇವರ ಪಂಚಾಂಗಗಳಲ್ಲಿ ವರ್ಷಋತು ಚಾಂದ್ರಮಾನಗಳೆರಡೂ ಅಂಗೀಕರಿಸಲ್ಪಟ್ಟಿವೆ

ಗ್ರೀಕ್ ಪೃಥಿವೀಸಂವತ್ಸರ :—ಗ್ರೀಕ್‌ಜನರ ಪುರಾಣಗಳಲ್ಲಿ ಸೃಷ್ಟಿಕಾಲವನ್ನು ಕುರಿತು ಕೆಲವು ಸಂಗತಿಗಳು ಬರೆದಿರುತ್ತವೆ ಅವುಗಳಲ್ಲಿ ಬರುವ ಅಂಶಗಳನ್ನೂ ಅಂಕಿಗಳನ್ನೂ ಪರಿಶೀಲಿಸಿ ನೋಡಿದರೆ ನಮಗೆ ಅವರ ವರ್ಷಗಣನಾ ಕಾಲವು ಇಂದಿಗೆ ೭೫೩೩ ವರ್ಷಗಳಾದವೆಂದು ತಿಳಿದು ಬರುತ್ತದೆ ಗ್ರಂಥಗಳಲ್ಲಿ ಹೊರತು ಇದು ಈಗ ಬಳಕೆಯಲ್ಲಿಲ್ಲ ಇದು ಕ್ರಿ ಪೂ ೫೫೦೮ ರಲ್ಲಿ ಆರಂಭವಾಯಿತೆಂದು ತಿಳಿದುಬರುತ್ತದೆ. ಇದನ್ನು ಸ್ಥಾಪಿಸಿದವನು ಗ್ರೀಕ್‌ದೇಶದ ಆದಿರಾಜನೂ ಫರೋಹನೂ ಆದ ಮೇನಸ್ ಎಂದು ತಿಳಿದು ಬರುತ್ತದೆ. ಮಿಶ್ರದೇಶದ ಮೇನಸ್ಸನೂ, ವೈದಿಕರು ಹೇಳುವ ಬ್ರಹ್ಮನ ವಂಶದವನಾದ ಮನುವೂ ಒಬ್ಬನೇ ಎಂದು ಪಂಡಿತರು ತರ್ಕಿಸುತ್ತಿದ್ದಾರೆ ಐತಿಹಾಸಿಕ ದೃಷ್ಟಿಯಿಂದ ಈ ಮೇನಸ್ಸನು ಪ್ರಪಂಚದ ಪುರಾತನಾಚಾರ್ಯನಾಗಿರುತ್ತಾನೆ ಈತನೇ ಗ್ರೀಕ್ ಪೃಥ್ವೀಸಂವತ್ಸರದ ಸ್ಥಾಪಕನಾದುದರಿಂದ ಈ ಶಕವು ಆರಂಭವಾಗಿ ಇಂದಿಗೆ ೭೫೩೩ ವರ್ಷಗಳಾದವು ಶಕವು ಮೊದಲಾಗಿ ಇಷ್ಟು ವರ್ಷಗಳಾದರೂ ಇದನ್ನು ಆಚರಣೆಗೆ ತಂದ ಮೇನಸ್ಸನನ್ನು ಕ್ರಿ ಪೂ. ೫೦೦೪ ನೆಯ ವರ್ಷದಲ್ಲಿದ್ದನೆಂದು ಕೆಲವರು ವಾದಿಸುತ್ತಾರೆ.

ಸಪ್ತರ್ಷಿಸಂವತ್ಸರ :—ಇದು ಸಾಮಾನ್ಯವಾಗಿ ಪರ್ವತ ಪ್ರದೇಶಗಳಲ್ಲಿ ಬಳಕೆಯಲ್ಲಿದೆಯೆಂದು ತಿಳಿದುಬರುತ್ತದೆ ಇದು ೩೭೦೦ ವರ್ಷಗಳಿಗೊಂದುಸಾರಿ ಮುಗಿದು ಮತ್ತೆ ಮೊದಲಿನಿಂದ ಪ್ರಾರಂಭವಾಗುತ್ತದೆ ಇದು ಕಲಿಯುಗದ ೨೫ ನೆಯ ವರ್ಷದಿಂದ ಮೊದಲಾಯಿತೆಂದು ತಿಳಿಯುತ್ತದೆ ವೈದಿಕ ಸಂವತ್ಸರಗಳನ್ನುಳಿದರೆ ಭಾರತದಲ್ಲಿದೇ ಹಳೆಯದು. ಇಂಡಿಯದಮೇಲೆ ಅಲೆಗ್ಝಾಂಡರನು ದಂಡೆತ್ತಿ ಬಂದಿದ್ದಾಗ ಅವನ ಕಡೆಯ ಯಾತ್ರಿಕರು ಬರೆದ ಸಂಗತಿಗಳಿಂದ ಆಗ ಪಂಜಾಬಿನಲ್ಲಿ ಈ ವರ್ಷವು ಬಳಕೆಯಲ್ಲಿತ್ತೆಂದು ತಿಳಿಯಬರುತ್ತದೆ. ಅಲ್ಲಿಗೆ ಈ ವರ್ಷಗಣನೆಯಲ್ಲಿ ೬೪೫೧ ವರ್ಷಗಳು ಕಳೆದಿದ್ದವಂತೆ ಇಷ್ಟು ಹೊತ್ತಿಗೆ ಸಪ್ತರ್ಷಿವತ್ಸರಗಳ ಎರಡು ಆವರ್ತಿಗಳು

ಕಳೆದಿರಬೇಕು. ಅಲ್ಲಿಂದ ಇ|| ಶಕದವರೆಗಿನ ವರ್ಷಗಳನ್ನೂ ಇತ್ತೀಚೆಯ ವರ್ಷಗಳನ್ನೂ ಕೂಡಿಕೊಂಡರೆ ಈ ವರ್ಷಗಳು ಲೆಕ್ಕಕ್ಕೆ ಸಿಕ್ಕುತ್ತವೆ ಜ್ಯೋತಿಶ್ಶಾಸ್ತ್ರದಲ್ಲಿ ಅಶ್ವಿನಿ ನಕ್ಷತ್ರವನ್ನು ಹಿಡಿದು ಕಾಲವನ್ನು ಎಣಿಸಿ ನೋಡಿದರೆ ಈಗಿನ ಸಪ್ತರ್ಷಿ ಸಂವತ್ಸರದ ಪುನರಾವೃತ್ತಿ ಕಾಲವು ಈಗ್ಗೆ ೬೦೧೩ ವರ್ಷಗಳೆಂದು ತಿಳಿದುಬರುತ್ತದೆ ಹಿಂದಿನ ೨೭೦೦ ವರ್ಷಗಳನ್ನು ಕೂಡಿದರೆ ೮೭೧೩ ವರ್ಷಗಳಲ್ಲಿ ಸಪ್ತರ್ಷಿ ಸಂವತ್ಸರವು ಮೊದಲಾಯಿತೆಂದು ತಿಳಿದು ಬರುತ್ತದೆ. ಯುನಾನಿ ಯಾತ್ರಿಕರು ಬಂದಿದ್ದಾಗ ಇದನ್ನು ದೇವವತ್ಸರ, ವ್ಯಾಕಸಂವತ್ಸರವೆಂದು ಕರೆಯುತ್ತಿದ್ದರಂತೆ. ಇದನ್ನೇ ಅವರು ಬೇಕಸ್ ಎಂದು ಕರೆದಿದ್ದಾರೆ

ಕಲಿಸಂವತ್ಸರ :—ಕೆಲವರು ಇದನ್ನು ಯುಧಿಷ್ಠಿರ ಸಂವತ್ಸರವೆಂದೂ ಕರೆಯುತ್ತಾರೆ. ಇದು ಯುಧಿಷ್ಠಿರನು ವಾನಪ್ರಸ್ಥನಾಗುವುದಕ್ಕೆ ೩೬ ವರ್ಷಗಳ ಮೊದಲು ಆರಂಭವಾಯಿತು ಈ ವರ್ಷವು ಚೈತ್ರ ಶುದ್ಧ ಪಾಡ್ಯಮಿ ಮೇಷ ಸಂಕ್ರಮಣಾರಂಭದಲ್ಲಿ ಮೊದಲಾಯಿತೆಂದು ತಿಳಿದು ಬರುತ್ತದೆ ಇತ್ತೀಚೆಯ ಗ್ರಂಥಗಳನ್ನು ಹಿಡಿದುಕೊಂಡು ಕೆಲವರು ಇದನ್ನು ಅನುಮಾನಿಸುತ್ತಾರೆ. ಇದು ಕಲ್ಹಣನ ರಾಜತರಂಗಿಣಿ, ವರಾಹಮಿಹಿರನ ಗ್ರಂಥಗಳಲ್ಲಿ ಬೇರೆ ಬೇರೆ ರೀತಿಯಿಂದ ಬರೆದಿದೆ. ಈಗ ಈ ವರ್ಷಗಣನೆಯು ಇಲ್ಲಿಗೆ ೫೦೩೬ ವರ್ಷಗಳೆಂದು ವ್ಯವಹಾರದಲ್ಲಿರುತ್ತಿದೆ. ಇದನ್ನು ಸರ್ವರೂ ಒಪ್ಪಿಕೊಂಡು ಆಚರಿಸುತ್ತಿದ್ದರು.

ರೋಮ ಸಂವತ್ಸರ :—ಇದು ರೋಮ್ ನಗರದ ಸ್ಥಾಪನೆಯ ದಿವಸದಿಂದ ಮೊದಲಾಯಿತೆಂದು ಹೇಳುತ್ತಾರೆ. ಈ ನಗರದ ಸ್ಥಾಪನೆಯು ಕ್ರಿ. ಪೂ. ೬೩೩ ರಲ್ಲಾಯಿತೆಂದು ತಿಳಿದು ಬರುತ್ತದೆ. ಇದರ ವರ್ಷಾರಂಭವು ೨೧ನೆ ಏಪ್ರೆಲ್ ತಿಂಗಳಿನಿಂದ ಮೊದಲಾಗುತ್ತದೆ ರೋಮಿನ ಜನರು ಈ ದಿನವನ್ನು ಕಲೆಂಡ್ಸ್ ಎಂದೂ ಪಂಚಾಂಗವನ್ನು ಕ್ಯಾಲೆಂಡರ್ ಎಂದು ಕರೆಯುತ್ತಾರೆ. ಇದರ ತಿಂಗಳುಗಳಿಗೆ ೨೯-೩೦ ದಿನಗಳಂತೆ ವರ್ಷಕ್ಕೆ ೩೫೪ ದಿವಸಗಳಾಗುತ್ತವೆ ಈ ಸಂವತ್ಸರವು ಪ್ರಾರಂಭವಾಗಿ ಈಗ್ಗೆ ೨೫೬೮ ವರ್ಷಗಳಾದವು.

ಬುದ್ಧ ಸಂವತ್ಸರ:—ಬೌದ್ಧಮತವು ಹೆಚ್ಚಾಗಿ ಬಳಕೆಯಲ್ಲಿರುವ ಚೀನಾ, ಜಪಾನ್ ಸಿಯಾಂ, ಅನಾಂ, ಬರ್ಮಾ, ಲಂಕಾದಿದೇಶಗಳಲ್ಲಿ ಇದು ಬಳಕೆಯಲ್ಲಿದೆ. ಇದು ಭಗವಾನ್ ಬುದ್ಧನ ನಿರ್ವಾಣಕಾಲದಿಂದ ಮೊದಲಾಯಿತು. ಬೌದ್ಧರು ಬುದ್ಧನ ನಿರ್ವಾಣ ಕಾಲವನ್ನು ಕ್ರಿ ಪೂ. ೫೪೪ ರಲ್ಲೆಂದು ನಂಬುತ್ತಾರೆ. ಮತ್ತೆ ಕೆಲವರು ಪಂಡಿತರು ಸಮಯವನ್ನು ಕ್ರಿ. ಪೂ ೪೭೦, ೪೭೮, ೪೮೧, ೪೮೭ ಎಂದು ಹೇಳಿದ್ದಾರೆ. ಈಚೆಗೆ ದೊರೆತ ವಿಕ್ರಮಶಿಲಾ ಸೂರ್ಯಮಂದಿರದ ಶಿಲಾಲೇಖದಿಂದ (ಬೋಧಗಯಾ) ಬುದ್ಧನ ನಿರ್ವಾಣ ಕಾಲವು ಕ್ರಿ ಪೂ ೬೩೮ ಎಂದು ಡಾ|| ಭಗವಾನಲಾಲರು ಗೊತ್ತು

ಮಾಡಿದ್ದಾರೆ. ಆದುದರಿಂದ ಈ ಸಂವತ್ಸರವು ಇಂದಿಗೆ ೨೫೮೩ ವರ್ಷಗಳಲ್ಲಿ ಮೊದಲಾಯಿತೆಂದು ಹೇಳಬಹುದು

ಜಿನಸಂವತ್ಸರ:—ಜೈನಮತದ ತೀರ್ಥಂಕರನಾದ ಮಹಾವೀರಸ್ವಾಮಿಯ ಮೋಕ್ಷಪ್ರಾಪ್ತಿಯ ದಿವಸವನ್ನು ಜಿನವತ್ಸರಾರಂಭವೆಂದು ಹೇಳುತ್ತಾರೆ. ಮಹಾ ವೀರನು ದೀಪಾವಳಿ ದಿವಸ ಮುಕ್ತಿಗೆ ಹೋದನೆಂದು ಎಲ್ಲಾ ಜೈನರ ಹೇಳಿಕೆಯೂ ಇರುವುದರಿಂದ ಆ ಕಾಲವನ್ನು ನಾವು ಈ ವರ್ಷಾರಂಭವೆಂದು ಹೇಳಬಹುದು ಮಹಾವೀರನು ಕ್ರಿ ಪೂ ೫೨೭ರಲ್ಲಿ ಮುಕ್ತನಾದನೆಂದು ಜೈನರು ಹೇಳುತ್ತಾರೆ ಇದು ನಡೆದು ಇಂದಿಗೆ ೨೪೬೨ ವರ್ಷಗಳಾಯಿತೆಂದು ತಿಳಿಯುತ್ತದೆ

ಮೌರ್ಯ ಸಂವತ್ಸರ :—ಕಳಿಂಗ ದೇಶಾಧಿಪತಿಯೂ ಜೈನಚಕ್ರವರ್ತಿಯೂ ಆದ ಖಾರವೇಲನ ಹಾಥೀಗುಂಫಾದಲ್ಲಿ ದೊರೆತ ಶಿಲಾಲೇಖನದಿಂದ ಇದು ಗೊತ್ತಾಗುತ್ತದೆ ಮೌರ್ಯ ಚಕ್ರವರ್ತಿಯಾದ ಚಂದ್ರಗುಪ್ತನು ಇದನ್ನು ಮೊದಲುಮಾಡಿದನೆಂದೂ ಈತನು ಮಹಾವೀರನಿಂದೀಚೆಗೆ ೧೫೫ ವರ್ಷಗಳಲ್ಲಿದ್ದನೆಂದೂ ಜೈನರ ಪ್ರಸಿದ್ಧ ವಿದ್ವಾಂಸನಾದ ಹೇಮಚಂದ್ರಸೂರಿಯು ಹೇಳಿದ್ದಾನೆ ಮೇಲಿನ ಅಂಶಗಳಿಂದ ಇದರ ಸಮಯವು ಇಂದಿಗೆ ೨೩೦೮ ವರ್ಷಗಳಾಗಿವೆಯೆಂದು ತಿಳಿದು ಬರುತ್ತದೆ. ಪೂರ್ವೋತ್ತರ ಭಾರತಗಳಲ್ಲಿದು ಚೈತ್ರಶುಕ್ಲದಿಂದಲೂ ಪಶ್ಚಿಮ ದಕ್ಷಿಣ ಭಾರತದಲ್ಲಿದು ಕಾರ್ತೀಕ ಶುಕ್ಲದಿಂದಲೂ ಎಣಿಸಲ್ಪಡುತ್ತಿತ್ತು.

ಸಲ್ಯೂಕಸ್ ಸಂವತ್ಸರ :—ಪರಾಕ್ರಮಿ ಅಲೆಕ್ಝಾಂಡರನ ಮರಣಾನಂತರ ೧೨ ವರ್ಷಗಳಿಗೆ ಅವನ ಸೇನಾಪತಿಯು ಈ ವರ್ಷವನ್ನು ಆರಂಭಮಾಡಿದನು. ಇದು ವಿದೇಶಿಯಾದರೂ ಭಾರತೀಯ ಪಂಚಾಂಗದಲ್ಲಿದಕ್ಕೆ ಸ್ಥಳವು ಸಿಕ್ಕಿತ್ತು ಇದನ್ನು ಅಕ್ಟೋಬರ್ ಮೊದಲನೆಯ ದಿನದಿಂದ ಎಣಿಸುತ್ತಿದ್ದರು ಭಾರತೀಯ ನಾಣ್ಯಗಳ ಮೇಲೆಯೂ ಇದರ ಉಲ್ಲೇಖವಿದೆ ಇದು ನಡೆದು ಇಂದಿಗೆ ೨೨೪೮ ವರ್ಷಗಳಾಯಿತು.

ಯೂನಾನಿ, ಅಥವಾ ಒಲಂಪಿಯಡ ಸಂವತ್ಸರ .—ಹಿಂದಿನ ಕಾಲದಲ್ಲಿ ಆ ದೇಶವು ಒಂದು ರಾಜ್ಯಾಡಳಿತದಲ್ಲಿರಲಿಲ್ಲ ಯೂನಾನಿನ ಇತಿಹಾಸ ಲೇಖಕನು ಕ್ರಿ ಪೂ ೨೦೦ ರಲ್ಲಿ ಈ ಒಲಂಪಿಯಡ್ ಸಂವತ್ಸರವನ್ನು ಬಳಕೆಗೆ ತಂದನು ಆ ವರ್ಷಾರಂಭವನ್ನು ನಾನಾ ನೃತ್ಯ, ಗಾನ ವಿನೋದಗಳಲ್ಲಿ ಕಳೆಯಬೇಕೆಂದೂ ಆ ದಿವಸ ಸೊಗಸಾದ ಗರಡಿಯ ಜಟ್ಟಿಗಳ ಸಾಹಸ ಪ್ರದರ್ಶನವಾಗಬೇಕೆಂದೂ ದೇಶದಲ್ಲೆಲ್ಲಿಯೂ ಯುದ್ಧವಿರಕೂಡದೆಂದೂ ಕಟ್ಟುಮಾಡಿದನು ಈ ಮಹಾ ಉತ್ಸವವನ್ನು ಸ್ತ್ರೀಯರೂ, ಗುಲಾಮರೂ ನೋಡದಂತೆ ಕಟ್ಟುಮಾಡಿದ್ದನು ಇದರಿಂದ ಇದೇ ಒಂದು ಸಂವತ್ಸರವಾಯಿತು ಇದು ಮೊದಲಾಗಿ ಇಂದಿಗೆ ೨೨೨೫ ವರ್ಷಗಳಾದವು (ಸಶೇಷ-ಬ್ರಾಹ್ಮಣ ಪತ್ರಿಕೆಯಿಂದ)

# ಪ್ರಪಂಚದ ಶಕಸಂವತ್ಸರಗಳು

(ಸುರೇಶ್ವರಪ್ರಸಾದ ಮಿಶ್ರರ ಲೇಖನದ ಆಧಾರದಿಂದ)

(ಕಳೆದ ಸಂಚಿಕೆಯಿಂದ ಮುಂದುವರಿದುದು)

ಪಾರ್ಥಿಯನ್ ಸಂವತ್ಸರ :—ಇದರ ಸಂಗತಿಯು ಬೌದ್ಧರ ಕೆಲವು ಗ್ರಂಥಗಳಲ್ಲಿ ಸ್ವಲ್ಪ ಸಿಕ್ಕುತ್ತದೆ. ಇದನ್ನು ಪರ್ಶಿಯಾ ನಿವಾಸಿಗಳಾದ ಪಾರ್ಥರು 'ಆಂಟಿಗೋನಸ್ಸ'ನ ಮರಣಾನಂತರ ರಚಿಸಿಕೊಂಡು ತಮ್ಮ ಸ್ವಾತಂತ್ರ್ಯವನ್ನು ಉದ್ಘೋಷಿಸಿಕೊಂಡರು ಇದು ನಡೆದು ಇಂದಿಗೆ ೨೧೮೨ ವರ್ಷಗಳಾದವು ಈ ವರ್ಷವು ಈಗ ಲುಪ್ತವಾಗಿ ಹೋಗಿದೆ

ವಿಕ್ರಮ ಸಂವತ್ಸರ :—ಈ ವರ್ಷಗಣನೆಯು ಈಗ ಸಮಗ್ರ ಉತ್ತರ ಭಾರತದಲ್ಲೆಲ್ಲಾ ಬಳಕೆಯಲ್ಲಿದೆ ಮೊದಲು ಮೊದಲು ಇದು 'ಮಾಳವ'ವತ್ಸರವೆಂದೂ ವ್ಯವಹರಿಸಲ್ಪಡುತ್ತಿತ್ತು ಕ್ರಿ ಶ ೩೭೨ ರಿಂದ ಇದು ವಿಕ್ರಮಾಬ್ದವೆಂದು ಪ್ರಸಿದ್ಧವಾಯಿತು ಇದಕ್ಕೂ ಹಿಂದಕ್ಕೆ ಇದರ ಹೆಸರು ಸಿಕ್ಕುತ್ತದೆ. ಇದು ಕ್ರಿ. ಪೂ. ೫೭ರಲ್ಲಿ ಮೊದಲಾಯಿತು ಎಂದರೆ ೧೯೯೩ ವರ್ಷಗಳಿಂದಲೂ ಇದು ವ್ಯವಹಾರದಲ್ಲಿದೆ.

ಶಕ-ಶಾಲೀವಾಹನ ಸಂವತ್ಸರ :—ಈ ವರ್ಷಗಣನೆಯು ಕ್ರಿ. ಶ. ೭೮ ರಿಂದ ಮೊದಲಾಯಿತು ಇದನ್ನು ಚೈತ್ರ ಶುದ್ಧದಿಂದ ಎಣಿಸುತ್ತಾರೆ ಇದು ಮೊದಲು 'ಶಕ' ಸಂವತ್ಸರವೆಂದೇ ವ್ಯವಹರಿಸಲ್ಪಡುತ್ತಿತ್ತು ಆದುದರಿಂದ ಇದನ್ನು ಒಬ್ಬ ಶಕರಾಜನು ಸ್ಥಾಪಿಸಿರಬೇಕೆಂದು ತಿಳಿದು ಬರುತ್ತದೆ ಇದರ ವ್ಯವಹಾರವು ಶಕ ೨೫ನೆಯ ವರ್ಷದ ಗಂಗರಸರ ಕನ್ನಡ ಶಾಸನಗಳಲ್ಲಿಯೂ ದೊರೆಯುತ್ತದೆ. ಕ್ರಿ ಶ. ೧೩೪೦ನೆಯ ವಿಜಯನಗರದ ರಾಜರ ಶಾಸನಗಳಲ್ಲಿ ಶಾಲೀವಾಹನಶಕವೆಂದು ಹೆಸರು ಸಿಕ್ಕುತ್ತದೆ. ಈಗ ಈ ಶಕವು ಸಮಗ್ರ ದಕ್ಷಿಣ ಭಾರತದಲ್ಲೆಲ್ಲಾ ಪ್ರಚಾರದಲ್ಲಿರುತ್ತದೆ. ಇದು ಇಂದಿಗೆ ೧೮೫೮ ವರ್ಷಗಳಿಂದಲೂ ಪ್ರಚಾರದಲ್ಲಿರುತ್ತದೆ ಇದು ಇಂದಿಗೆ ೧೮೫೮ ವರ್ಷಗಳಿಂದಲೂ ಬಳಕೆಯಲ್ಲಿರುತ್ತದೆ.

ಕ್ರಿಸ್ತಶಕ ಸಂವತ್ಸರ :—ಈ ವರ್ಷದ ವಿಷಯದಲ್ಲಿ ಹೆಚ್ಚಿಗೆ ಏನನ್ನೂ ಬರೆಯಬೇಕಾಗಿಲ್ಲ ಇದು 'ಈಸಾಯಿ' ಮತಸ್ಥಾಪಕನಾದ ಏಸುವಿನ ಜನ್ಮದಿನದಿಂದ ಮೊದಲಾಗುತ್ತದೆ. ಇಲ್ಲಿ ಇಂಗ್ಲೀಷ' ರಾಜ್ಯಭಾರದ ದೆಶೆಯಿಂದ ಈಗ ಭರತಖಂಡದಲ್ಲಿ ವಿಶೇಷ ಪ್ರಚಾರದಲ್ಲಿದೆ. ಈ ವರ್ಷಗಣನೆಯಲ್ಲಿ 'ರೋಮ' ಜನರ ಹತ್ತು ತಿಂಗಳಿಗೆ ಬದಲಾಗಿ ಹನ್ನೆರಡು ತಿಂಗಳುಗಳಾಗಿವೆ ಜನವರಿ ಮೊದಲನೆಯ ದಿನದಿಂದ ವರ್ಷಾರಂಭವಾಗುತದೆ. ಇಂದಿಗೆ ಈ ವರ್ಷಗಳು ೧೯೩೬ ನಡೆದಿವೆ.

ಜಾವಾ-ಬಾಲೀ ಸಂವತ್ಸರಗಳು :—ಭಾರತವಾಸಿಗಳು ಧರ್ಮಪ್ರಚಾರಕ್ಕಾಗಿ ಎಲ್ಲಾ ದೇಶಗಳಿಗೂ ಹೋಗುತ್ತಿದ್ದರು ಆಗ 'ಜಾವಾ' 'ಬಾಲೀ' ದ್ವೀಪಗಳಿಗೆ ಹೋಗಿ ನೆಲೆಸಿದರು ಅವರು ಅಲ್ಲಿಗೆ ಹೋಗಿ ನೆಲೆಸಿದ ಜ್ಞಾಪಕಾರ್ಥವಾಗಿ ತಮ್ಮದೊಂದು ವರ್ಷವನ್ನೇ ಬಳಕೆಗೆ ತಂದರು ಅದೇ ಈ ಸಂವತ್ಸರ. ಇಂದಿಗೆ ೧೮೬೦ ವರ್ಷಗಳ ಹಿಂದೆ 'ಬಾಲಿ' ಸಂವತ್ಸರವು ಪ್ರಚಾರಕ್ಕೆ ಬಂದಿತು.

ಕಲಚುರಿ ಸಂವತ್ಸರ : ಇದನ್ನು 'ಚೇದಿ-ತ್ರೈಕೂಟಕ' ಸಂವತ್ಸರಗಳೆಂದೂ ಕರೆಯುವುದುಂಟು ಇದನ್ನು ಪ್ರಸಿದ್ಧ ಕಾಲಚುರಿರಾಜನಾದ ನರಸಿಂಹದೇವನು ಕ್ರಿ. ಶ. ೨೪೮ರಲ್ಲಿ ಸ್ಥಾಪಿಸಿದನು ಈ ವರ್ಷಗಣನೆಯು ತ್ರಿಪುರದ ಕಲಚುರಿ (ಹೈಹಯ) ಗಳ ಲೇಖನಗಳಲ್ಲೆಲ್ಲಾ ದೊರೆಯುತ್ತದೆ. ಇದು ಕೊನೆಗೆ ಅಸ್ತವಾಯಿತು ಇದನ್ನು ಆಗ ಚೈತ್ರಶುದ್ಧದಿಂದ ಗಣಿಸುತ್ತಿದ್ದರು ಇದು ಇಂದಿಗೆ ೧೬೮೭ ವರ್ಷಗಳ ಹಿಂದೆ ಮೊದಲಾಯಿತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಗುಪ್ತಸಂವತ್ಸರ :—ಈ ಶಕವನ್ನು ಮಹಾರಾಜ ಘಟೋತ್ಕಚಗುಪ್ತನ ಮಗನಾದ ಚಂದ್ರಗುಪ್ತನು ತನ್ನ ರಾಜ್ಯಾಭಿಷೇಕ ಕಾಲದಿಂದ ಮೊದಲು ಮಾಡಿದನು ಇವನ ರಾಜ್ಯಾಭಿಷೇಕವು ಕ್ರಿ ಶ ೩೨೦ರಲ್ಲಿ ಆಯಿತೆಂದು ಪಂಡಿತರು ಊಹಿಸಿದ್ದಾರೆ. ಇದು ೧೨೬೪ನೆಯ ಇಸ್ವಿಯವರೆಗೂ ಬಳಕೆಯಲ್ಲಿತ್ತು ಇದು ಇಂದಿಗೆ ೧೬೧೫ ವರ್ಷದಲ್ಲಿ ಮೊದಲಾಯಿತೆಂದು ತಿಳಿದು ಬರುತ್ತದೆ.

ವಲ್ಲಭೀ ಸಂವತ್ಸರ :—ಇದ ಪಶ್ಚಿಮ ಭಾರತದಲ್ಲಿ ಕೇವಲ ೯ವರ್ಷಗಳು ಮಾತ್ರ ಬಳಕೆಯಲ್ಲಿತ್ತು ಇದು ಗುಪ್ತವರ್ಷಗಳ ಕಾಲದಲ್ಲಿಯೇ ಉದಯವಾಗಿ ಅಸ್ತವಾಯಿತು ಇದರ ವಿಷಯವಾಗಿ ಒಂದೆರಡು ತಾಮ್ರಪಟ್ಟಗಳಿವೆಯೇ ವಿನಾಃ ಮತ್ತೇನೂ ದೊರೆಯುವುದಿಲ್ಲ

ಅಮಲೀ ಪಸ್ಲೀ :-ಈ ವರ್ಷಗಣನೆಯು ಪೂರ್ವಕಾಲದಲ್ಲಿ ಪಾರ್ಶಿಸ್ಥಾನದಲ್ಲಿಯೂ ಮೊಗಲಾಯರಕಾಲದಲ್ಲಿ ಹಿಂದೂಸ್ಥಾನದಲ್ಲಿಯೂ ಬಳಕೆಯಲ್ಲಿತ್ತು ಈಗಲೂ ಸ್ವಲ್ಪ ಮಟ್ಟಿಗೆ ಬಳಕೆಯಲ್ಲಿದೆ. ಇದನ್ನು ಸ್ಥಾಪಿಸಿದವರ ಹೆಸರು ಸರಿಯಾಗಿ ಗೊತ್ತಾಗುವುದಿಲ್ಲ. ಇದು ಕ್ರಿ. ಶ ೫೯೨ ರಿಂದ ಪ್ರಾರಂಭವಾದಂತೆ ತಿಳಿದುಬರುತ್ತದೆ ಇದು ಇಂದಿಗೆ ೧೩೪೨ ವರ್ಷಗಳಿಂದಲೂ ಎಣಿಸಲ್ಪಡುತ್ತಿದೆ

ಬಂಗಾಳ ಸಂವತ್ಸರ :— ಇದು ಬಂಗಾಳದಲ್ಲಿ ಮಾತ್ರ ಬಳಕೆಯಲ್ಲಿದೆ ಇದನ್ನು ಯಾರು ಬಳಕೆಗೆ ತಂದರೋ ಅದು ಸರಿಸರಿಯಾಗಿ ಗೊತ್ತಾಗುವುದಿಲ್ಲ ಇದು ಇಂದಿಗೆ ೧೩೪೩ ವರ್ಷಗಳಿಂದಲೂ ವ್ಯವಹಾರದಲ್ಲಿ ಬಂದಿರುತ್ತದೆ

ಹರ್ಷ ಸಂವತ್ಸರ :—ಇದನ್ನು ಸ್ಥಾಪಿಸಿದವನು ಮಹಾರಾಜ ಹರ್ಷವರ್ಧನನು. ಇವನ ರಾಜ್ಯಾಭಿಷೇಕಕಾಲದಿಂದ ಇದು ಬಳಕೆಗೆ ಬಂದಿತು ಇದನ್ನು ಇಂದಿಗೆ ೧೩೨೮ ವರ್ಷಗಳ ಹಿಂದೆ ಸ್ಥಾಪಿಸಿದ್ದನು

ಹಿಜರಿ ಸಂವತ್ಸರ :—ಇದನ್ನು ಮಹಮದೀಯರೇ ಹೆಚ್ಚಾಗಿ ಆಚರಣೆಯಲ್ಲಿಟ್ಟು ಕೊಂಡಿದ್ದಾರೆ. ಪೈಗಂಬರ್ ಮಹಮ್ಮದನು ತನ್ನ ಶತ್ರುಗಳ ಕಾಟದಿಂದ ತಲೆತಪ್ಪಿಸಿ ಕೊಂಡು ಮಕ್ಕಾದಿಂದ ಮದೀನಕ್ಕೆ ಹೊರಟುಹೋದ ದಿವಸದಿಂದ ಇದನ್ನು ಎಣಿಸುತ್ತಾರೆ ಇದು ಕ್ರಿ ಶ. ೬೨೨ ರಲ್ಲಿ ನಡೆಯಿತು ಆದರೂ ಇವನ್ನು ಚಾಂದ್ರಮಾನದಂತೆ ಹುಣ್ಣಿಮೆ ಹುಣ್ಣಿಮೆಗೂ ತಿಂಗಳನ್ನು ಎಣಿಸುತ್ತಾರೆ ಈ ಶಕಾರಂಭವಾಗಿ ಇಂದಿಗೆ ಸು|| ೧೩೧೩ ವರ್ಷಗಳಾಗಿರುತ್ತವೆ

ಯಜ್ದೀಗರ್ದ್ ಸಂವತ್ಸರ :—ಫಾರಸಿಗಳು ತಿಂಗಳಿನ ಮುವ್ವತ್ತು ದಿವಸಗಳನ್ನೂ ಬೇರೆ ಬೇರೆ ಹಾರಗಳಿಂದ ಕರೆಯುತ್ತಾರೆ ೧೨ ತಿಂಗಳಿಗೆ ಒಂದು ವರ್ಷವೆಂದೂ ಕೊನೆಯ ಐದು ದಿವಸಗಳನ್ನು ಹೆಚ್ಚಿಸಿ ಆ ಐದು ದಿವಸಗಳನ್ನು ಬೇರೆಮಾಡಿ ಐದು ದಿವಸಗಳನ್ನೇ ಬೇರೆ ಹೆಸರಿನಿಂದ ಕರೆಯುತ್ತಾರೆ ಈ ಪದ್ಧತಿಯನ್ನು ಪಾರ್ಶಿಚಕ್ರವರ್ತಿ ಯಾದ ಯಜ್ಯಗುರ್ದನು ಕ್ರಿ ಶ. ೬೩೨ರಲ್ಲಿ ಬಳಕೆಗೆ ತಂದನಂತೆ. ಇಂದಿಗೆ ಈ ವರ್ಷವು ಮೊದಲಾಗಿ ೧೩೦೩ ವರ್ಷಗಳಾದವೆಂದು ಹೇಳಬಹುದು

ಮಾಗೀ ಸಂವತ್ಸರ :—ವರ್ಷಗಣನೆಯನ್ನು ಬರ್ಮಾದೇಶದಲ್ಲಿ ಶಾಪ್ಯಾಚಾಽ ರಾಹನನೆಂಬವನು ಪ್ರಚಾರ ಮಾಡಿದನು ಇದನ್ನು ಮಹಾಬ್ದವೆಂದೂ ಕರೆಯುವುದುಂಟು ಇದು ಕ್ರಿ ಶ. ೬೩೮ರಲ್ಲಿ ಬಳಗೆ ಬಂದಿತೆಂದು ತಿಳಿದು ಬರುತ್ತದೆ ಇಂದಿಗೆ ಇದು ಪ್ರಾರಂಭವಾಗಿ ೧೨೯೮ ವರ್ಷಗಳಾದವು ಇದು ಈಗ ಬರ್ಮಾದಲ್ಲಿ ಮಾತ್ರ ವ್ಯವ ಹಾರದಲ್ಲಿದೆ

ಇವುಗಳೇ ಅಲ್ಲದೆ ಇನ್ನೂ ಕೆಲವು ಶಕಸಂವತ್ಸರಗಳು ಬಳಕೆಯಲ್ಲಿದ್ದವು ಮತ್ತು ಕೆಲವು ಈಗಲೂ ಉಳಿದಿರುತ್ತವೆ ಅವುಗಳ ವಿಷಯನ್ನು ಅಷ್ಟೇನೂ ವಿವರಿಸಿ ಬರೆಯ ಬೇಕಾದ ಅವಶ್ಯಕತೆಯಿಲ್ಲದುದರಿಂದ ಅವುಗಳ ಸೂಚೀಪತ್ರವನ್ನು ಈ ಕೆಳಗೆ ಕೊಟ್ಟಿರು ತ್ತೇವೆ ಅವುಗಳು ಕ್ರಮವಾಗಿ —

| **ಶಕಸಂವತ್ಸರದ ಹೆಸರು.** | | | | **ಕಾಲ ಕ್ರಿ. ಶ.** |
|---|---|---|---|---|
| ಗಂಗ | .... | ... | .... | ೫೭೦ |
| ಕೊಲಂಬ | .... | .... | .... | ೮೨೪ |
| ನೇಪಾಳ | .... | .... | .... | ೭೭೮ |

| | | | | |
|---|---|---|---|---|
| ಚಾಲುಕ್ಯ | .... | .... | .... | ೧೦೭೬ |
| ಜಲಾಲಿ | .... | .... | .... | ೧೦೮೯ |
| ಸಿಂಹ | .... | .... | .... | ೧೧೧೩ |
| ಲಕ್ಷ್ಮಣ | .... | | .... | ೧೧೧೬ |
| ಆದಿಲ್ ಶಾಹಿ | .... | . | .... | ೧೨೫೭ |
| ಫೈಡುಫೈವು | .... | .... | ... | ೧೩೪೧ |
| ಸೂರ | .... | .... | .... | ೧೩೪೩ |
| ಕಪಿಲ | .... | .... | | ೧೪೩೫ |
| ಇಲಾಹಿ | .... | .... | .... | ೧೫೫೫ |
| ಶಿವ | .. | .... | . | ೧೬೭೪ |
| ತುಲಸಿ | .... | .... | .... | ೧೬೬೩ |
| ದಯಾನಂದ | .... | .... | .... | ೧೮೨೪ |
| ರಷ್ಯಾಕ್ರಾಂತಿ | .... | .... | .... | ೧೯೧೭ ಇತ್ಯಾದಿ |

ಮೇಲೆ ಬರದ ಕೆಲವು ಶಕಗಳು ಕೆಲವರ ರಾಜ್ಯಾರೋಹಣ ಕಾಲದಲ್ಲಿಯೂ ಕೆಲವು ಕೆಲ ಮತಸ್ಥಾಪನೆಯ ಕಾಲದಲ್ಲಿಯೂ ಆರಂಭವಾದವುಗಳು ಕಡೆಯಲ್ಲಿ ಬರೆದ ಶಕ ವತ್ಸರವು ರಾಜ್ಯಕ್ರಾಂತಿಯ ಕಾಲದಲ್ಲಿ ಮೊದಲಾಯಿತು ನಮ್ಮ ದೇಶೀಯರು ಈಗ ಪ್ರಪಂಚವನ್ನು ಕಣ್ಣುತೆರೆದು ನೋಡುವ ಕಾಲ ನಮ್ಮ ಹಿಂದೆ, ನಮಗೆ ಗೊತ್ತಿಲ್ಲದೆ ಎಷ್ಟೊಂದು ಪ್ರಾಚೀನಕಾಲದ ಸತ್ಯದ ಅವಶೇಷಗಳಿವೆಯೆಂಬುದು ನಮಗೆ ಗೊತ್ತಿಲ್ಲ ವಾಗಿದೆ. ಇದುವರೆಗೆ ಪ್ರಪಂಚದಲ್ಲಿ ಎಷ್ಟೊಂದು ಶಕಸಂವತ್ಸರಗಳಿವೆಯೋ ಅವು ಗಳೆಲ್ಲಕ್ಕೂ ನಮ್ಮ ವೈದಿಕಸಂವತ್ಸರನೇ ಹಳೆಯದು ಮತ್ತು ಸೃಷ್ಟಿಯ ಆರಂಭಕಾಲ ದಿಂದಲೂ ನಡೆದುಕೊಂಡು ಬಂದಿರುವುದು ಈ ದಿವಸ ದೇವರೇ ಇಲ್ಲವೆಂದು ಹಟ ಹಿಡಿದು ವಾದಿಸುವ ಮಹಾ ಮಹಾ ನಾಸ್ತಿಕರೂ ಪ್ರಪಂಚವು ಸೃಷ್ಟಿಯಾಗಿ ೨೦೦ ಕೋಟಿ ವರ್ಷಗಳಾಯಿತೆಂದು ಒಪ್ಪಿಕೊಳ್ಳುತ್ತಾರೆ. ಈಶ್ವರಶಕ್ತಿಯ ಪ್ರಬಲ ವಿರೋಧಿ ಗಳ ದಂಡನಾಯಕನಾದ ಓಸ್ವನ , ಹಕ್ಸಲೇ, ಡಾರ್ವಿನ್, ನಿಟ್ಸೆ, ಮೊದಲಾದ ಧುರಂ ಧರ ವಿದ್ವಾಂಸರೂ ಇದನ್ನು ಒಪ್ಪಿಕೊಂಡಿರುತ್ತಾರೆ

ಈ ಲೇಖನದಲ್ಲಿ ಪ್ರಪಂಚದ ಎಲ್ಲಾ ಶಕಸಂವತ್ಸರಗಳಿಗಿಂತಲೂ ವೈದಿಕಸಂವತ್ಸ ರವೇ ಬಹಳ ಪ್ರಾಚೀನವೆಂಬುದನ್ನು ನೋಡಬಹುದು. ವಾಚಕರಿಗೆ ಇದರಿಂದ ಸ್ವಲ್ಪ ವಾದರೂ ಉಪಯೋಗವಾಗುವುದಾದರೆ ಈ ಲೇಖಕನಿಗೆ ತುಂಬಾ ಸಂತೋಷವಾಗುವು ದೆಂದು ಹೇಳಿ ಇದನ್ನು ಮುಗಿಸುತ್ತೇನೆ. (ಬ್ರಾಹ್ಮಣ ಪತ್ರಿಕೆಯಿಂದ)

---

# ಜೇನಿನಲ್ಲಿರುವ ಔಷಧ ಗುಣಗಳು

ಇಂಡಿಯಾದೇಶದ ಹಲವು ಪ್ರಾಂತ್ಯಗಳಲ್ಲಿ ಜೇನು ಆಹಾರರೂಪವಾಗಿ ಉಪಯೋಗವಾಗುತ್ತಿದೆ. ಫಲಜಾತಿಗಳನ್ನು ಹೆಚ್ಚು ಕಾಲದವರೆಗೆ ಕೆಡದಂತೆ ಕಾಪಾಡುವುದಕ್ಕೂ, ಕೆಲವು ಮಿಠಾಯಿಗಳನ್ನು ತಯಾರಿಸುವುದಕ್ಕೂ ಜೇನು ಉಪಯುಕ್ತವಾಗಿದೆ. ಜೇನು ಒಂದು ವಿಷಹಾರಕ ವಸ್ತುವೆಂದು ಆದರಿಸಲ್ಪಡುವುದು ಇದನ್ನು ಅನೇಕರು ಔಷಧ ರೂಪವಾಗಿಯೇ ಉಪಯೋಗಿಸುತಿದ್ದರೂ ಇದರಲ್ಲಿ ಪೋಷಣಾಗುಣವು ಹೆಚ್ಚಾಗಿದೆ. ಕೆಲವು ಸಮಯಗಳಲ್ಲಿ ದುರ್ಗಂಧಹಿಡಿದ ವ್ರಣಗಳ ಮೇಲೆ ಇದನ್ನು ಲೇಪಿಸುವರು. ಗಡ್ಡೆಗಳು, ಸುಲಿದ ಚರ್ಮ, ಸುಟ್ಟಗಾಯ, ಇವುಗಳ ಮೇಲೆ ಲೇಪಿಸಿದರೆ ಹುಣ್ಣು ಆರಿ, ಚರ್ಮವು ಬೇಗನೆ ಮುಚ್ಚಿಕೊಳ್ಳುವುದೆಂದು ಡಾಕ್ಟರ್ ಹೇಲ್‌ವೈಟ್ ಎಂಬವರು ಹೇಳಿರುವರು ದೇಹಲಾವಣ್ಯವನ್ನುಂಟುಮಾಡುವುದಕ್ಕೂ ಇದನ್ನು ಲೇಪಿಸುವುದುಂಟು. ಬಾಯಿಯುದ್ರವವಿಲ್ಲದೆ ಒಣಗಿದಂತಿರುವಾಗ ಇದನ್ನುಪಯೋಗಿಸುವರು. ಕೆಮ್ಮಲಿಗೆ ಇದು ಒಳ್ಳೇ ಗುಣಕಾರಿಯೆಂದು ಅಂಗೀಕರಿಸಲ್ಪಟ್ಟಿದೆ ಇದರಿಂದೆ ಅನೇಕ ಆಯುರ್ವೇದ ಔಷಧಗಳಿಗೆ ಇದು ಮಿಶ್ರಮಾಡಲ್ಪಡುವುದು. ಇದರಲ್ಲಿ ಸ್ವಲ್ಪ ಭೇದಿಕಾರಿ ಗುಣವೂ ಇರುವುದರಿಂದ ಮಕ್ಕಳಿಗೆ ಮಲನಿವೃತ್ತಿಗಾಗಿ ಕೊಡಬಹುದು. ಮಕ್ಕಳ ಮೈಗೆ ಶಾಖವನ್ನೂ, ಬಲವನ್ನೂ ಕೊಡುವುದಕ್ಕೆ ಇದು ಉಪಯುಕ್ತವಾಗುವುದು

ಶಾರೀರದಲ್ಲಿ ತೋರುವ ಗದ್ಗದಧ್ವನಿಯನ್ನು ತಪ್ಪಿಸಿ ಕಂಠಸ್ವರವನ್ನು ಇಂಪಾಗಿ ಮಾಡುವ ಗುಣವು ಜೇನಿನಲ್ಲಿ ವಿಶೇಷವಾಗಿದೆ. ಇದನ್ನು ತುಲಸೀರಸದೊಡನೆ ಬೆರೆಸಿ ಕೊಡುವುದರಿಂದ ನೆಗಡಿ, ಕೆಮ್ಮಲು, ಕೆಲವುವೇಳೆ ಜ್ವರ ಇವೆಲ್ಲ ಗುಣವಾಗುವುದು ಇದು ಮುಖದಲ್ಲಿ ಮೊಡವೆಗಳನ್ನು ತಪ್ಪಿಸುವುದು ವಯಸ್ಸು ಕಳೆದವರು ಪ್ರತಿದಿನವೂ ತಪ್ಪದೆ ಸ್ವಲ್ಪ ಜೇನನ್ನು ಕುಡಿಯುವ ವಾಡಿಕೆಯನ್ನಿಟ್ಟುಕೊಂಡರೆ, ಆರೋಗ್ಯಕ್ಕೆ ವಿಘಾತವಿಲ್ಲದಂತೆ ಅವರು ಉತ್ಸಾಹದಿಂದ ಕೆಲಸಮಾಡುವ ಶಕ್ತಿಯನ್ನು ಕೊಡುವುದು ಜೇನು ನರಗಳಿಗೆ ಬಲಕಾರಿಯಾದ ರಸಾಯನ ಗುಣವುಳ್ಳುವುದು

ದೇಹವನ್ನು ಕೃಶಮಾಡತಕ್ಕ ಎಲ್ಲಾ ವ್ಯಾಧಿಗಳಲ್ಲಿಯೂ, ಇದರ ಸೇವನೆಯಿಂದ ಗುಣವುಂಟು. ಇದು ದೇಹದೊಳಗಿನ ಸೂಕ್ಷ್ಮಭಾಗಗಳಿಗೆಲ್ಲ ಬಹುವೇಗದಿಂದ ಪ್ರವೇಶಿಸಿ ಅವುಗಳಿಗೆ ತಕ್ಕ ಆಹಾರವಾಗಿ ಪರಿಣಮಿಸುವುದು ಇದು ಬೇಗನೆ ದೇಹಾರೋಗ್ಯವನ್ನೂ ಹಸಿವನ್ನೂ ಉಂಟುಮಾಡುವುದು ಜೇನು ಬುದ್ಧಿಯನ್ನೂ, ಚಟುವಟಿಕೆಯನ್ನೂ ಹೆಚ್ಚಿಸುವುದರಿಂದ ಪ್ರತಿದಿನವೂ ಅದನ್ನು ಸೇವಿಸುತ್ತ ಬರುವುದು ಒಳ್ಳೆಯದು

(ಆರೋಗ್ಯ ಚಂದ್ರಿಕೆ)

# ಶಮೀಕ

(ಗೋವಿಂದರಾವ್ ದೇಶಪಾಂಡೆ ಸಾತಾರ)

ದ್ವಾಪರಯುಗದ ಅಂತ್ಯಭಾಗದಲ್ಲಿ ಅಂದರೆ ಮಹಾಭಾರತದ ಯುದ್ಧವಾದನಂತರ ಪಾಂಡವರ ಮೊಮ್ಮಗನಾದ ಪರೀಕ್ಷದ್ರಾಜನು ರಾಜ್ಯವಾಳುತ್ತಿದ್ದನು ಇವರು ಮಧ್ಯಮ ಪಾಂಡವನಾದ ಅರ್ಜುನನ ಮಗನ ಮಗನು. ಒಂದಾನೊಂದು ದಿನ ರಾಜನು ಕ್ರೂರ ಮೃಗಗಳ ಬೇಟೆಯಾಡುವದಕ್ಕೆಂದು ಹೋಟು ಬಹುದೂರದವರೆಗೆ ಹೋಗಿ, ಅನೇಕ ಹಿಂಸ್ರಮೃಗಗಳನ್ನು ಸಂಹರಿಸಿ ದಣಿದು ನೀರಡಿಸಿ, ನೆರೆಹೊರೆಯಲ್ಲೆಲ್ಲ ಅಲೆದಾಡಿ ಹುಡುಕಿ ನೀರುಕಾಣದೆ, 1 ಒಂದಾನೊಂದು ಆಶ್ರಮವನ್ನು ಹೊಕ್ಕನು ಅಲ್ಲಿ ಒಬ್ಬ ಋಷಿಯು ಸಮಾಧಿಯನ್ನು ಹಚ್ಚಿಕೊಂಡು, ಮೀಲಿಕಲೋಚನನಾಗಿ, ಪರಮಾತ್ಮನ ಧ್ಯಾನದಲ್ಲಿ ತೊಡಗಿದ್ದನು. ರಾಜನು ಬಂದದ್ದು ಅವನಿಗೆ ಗೊತ್ತಾಗಲಿಲ್ಲ. ರಾಜನಾದರೋ ತೃಷಾರ್ತನಾಗಿ ಅತ್ತಿತ್ತ ಓಡಾಡಿದನು, ಯಾರೂ ಅವನನ್ನು ಸ್ವಾಗತಿಸಲಿಲ್ಲ. ಕಡೆಗೆ ಕೋಪಾವಿಷ್ಟನಾಗಿ, ಹತ್ತರದಲ್ಲಿಯೇ ಸತ್ತುಬಿದ್ದಿದ್ದ ಒಂದು ಹಾವನ್ನು ತನ್ನ ಧನಸ್ಸಿನ ತುದಿಯಿಂದ ಎತ್ತಿ, ಆ ಋಷಿಯ ಕೊರಳೊಳಗೆ ಹಾಕಿ ಹೊರಟುಹೋದನು. ಇದನ್ನೆಲ್ಲ ದೂರದಿಂದಲೇ ನೋಡುತ್ತಿದ್ದ ಒಬ್ಬಾನೊಬ್ಬ ಋಷಿಬಾಲಕನು, ದೂರ ಕೌಶಿಕನದಿಯ ದಂಡೆಯಲ್ಲಿ ದರ್ಭೆಯನ್ನು ಆರಿಸುತ್ತಿದ್ದ ಶಮೀಕಪುತ್ರನಿಗೆ ಈ ವೃತ್ತಾಂತವನ್ನು ತಿಳಿಸಿದನು. ಇದನ್ನು ಕೇಳಿ ಆ ಋಷಿಕುಮಾರನು ಕ್ರೋಧಾವಿಷ್ಟನಾಗಿ, 'ಅಹೋ, ಎಂಥ ಅಧರ್ಮವಿದು ಕ್ಷತ್ರಿಯರು ಬ್ರಾಹ್ಮಣರ ದ್ವಾರಪಾಲಕರು ಕಾವಲಿಟ್ಟ ನಾಯಿ ಹವಿಸ್ಸನ್ನು ಭಂಜಿಸುವಂತೆ, ಈ ಅಧಮನು ನಮ್ಮಪ್ಪನಿಗೆ ಅವಮಾನ ಮಾಡಿದನಲ್ಲ! ಶ್ರೀಕೃಷ್ಣಪರಮಾತ್ಮನು ಪರಮಧಾಮಕ್ಕೆ ಹೋಗಲು, ಈ ರಾಜನು ತಮ್ಮ ಮರ್ಯಾದೆಯನ್ನು ಉಲ್ಲಂಘಿಸಿ ವರ್ತಿಸುವರಲ್ಲ! ಗೆಳೆಯರೇ, ನನ್ನ ಸಾಮರ್ಥ್ಯವನ್ನು ನೋಡಿರಿ, ಆ ಅಧಮನನ್ನು ತಕ್ಷಕವು ಇಂದಿನಿಂದ ೭ ದಿವಸಗಳಲ್ಲಿ ಕಚ್ಚಿ, ಮರಣವನ್ನುಂಟುಮಾಡುವಂತೆ ಮಾಡುವೆನು,'' ಎಂದು ಗದ್ದರಿಸಿ ಕೌಶಿಕೆಯ ಉದಕದಿಂದ ಶುಚಿಯಾಗಿ ಆಚಮನಮಾಡಿ ಬೊಗಸೆಯಲ್ಲಿ ನೀರು ತೆಗೆದುಕೊಂಡು, ದುರ್ಧರವಾದ ಶಾಪವನ್ನು ಪ್ರದಾನಮಾಡಿ ಗೆಳೆಯರನ್ನೊಡಗೊಂಡು ಮನೆಗೆ ಬಂದನು

---

1 ಈಗಲೂ ಪ್ರತಿವರ್ಷ ಭಾದ್ರಪದ ಶು|| ಅಷ್ಟಮಿಯಿಂದ ಪೌರ್ಣಿಮೆಯ ವರೆಗೆ ಭಾಗವತ ಸಪ್ತಾಹವು ಹಲವು ಪಟ್ಟಣಗಳಲ್ಲಿ ನಡೆಯುವದು ಇನ್ನು ಮುಂದೆ ಸುಧಾರಣೆಯು ಬಹು ಭರದಿಂದ ನಡೆಯುವದರಿಂದ ಕಾಲಕ್ರಮದಿಂದ ಕಟ್ಟಾಗಬಹುದು ಅದರ ಸ್ಮರಣವಾದರೂ ಉಳಿಯಲೆಂದು ಬೇಕೆಂತಲೇ ಈ ಕಥೆಯು ಕೊಡಲಟ್ಟಿದೆ

ಆಶ್ರಮದಲ್ಲಿ ತಮ್ಮ ಅಪ್ಪನನ್ನು ನೋಡುತ್ತಾನೆ, ಕೊರಳಲ್ಲಿ ಮೃತಸರ್ಪ. ದುಃಖವು ವೆಗ್ಗಳಿಸಿತು ದೊಡ್ಡ ಧ್ವನಿಯಿಂದ ಮುಕ್ತಕಂಠನಾಗಿ ರೋದಿಸಿದನು. ಇಷ್ಟರಲ್ಲಿ ಸಮಾಧಿ ಇಳಿಯುವ ಸಮಯವೂ ಪ್ರಾಪ್ತನಾಗಿತ್ತು. ಆಗ್ಗೆ ಶಮೀಕನು ಮೆಲ್ಲನೆ ಕಣ್ತೆರೆದು ಮಗನನ್ನು ನೋಡಿ, ಅಳುವ ಕಾರಣವನ್ನು ಕೇಳಿ, ತನ್ನ ಕೊರಳೊಳಗಿನ ಮೃತಸರ್ಪವನ್ನು ತೆಗೆದೊಗೆದು, "ಬಾಲ! ಇದರಿಂದ ಅಪಾಯವೇನು ಅಷ್ಟ್ಯಾಕೆ ಶೋಕಾಕುಲನಾಗಿರುತ್ತೀ''? ಎಂದು ಸಮಾಧಾನಮಾಡಿದನು ಮಗನು ತಾನು ಅರಸನಿಗೆ ಶಾಪಕೊಟ್ಟ ಸಂಗತಿಯನ್ನು ವಿವರಿಸಿ ತನ್ನ ಪೌರುಷವನ್ನು ಹೇಳಿಕೊಂಡನು ಅದನ್ನು ಕೇಳಿ, ಋಷಿಯು "ಬಾಲಕನೇ! ತಪ್ಪುಮಾಡಿದಿ ಸಣ್ಣತಪ್ಪಿಗೆ ದೊಡ್ಡಶಿಕ್ಷೆಯನ್ನು ವಿಧಿಸಿದಿ ಮೂಢಾ! ಯಾವಾತನ ರಕ್ಷಣೆಯಿಂದ ಪ್ರಜೆಗಳು ನಿರ್ಭೀತರಾಗಿ ವಾಸಮಾಡುವರೊ, ಅಂಥವನಿಗೆ ಈ ಶಾಪವು ಯುಕ್ತವೆ! ರಾಜ್ಯವು ಅರಾಜಕವಾದರೆ ಕಳ್ಳರ ಹಾವಳಿಯು ವೆಗ್ಗಳಿಸುವದು, ಪರಸ್ಪರರು ಒಡಿದಾಡಿ ಸಾಯುವರು, ದುಷ್ಟರು ಸ್ತ್ರೀಯರನ್ನೂ ಧನವನ್ನೂ ಹರಣಮಾಡುವರು ನಮ್ಮ ಯೋಗಸಾಧನೆಗೆ ವಿಘ್ನ ಒದಗುವದು, ಹೀಗಾಗಿ ಎಲ್ಲ ಪಾಪವು ನಮ್ಮನ್ನು ತಗಲುವುದು ಈ ಪರೀಕ್ಷಕರಾಜನಂತೂ ಭಾಗವತೋತ್ತಮನು, ಪ್ರಜಾರಕ್ಷಣೆಯಲ್ಲಿ ದಕ್ಷನು. ತೃಷಾರ್ತನಾಗಿ ಬಳಲಿ ಅಜ್ಞಾನದಿಂದ ಎಸಗಿದ ಅಲ್ಪಾಪರಾಧಕ್ಕೆ ಮಹತ್ತರವಾದ ಶಾಸನವನ್ನು ಯೋಚಿಸದೆ ನಿನ್ನ ಶಾಪವಂತೂ ವ್ಯರ್ಥವಾಗಲಾರದು. ಈಶಸಂಕಲ್ಪಕ್ಕೇ ಈ ಮಾತು ಒಪ್ಪಿತವಾದಂತೆ ತೋರುತ್ತದೆ. ನಿವಾರಣೋಪಾಯವನ್ನು ಆತನೇ ತನಗೆ ಸರಿದೋರಿದಂತೆ ಮಾಡಿಕೊಳ್ಳಲಿ ಈ ಸಂಗತಿಯನ್ನಷ್ಟು ಅವನಿಗೆ ಹೇಳಿಕಳಿಸೋಣ,'' ಎಂದು ಆಲೋಚಿಸಿ, ಶಿಷ್ಯರನ್ನು ಕರೆದು, ಹಸ್ತಿನಾವತಿಗೆ ಹೇಳಿಕಳುಹಿದನು.

ಅತ್ತ ರಾಜನೂ ತನ್ನ ಕೃತಿಗೆ ಪಶ್ಚಾತ್ತಾಪಪಟ್ಟು ಹಳಹಳಿಸುತ್ತಿದ್ದನು. ಇಷ್ಟರಲ್ಲಿ ಋಷಿಯ ಶಿಷ್ಯರು ಬಂದು ನಡೆದ ವೃತ್ತಾಂತವನ್ನು ಸಾಂಗವಾಗಿ ವಿವರಿಸಿದರು ಕೂಡಲೆ ರಾಜನು ಸರ್ವಸಂಗಪರಿತ್ಯಾಗಮಾಡಿ, ಬ್ರಹ್ಮಾವತರಕ್ಕೆ ಹೋಗಿ ಅಲ್ಲಿ ಪ್ರಾಯೋಪವೇಶಕ್ಕೆ ಕುಳಿತನು. ಇದನ್ನು ಕೇಳಿ ನೆರೆಹೊರೆಯ ಅನೇಕ ಋಷಿಗಳು ಅಲ್ಲಿಗೆ ಬಂದರು ಇದೇ ಸಮಯಕ್ಕೆ ಸಾಧುವರ್ಯರಾದ ಶುಕಾಚಾರ್ಯರು ಅಲ್ಲಿಗೆ ಬಂದು ಭಾಗವತ ಸಂಹಿತೆಯನ್ನು ಆಮೂಲಾಗ್ರವಾಗಿ ಏಳುದಿವಸ ಉಪದೇಶಿಸಿದರು. ಇದೇ ಭಾಗವತಸಪ್ತಾಹದ ಮೂಲವು 2 ರಾಜನು, ಶಾಪಪ್ರಭಾವದಿಂದ ಸರ್ಪದಷ್ಟನಾಗಿ, ಪರಮಾತ್ಮಧ್ಯಾನದಲ್ಲಿಯೇ ಮೃತರಾಗಿ ಮುಕ್ತಿಯನ್ನೈದಿದನು

---

2 ಆಗಿನ ಪ್ರವಾಸಿಕರು ಈಗಿನವರಂತೆ ಲಾಟರ ಬ್ಯಾಗುಗಳನ್ನು ಸಂಗಡ ಒಯ್ಯುತ್ತಿರಲಿಲ್ಲ ; ಬತ್ತಳಿಕೆಯ ಚೀಲಗಳನ್ನು ಮಾತ್ರ ಹೆಗಲಿಗೆ ಹಾಕಿಕೊಂಡು ಹೋಗುತ್ತಿದ್ದರು

# ಪಕ್ಷಿಗಳ ಪ್ರಪಂಚ

---

ಪಕ್ಷಿಗಳ ಪ್ರಪಂಚದಲ್ಲಿ ಪೆಲಿಕಾನ್ ಎಂಬುದೊಂದುಂಟು. ಅದಕ್ಕೆ ಒಂದು ಮೊಳದುದ್ದ ಕೊಕ್ಕು ಅದರ ಕೆಳಗಡೆ ಜೋಲಾಡುತ್ತಿರುವ ಒಂದು ಚೀಲ ನೋಡಿದರೆ ನಗುಬರುವಂತಹ ರೂಪ ಆದರೆ ಮೀನು ಹಿಡಿಯುವುದರಲ್ಲಿ ಈ ಹಕ್ಕಿಯನ್ನು ಬಿಟ್ಟರೆ ಇಲ್ಲ

ಈ ಹಕ್ಕಿಯು ಮಿಕ್ಕ ಹಕ್ಕಿಗಳಂತೆ ತನ್ನ ಮರಿಗಳಿಗೆ ಆಹಾರವನ್ನು ಕೊಡುವುದಕ್ಕೆ ಬದಲಾಗಿ ತನ್ನ ಕೊಕ್ಕಿನ ಕೆಳಗಿರುವ ಚೀಲದಿಂದ ರಕ್ತವನ್ನು ಮರಿಗಳಿಗೆ ಹುಯಿದು ಬೆಳಸುವುದು ಎಂದು ಒಂದು ವದಂತಿಯಿತ್ತು ಈಚೆಗೆ ಅನೇಕ ಪರೀಕ್ಷೆಗಳು ನಡೆದು ಅವುಗಳ ಗುಟ್ಟೆಲ್ಲವೂ ತಿಳಿದಿದೆ ಈ ಪೆಲಕಾನ್ ಹಕ್ಕಿಗಳು ನೋಡುವುದಕ್ಕೆ ಹಾಗೆ ಮೊದ್ದು ಮೊದ್ದಾಗಿ ಕಂಡರೂ ಅವುಗಳ ತುಪ್ಪಳವು ಬಲು ಸೊಗಸಾದುದು. ಮತ್ತು ಆ ಹಕ್ಕಿಯು ಬಹಳ ಜಾಗರೂಕವಾದ ಪ್ರಾಣಿ ಮೋಸಮಾಡಿ ಇದನ್ನು ಹಿಡಿಯುವುದಕ್ಕೆ ಸಾಧ್ಯವಿಲ್ಲ. ಸಾಮಾನ್ಯವಾಗಿ ಹಕ್ಕಿಗಳಿರುವುದೆಲ್ಲ ಪೆಸಿಫಿಕ್ ಸಾಗರದಲ್ಲಿರುವ ಪೈಂಗ್ವಿನ್ ದ್ವೀಪದಲ್ಲಿ ಈ ದ್ವೀಪವು ಅಷ್ಟು ವಿಸ್ತಾರವಾಗಿಲ್ಲ ಅಲ್ಲಿ ಕಲ್ಲುಗಳು ಬಹಳ ಹೆಚ್ಚು. ಜತೆಗೆ ಅಸಂಖ್ಯಾತವಾದ ಮೊಲಗಳು ಈ ಮೊಲಗಳು ಅದು ಹೇಗೆ ಆ ದ್ವೀಪಕ್ಕೆ ಬಂದುವೋ ದೇವರಿಗೆಗೊತ್ತು ಅಲ್ಲಿ ಅದು ಏನು ಬೆಳೆಯುವುದೋ ಅದು ಏನನ್ನು ತಿಂದು ಆ ಮೊಲಗಳು ಬದುಕಿರುವುವೋ ಅದೂ ಕೂಡ ಮನುಷ್ಯಮಾತ್ರಕ್ಕೆ ತಿಳಿಯದು. ಆ ದ್ವೀಪವನ್ನು ಹುಡುಕಿದರೆ ಒಂದು ಸೇರಿನಷ್ಟಾದರೂ ಸಿಹಿನೀರು ಸಿಕ್ಕುವುದಿಲ್ಲ ಇಂಥ ದ್ವೀಪದಲ್ಲಿ ಈ ಹಕ್ಕಿಯು ಗೂಡು ಕಟ್ಟಿ ಮರಿಮಾಡುವುದು

ಕಲ್ಲು ಬಂಡೆಗಳ ಸಂದಿನಲ್ಲಿ ಈ ಹಕ್ಕಿಯು ಗೂಡುಕಟ್ಟುತ್ತದೆ ಆ ಗೂಡುಗಳಲ್ಲಿ ಆಗತಾನೇ ಹುಟ್ಟಿದ ಮರಿಗಳಿಂದ ಹಿಡಿದು ಎದ್ದು ಓಡಾಡುತ್ತಿರುವ ಮರಿಗಳ ವರೆಗೂ ಇರುವುವಂತೆ ಅಲ್ಲಿ ದೊಡ್ಡ ಹಕ್ಕಿಗಳು ಮೀನುಗಳನ್ನು ತೆಗೆದುಕೊಂಡುಹೋಗಿ ತುಂಬಿ ರುವವಂತೆ ಆ ಮೀನಿನ ವಾಸನೆಗೆ ಮೂಗಿನ ಸೆಲೆಯು ಒಡೆದು ಹೋಗುವ ಹಾಗಿರುವು ದಂತೆ. ಆ ಮರಿಗಳು ಆ ಮೀನುಗಳನ್ನು ತಿಂದು ಬದುಕುವುವು ಮರಿಗಳೂ ಕೂಡ ದೊಡ್ಡ ಹಕ್ಕಿಗಳಂತೆಯೇ ಉದ್ದವಾದ ಕೊಕ್ಕು ಕೊಕ್ಕಿನ ಕೆಳಗೆ ಚೀಲ, ಎಲ್ಲವನ್ನು ಹೊಂದಿರುತ್ತವೆ. ಅವು ನೋಡುವುದಕ್ಕೆ ಬಹು ಗಂಭೀರವಾಗಿರುತ್ತವೆ ಮೊದಲು ಮೊದಲು ಬಹು ನಿರ್ಭಯವಾಗಿರುವಂತೆ ನಟಿಸಿದರೂ ಒಂದು ಗಳಿಗೆ ಬೆಂಬಳಗಾಗಿ ಇತರ ಪಕ್ಷಿಗಳಂತೆಯೇ ಅವೂ ಹೆದರಿಕೊಂಡು ಮನುಷ್ಯನ ಕೈಗೆ ಸಿಕ್ಕದೆ ಓಡಿಹೋಗುತ್ತದೆ.

# ಇಂಗ್ಲಾಂಡಿನ ದೊರೆ ಎಡ್ವರ್ಡ್‌ಗಳು

ಇಂಗ್ಲಾಂಡು ಸುಮಾರು ೯೦೦ ವರ್ಷಗಳ ಕೆಳಗೆ ನಾರ್ಮನ್ನರ ವಶವಾಯಿತು. ಅಂದಿನಿಂದ ಇಂಗ್ಲೆಂಡಿನ ದೊಡ್ಡತನವು ಬೆಳೆಯುತ್ತಲೇ ಬಂದಿದೆ. ಮತ್ತು ಅಂದಿನಿಂದ ಇದುವರೆಗೂ ಯಾವ ಶತ್ರುಗಳೂ ಇಂಗ್ಲೆಂಡಿನ ಭೂಮಿಯ ಮೇಲೆ ಪದಾರ್ಪಣಮಾಡಿಲ್ಲ ಹಿಂದೆ ಸ್ಪೈನ್‌ದೊರೆಯೊಬ್ಬನು ಇಂಗ್ಲೆಂಡನ್ನು ಜಯಿಸಬೇಕೆಂದು ನೂರಾರು ಹಡಗುಗಳನ್ನು ಜೊತೆಮಾಡಿಕೊಂಡು ಹೊರಟನು ಆದರೆ ಸಮುದ್ರದಲ್ಲಿ ಬಿರುಗಾಳಿಯೆದ್ದು ಆ ಹಡಗುಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿ ಹೋಯಿತು ಇಂಗ್ಲೆಂಡಿಗೆ ಸಂಭವಿಸಿದ್ದ ವಿಪತ್ತು ದೂರವಾಯಿತು ಎರಡನೆಯ ಸಲ ನೆಪೋಲಿಯನ್ನನು ಫ್ರಾನ್ಸಿನಿಂದ ಇಂಗ್ಲೆಂಡಿಗೆ ದೋಣಿಗಳ ಸೇತುವೆಯನ್ನು ಕಟ್ಟಿ ಪದಾತಿ ಸೈನ್ಯವನ್ನು ತೆಗೆದುಕೊಂಡುಹೋಗಿ ಇಂಗ್ಲೆಂಡನ್ನು ಗೆಲ್ಲಬೇಕು ಎಂದು ಹವಣಿಸಿದನು. ಅದೂ ನಡೆಯಲಿಲ್ಲ ಅಂತೂ ಬ್ರಿಟಿಷ ಜನಾಂಗವು ಸೋತು ಗೆದ್ದಿರುವ ಯುದ್ಧಗಳೆಲ್ಲ ಇಂಗ್ಲೆಂಡಿನ ಹೊರಗೇ ಹೊರತು ಇಂಗ್ಲೆಂಡಿನ ನೆಲದ ಮೇಲೆ ಇಲ್ಲವೇ ಇಲ್ಲ

ಈ ಒಂಭೈನೂರು ವರ್ಷಗಳಿಂದ ಇಂಗ್ಲೆಂಡಿನಲ್ಲಿ ಎಡ್ವರ್ಡ್ ಎಂಬ ಹೆಸರಿನ ಏಳು ಜನ ದೊರೆಗಳು ಆಳಿದ್ದಾರೆ ಈಗ ಎಂಟನೆಯ (ಎಡ್ವರ್ಡ್ ಬಂದಿದ್ದಾರೆ ಈ ಏಳು ಜನರೂ ಒಂದಲ್ಲ ಒಂದು ರೀತಿಯಲ್ಲಿ ಪ್ರಸಿದ್ಧರು ಒಬ್ಬ ಎಡ್ವರ್ಡನು ಐವತ್ತು ವರ್ಷಗಳು ರಾಜ್ಯಭಾರಮಾಡಿದನು ಇನ್ನೊಬ್ಬ ಎಡ್ವರ್ಡನು ಕೆಲವು ಗಂಟೆಗಳ ಕಾಲಮಾತ್ರ ದೊರೆಯಾಗಿದ್ದನು ಮೊದಮೊದಲಿನ ಎಡ್ವರ್ಡಗಳೆಲ್ಲ ಯುದ್ಧಪ್ರಿಯರು ರಣಶೂರರು ಏಳನೆಯ ಎಡ್ವರ್ಡಿಗೆ ಶಾಂತಿಸ್ಥಾಪಕನೆಂಬ ಬಿರುದು ಆತನಿಗೆ ಇದ್ದಷ್ಟು ವಿಸ್ತಾರವಾದ ರಾಜ್ಯ ಇನ್ನಾವ ಎಡ್ವರ್ಡಿಗೂ ಇರಲಿಲ್ಲ ಎಡ್ವರ್ಡ್ ಎಂದರೆ ಶ್ರೀಮಂತನಾದ ಅಂಗರಕ್ಷಕ ಎಂದು ಹಳೆಯ ಇಂಗ್ಲಿಷಿನಲ್ಲಿ ಅರ್ಥವಂತೆ.) ಏಳನೆಯ ಎಡ್ವರ್ಡಿಗೆ ಈ ಹೆಸರು ಅನ್ವರ್ಥವಾಗಿತ್ತು ಬ್ರಿಟಿಷ್ ಚಕ್ರಾಧಿಪತ್ಯವನ್ನು ಅವನಿಗಿಂತಲೂ ಚೆನ್ನಾಗಿ ಕಾಪಾಡಿದವರಿಲ್ಲ

ಮೊದಲನೆಯ ಎಡ್ವರ್ಡನು ಕ್ರಿ ಶ. ೧೨೭೨ ರಲ್ಲಿ ಪಟ್ಟಕ್ಕೆ ಬಂದು ೧೩೦೭ರ ವರೆಗೂ ಆಳಿದನು ಅವನೇ ಮೊದಲು ಇಂಗ್ಲೆಂಡನ್ನು ಒಂದು ರೂಪಕ್ಕೆ ತಂದವನು. ಅವನ ಕಾಲದವರೆಗೂ ವೇಲ್ಸ್ ಸ್ವತಂತ್ರವಾಗಿತ್ತು. ಅದನ್ನು ಅವನು ಗೆದ್ದು ಸ್ಕಾಟೆಂ

ಡನನ್ನೂ ಗೆಲ್ಲುವುದಕ್ಕೆ ಯತ್ನಿಸಿದನು. ಅವನು ಶೂರನಾಗಿದ್ದಂತೆಯೇ ರಾಜ್ಯಭಾರ ವಿಚಕ್ಷಣನೂ ಹೌದು.

ಅವನ ಮಗನೇ ಎರಡನೆಯ ಎಡ್ವರ್ಡ. ಅವನು ಬುದ್ಧಿವಂತನಾದರೂ ಶಕ್ತನಲ್ಲ. ಅವನು ಯಾವನೋ ಒಬ್ಬನಿಗಾಗಿ ತನ್ನ ಶ್ರೀಮಂತರೊಡನೆ ಜಗಳವಾಡಿದನು ಅದರ ಫಲವಾಗಿ ರಾಜನಧಿಕಾರವು ಕಡಿಮೆಯಾಯಿತು ಜೊತೆಗೆ ಸ್ಕಾಟ್ಲೆಂಡಿನ ಯುದ್ಧದಲ್ಲಿ ದಲ್ಲಿ ಸೋತು ಸಂಧಿಯನ್ನು ಮಾಡಿಕೊಂಡುದೂ ಕಾರಣವಾಗಿ, ಪ್ರಜೆಗಳು ದಂಗೆಯೆದ್ದು ಅವನನ್ನು ರಾಜ್ಯದ್ರೋಹಿಯೆಂದು ಮೂಲೆಗೆ ತಳ್ಳಿ ಅವನ ೧೫ ವರ್ಷದ ಮಗನಿಗೆ ಪಟ್ಟ ಕಟ್ಟಿದರು: ಹಿಂದಿನ ದೊರೆಯ ಶತ್ರುಗಳು ಅವನನ್ನು ಗುಪ್ತವಾಗಿ ವಧೆಮಾಡಿದರು

ಎಡ್ವರ್ಡ್ (ಮೂರನೆಯವನು) ಐವತ್ತು ವರ್ಷಗಳು ರಾಜ್ಯವಾಳಿದನು. ಅವನು ಪಟ್ಟಕ್ಕೆ ಬರುತ್ತಿದ್ದ ಹಾಗೆಯೇ ಒಂದು ಭಾರಿಯ ಯುದ್ಧವು ಆರಂಭವಾಯಿತು. ಸ್ಕಾಟ್ಲೆಂಡಿನ ಮೇಲೆ ಮೂರು ಯುದ್ಧಗಳು ಫ್ರಾನ್ಸಿನೊಡನೆ ಮತ್ತೊಂದು "ಶತಮಾನ ಯುದ್ಧ" ಹೂಡಿದನಿವನು (ಫ್ರಾನ್ಸಿನೊಡನೆ ನಡೆದ ಈ ಯುದ್ಧವು ಒಂದು ನೂರು ವರ್ಷಗಳು ನಡೆಯಿತು. ಅದರಿಂದ ಅದಕ್ಕೆ ಶತಮಾನಯುದ್ಧವೆಂದು ಹೆಸರು) ಈತನ ಮಗನಿಗೆ ಬ್ಲಾಕ್‌ಪ್ರಿನ್ಸ್ ಎಂದರೆ ಕರೀರಾಜಕುಮಾರನೆಂದು ಹೆಸರು. ಇವನು ಬಹಳ ಶೂರನು ಇವನು ಹೋದಹೋದ ಯುದ್ಧಗಳಲ್ಲೆಲ್ಲಾ ಈತನಿಗೇ ಜಯವಾಗುತ್ತಿತ್ತಂತೆ ಫ್ರಾನ್ಸಿನ ಉಣ್ಣೆಯ ವ್ಯಾಪಾರವನ್ನು ಕಿತ್ತುಕೊಳ್ಳುವುದಕ್ಕಾಗಿ ಈ ಯುದ್ಧವು ಆರಂಭವಾದುದು ಎನ್ನಬಹುದು. ಈ ಕಾಲದಲ್ಲಿಯೇ ಬ್ರಿಟಿಷ ಜನಾಂಗವು 'ಕೋಮಟಿಗಳ ಕೂಟ" "Nation of Shopkeepers" ವಾಗುವುದಕ್ಕೆ ಆರಂಭವಾದುದು ಹಾಗೆಯೇ ಅದುವರೆಗೂ ಕ್ಯಾಥೊಲಿಕ್ ಆಗಿದ್ದ ಬ್ರಿಟಿಷ್ ಜನಾಂಗವು ಪ್ರೊಟೆಸ್ಟೆಂಟ್ ಆಗುವುದಕ್ಕೆ ಆರಂಭಿಸಿತು.

ಈ ಮೂರನೆಯ ಎಡ್ವರ್ಡನೂ ಇವನ ಮಗನೂ ಇಬ್ಬರೂ ಒಂದೇ ತಿಂಗಳೊಳಗಾಗಿ (೧೩೭೭) ಮೃತರಾದರು ಮುಂದೆ ನೂರುವರ್ಷಗಳ ವರೆಗೂ ಎಡ್ವರ್ಡ್ ಎಂಬ ಹೆಸರಿನವರು ಯಾರೂ ಬರಲೇ ಇಲ್ಲ ಮುಂದೆ ಹದಿನೈದನೆಯ ಶತಮಾನದಲ್ಲಿ (೧೪೬೧) ನಾಲ್ಕನೆಯ ಎಡ್ವರ್ಡ ದೊರೆಯಾಗಿ ಬಂದನು ದೇಶದಲ್ಲಿ ಎಲ್ಲೆಲ್ಲಿಯೂ ಯುದ್ಧಗಳು. ರಾಜಮನೆತನದಲ್ಲಿ ಒಡಹುಟ್ಟಿ ಎರಡು ಗುಂಪಾಗಿ ಇಬ್ಬರೂ ಹೊಡೆದಾಡುವುದಕ್ಕೆ ಆರಂಭಿಸಿದ್ದರು ಎಡ್ವರ್ಡನು ಸ್ವೇಚ್ಛೆಯಾಗಿದ್ದ ಸ್ವತಂತ್ರ ಪುರುಷ ಅವನು ರಾಜ್ಯವಾಳುವುದರಲ್ಲಿಯೂ ಯಾರನ್ನೂ ಲಕ್ಷಿಸುತ್ತಿರಲಿಲ್ಲ ಅವನು ತನ್ನ ಆಶ್ರಿತರಿಗೆ ಬೇಕಾದ ಹಾಗೆ ಕೊಡುತ್ತಿದ್ದನು ಅವನ ಕಾಲದಲ್ಲಿಯೇ ಕ್ಯಾಕ್ಸ್ಟನ್ ಎಂಬುವನು ಮುದ್ರಣಾಲಯವನ್ನು ಆರಂಭಿಸಿದುದು. ಆ ಮೇಲೆಯೇ ಇಂಗ್ಲಿಷಿನಲ್ಲಿ ಪುಸ್ತಕಗಳು ಆರಂಭವಾದುದು ಇವನು ಇಪ್ಪತ್ತೆರಡುವರ್ಷಗಳು ರಾಜ್ಯಭಾರಮಾಡಿದನು ಇವನ ಕಾಲ

ದಲ್ಲಿ ಇಂಗ್ಲೆಂಡಿಗೂ ಇಂಡಿಯಕ್ಕೂ ಬಾಂಧವ್ಯವು ಆರಂಭಿಸಿತು. ಥಾಮಸ್ ಸ್ಟೀವರ್ನ್ಸ್ ಎಂಬುವನು ೧೫೭೯ರಲ್ಲಿ ಗೋವಾಕ್ಕೆ ಬಂದನು.

ಇವನ ಮಗನು ಐದನೆಯ ಎಡ್ವರ್ಡ್ ಎಂಬ ಹೆಸರಿನಿಂದ ದೊರೆಯಾದನು. ಆಗ ಅವನಿಗೆ ಹದಿಮೂರುವರ್ಷ. ಇವನನ್ನು ಶತ್ರುಗಳು ಒಂದು ವರ್ಷದೊಳಗಾಗಿ ಹೊಡೆದು ಹಾಕಿಬಿಟ್ಟರು: ಮತ್ತೆ ಅರವತ್ತು ವರ್ಷಗಳ ಮೇಲೆ ೧೫೪೭ ರಲ್ಲಿ ಇನ್ನೊಬ್ಬ ಎಡ್ವರ್ಡನು ದೊರೆಯಾದನು ಅವನು ಐದಾರುವರ್ಷಗಳು ಬದುಕಿದ್ದು ಮೃತನಾದನು

ಅಲ್ಲಿಂದ ಮತ್ತೆ ೩೫೦ ವರ್ಷಗಳ ವರೆಗೆ ಎಡ್ವರ್ಡ್ ಹೆಸರಿನವರು ಯಾರೂ ಪಟ್ಟಕ್ಕೆ ಬರಲಿಲ್ಲ ಏಳನೆಯ ಎಡ್ವರ್ಡನು ಅರಸಾಗುವ ವೇಳೆಗೆ ಬ್ರಿಟಿಷ್ ಸಾಮ್ರಾಜ್ಯವು ಪ್ರಪಂಚದ ಐದನೆಯ ಒಂದು ಭಾಗವನ್ನು ರಾಜ್ಯವನ್ನು ಆಕ್ರಮಿಸಿ, ತಾನೇತಾನಾಗಿತ್ತು ಈತನು ಚಕ್ರವರ್ತಿಯೆನ್ನಿಸಿಕೊಂಡನು ಇಂಡಿಯದ ಸಾರ್ವಭೌಮನಾದನು. ಈತನೇ ಈಗಿನ ದೊರೆಗಳೂ ಸಾರ್ವಭೌಮರೂ ಆದ ಎಂಟನೆಯ ಎಡ್ವರ್ಡ್ ಪ್ರಭುವಿನ ತಂದೆಯ ತಂದೆ ಎಂದರೆ ತಾತ

## ಪುನರ್ಜನ್ಮಗಳ ಕಥೆ.

ದೆಹಲಿಯಲ್ಲಿ ಶಾಂತಿಯೆಂಬ ಒಂಭತ್ತುವರುಷದ ಹುಡುಗಿಗೆ ತನ್ನ ಜನ್ಮಾಂತರದ ನೆನೆಪು ಬಂದಿದೆ ಅವಳು ತನ್ನ ಹಿಂದಿನ ಜನ್ಮದ ಗಂಡನನ್ನು ಮಕ್ಕಳನ್ನೂ ಅತ್ತೆ ಮಾವಂದಿರನ್ನೂ ಗುರ್ತಿಸಿದ್ದಾಳೆ

o o o o o o o o o

ಈಚೆಗೆ ಫತ್ತೆಫರದಿಂದ ಒಬ್ಬ ಆಹರಿ (ಕೀಳುಜಾತಿ) ಹುಡುಗಿಗೆ ತನ್ನ ಜನ್ಮಾಂತರದ ನೆನೆಪು ಬಂದಿದೆ. ಆ ಹುಡುಗಿಗೆ ಇನ್ನೂ ನಾಲ್ಕುವರುಷ. ಅವಳ ತಂದೆತಾಯಿಗಳು ಅವಳಿಗೆ ಭಗವತಿ ಎಂದು ಹೆಸರಿಟ್ಟರು ಅವಳಿಗೆ ಆ ಹೆಸರು ರುಚಿಸಲಿಲ್ಲ ಅವಳು ನನ್ನ ಹೆಸರು ಶಾಂತಿ ನನಗೆ ಭೋಲ್ಪುರದಲ್ಲಿ ಮದುವೆಯಾಗಿದೆ ನನಗೆ ಇಬ್ಬರು ಮಕ್ಕಳೂ ಒಬ್ಬಳು ಮಗಳೂ ಇದ್ದಾರೆ ಎಂದು ಹೇಳಿದಳು

ಅವಳನ್ನು ಆ ವೂರಿಗೆ ಕರೆದುಕೊಂಡುಹೋದರು ಅವಳು ತನ್ನ ಹಿಂದಿನ ಮನೆಯನ್ನು ಗುರ್ತಿಸಿದಳು ಮನೆಯವರನ್ನೆಲ್ಲ ಗುರ್ತಿಸಿದಳು ಮಗಳನ್ನು ಗಂಗಾದೇವಿಯೆಂದು ಹೆಸರಿಡಿದು ಕೂಗಿದಳು ಈಗ ಆ ಹುಡುಗಿಗೆ ಆಹಿರಜಾತಿಯ ತಂದೆತಾಯಿಗಳೊಡನೆ ಇರಲು ಇಷ್ಟವಿಲ್ಲ ಗೋಳೋ ಎಂದು ಅಳುತ್ತಾಳೆ ಅವಳು ಜ್ವರಬಂದು ತನ್ನ ೭ನೆಯ ವಯಸ್ಸಿನಲ್ಲಿ ಮೃತಳಾದಳು ಅವಳು ತನ್ನ ಹಿಂದಿನ ಜನ್ಮದಲ್ಲಿ ಸತ್ತು ೪ ವರ್ಷ ೭ ತಿಂಗಳಾಗಿದೆ ಈಗ ಆ ಮಗುವಿಗೆ ೩ ವರ್ಷ ೮ ತಿಂಗಳು

ಇದರಂತೆಯೇ ವಿಚಿತ್ರವಾದ ಇನ್ನೊಂದು ವೃತ್ತಾಂತ ಬಂದಿದೆ ಅದು ಬಂದಿರುವುದು ಯೂರೋಪಿನಲ್ಲಿರುವ ಬುಡಾಪೆಸ್ಟಿನಿಂದ ಅಲ್ಲಿ ಒಬ್ಬ ಎಂಜನಿಯರು ಅವನಿಗೆ ಇರಿಸ ಫರ್‌ಗಜಾಡಿ ಎಂಬ ೧೫ ವರ್ಷದ ಮಗಳು ಅವಳಿಗೆ ಇನ್‌ಫ್ಲುಯೆಂಜಾ ಬಂದಿತು. ಡಾಕ್ಟರುಗಳು ಎಷ್ಟು ಚಿಕಿತ್ಸೆಮಾಡಿದರೂ ವಾಸಿಯಾಗುವ ಗುರುತು ತೋರಲಿಲ್ಲ ಒಂದು ದಿನ ರೋಗವು ತೀವ್ರವಾಗಿ ಅವಳು ಸತ್ತೇಹೋದಳು ಎಂದು ಎಲ್ಲರೂ ಭಾವಿಸಿದರು

o o o o o o o o o

ಇದ್ದಕ್ಕಿದ್ದ ಹಾಗೆಯೇ ಅವಳು ಎದ್ದು ಕುಳಿತಳು ಆದರೆ ಅವಳು ಮೊದಲಿನ ಹುಡುಗಿಯಲ್ಲ ಬದಲಾವಣೆಯಾಗಿ ಹೋಗಿದ್ದಿತು ಅವಳಿಗೆ ತಂದೆತಾಯಿಗಳ ಗುರುತೂ ಸಿಕ್ಕಲಿಲ್ಲ ಅವಳಿಗೆ ಹಂಗೇರಿಯನ್ ಭಾಷೆಯೇ ಬರದು ಅವಳಾಡಿದ ಭಾಷೆ ಸ್ಪ್ಯಾನಿಷ್ ಅವಳು ನನ್ನ ಹೆಸರು ಲೂಸಿಯಾ ಅಲ್ಟರೆಸ ಡಿಸಾಲ್ವಿಯೋ ನನ್ನ ಗಂಡನು ಮ್ಯಾಡ್ರಿಡ (ಸ್ಪೈಯಿನ್ ರಾಜಧಾನಿ)ನಲ್ಲಿದ್ದಾನೆ ನನಗೆ ಹದಿನಾಲ್ಕು ಜನ ಮಕ್ಕಳಿದ್ದಾರೆ. ನನಗೆ ನಾಲ್ವತ್ತು ವರ್ಷ ಕೆಲವು ದಿನಗಳ ಹಿಂದೆ ನನಗೆ ಸಾಯುವಂತೆ ಆಯಿತು ಏನಾಯಿತೋ ಏನೋ ಇಲ್ಲಿಗೆ ಬಂದಿದ್ದೇನೆ ಹೇಗೆ ಬಂದೆನೋ ನನಗೆ ತಿಳಿಯದು ಎಂದಳು ಇದು ನಡೆದುದು ೧೯೩೩ರಲ್ಲಿ ಆಗಿನಿಂದಲೂ ಅವಳು ಸ್ಪ್ಯಾನಿಷ ಆಡುತ್ತಿದ್ದಾಳೆ

ಆ ಹುಡುಗಿಯ ತಂದೆತಾಯಿಗಳು ಸ್ಪ್ಯಾನಿಷ ಕಲಿತುಕೊಂಡು ಅವಳಿಗೆ ಹಂಗೇರಿಯನ್ ಕಲಿಸಬೇಕಾಗಿಬಂತು ಅವಳು ಸ್ಪ್ಯಾನಿಷ ಹಾಡುಗಳನ್ನು ಹಾಡುತ್ತಾಳೆ ಖಾಯಿಲೆಗೆ ಮುಂಚೆ ಅವಳಿಗೆ ಸ್ಪ್ಯಾನಿಷ ಗಂಧವೂ ಇರಲಿಲ್ಲವಂತೆ

## ಹೊಸ ಅದ್ಭುತಗಳು

ಜರ್ಮನಿಯಲ್ಲಿ ಕೆಲವು ವಿಜ್ಞಾನಿಗಳು ಸೇರಿ ಹೊಸಜಾತಿಯ ರೈಲೊಂದನ್ನು ನಿರ್ಮಿಸಿದ್ದಾರೆ ಈ ರೈಲಿಗೆ ಕಂಬಿಗಳಿಲ್ಲ ಆಕಾಶದಲ್ಲಿ ವಿಮಾನಗಳಂತೆ ಹಾರುವುದು.

ಭಾರಿಭಾರಿಯ ಉಕ್ಕಿನ ವಿಮಾನಗಳನ್ನು ಪರ್ವತಗಳ ಮೇಲೆ ಸ್ಥಾಪಿಸಿರುವ ಭಾರಿಭಾರಿಯ ಮ್ಯಾಗ್ನೆಟ್ಟುಗಳು ಎಂದರೆ ಸೂಜಿಗಲ್ಲುಗಳು ಆಕರ್ಷಿಸುವುವು ಹೀಗೆ ಸೂಜಿಗಲ್ಲಿನ ಎಳೆತಕ್ಕೆ ಸಿಕ್ಕಿದ ಈ ಭಾರಿಯ ಗಾಡಿಗಳು ಮಿಂಚಿನ ವೇಗದಲ್ಲಿ ಓಡುವುವಂತೆ

ಇವು ಹೊರಡುವಾಗಲೂ ನಿಲ್ಲುವಾಗಲೂ ಯಾರಿಗೂ ಅಪಾಯವಾಗದಿರುವಂತೆಯೂ ಏರ್ಪಾಡುಗಳನ್ನು ಮಾಡಿದ್ದಾರೆ



# ಕೌಲೆದುರ್ಗ

ಲೇಖಕ ಜಿ ಆರ್ ಶೆಣೈ

ನಾನು ಇದುವ 'ಗೆ ನೋಡಿರುವ ದುರ್ಗಗಳಲ್ಲೆಲ್ಲಾ ತೀಥ· ಹಳ್ಳಿಯ್ಯ ಹತ್ತಿರವಿರುವ ಕೌಲೆದುಗ ವೆಂಬ ಕೋಟೆಯೇ ಬಹು ದೊಡ್ಡದು ಮತ್ತು ಚೆಲುವಾದುದು. ಕರ್ಣಾಟ ಕದಲ್ಲಿ ಇಷ್ಟು ದೊಡ್ಡದಾದ ಮತ್ತು ಸುರಕ್ಷಿತವಾದ ಗಿರಿದುರ್ಗವು ಇನ್ನೊಂದಿದೆ ಎಂದು ಹೇಳಲಾಗುವುದಿಲ್ಲ. ತೀರ್ಥಹಳ್ಳಿಗೆ ನಾನು ಹೋದಹೋದಾಗಲೆಲ್ಲ ನನಗೆ ಆ ಕೋಟೆಯ ನೆನಪು ಬಂದೇ ಬರುವುದು. ಹೀಗಾಗಿ ನಾನು ಆ ಕೋಟೆಯನ್ನು ನಾಲ್ಕು ತಡವೆ ಸಂದ ರ್ಶಿಸಿರುವೆನು ಆ ಕೋಟೆಯ ಸಾನ್ಥ. ಅದರ ಸುತ್ತಲಿನ ಗುಡ್ಡ ಕಾಡುಗಳ, ಗುಡ್ಡದ ಮೇಲಿರುವ ಗೋಡೆಗಳು, ಅಗಲವಾದ ಮಾರ್ಗಗಳು, ಎತ್ತರವಾದ ದ್ವಾರಗಳು, ಕೋ ಟೆಯ ಮೇಲಿನಿಂದ ಕಾಣುವ ಮನೋಹರ ದೃಶ್ಯ, ಇವೇ ನನ್ನನ್ನು ಇಂದಿಗೂ ಆಕಡೆಗೆ ಆಕರ್ಷಿಸುತ್ತಿವೆ ಒಮ್ಮೆ ಆ ಕೋಟೆಯನ್ನು ನೋಡಿದವನು ಅದನ್ನೆಂದೂ ಮರೆಯಲಾ ರೆನು. ತೀರ್ಥಹಳ್ಳಿಯಿಂದ ನಗರಕ್ಕೆ ಹೋಗುವ ಮಾರ್ಗವನ್ನು ಹಿಡಿದು ಆರು ಮೈಲು ನಡೆದು ಅಲ್ಲಿಂದ ಬಲಗಡೆಗೆ ತಿರುಗಿ ಒಳದಾರಿಯ ಮೇಲೆ ಕಾಡು ಹಾದಿಯಾಗಿ ಮೂರು ಮೈಲು ನಡೆದರೆ ಕೌಲೆದುರ್ಗದ ಬುಡವನ್ನು ಸೇರಬಹುದು ಇಲ್ಲವೇ ತೀರ್ಥಹಳ್ಳಿಯಿಂದ ಒಳದಾರಿಯಾಗಿಯೇ ಐದು ಮೈಲು ನಡೆದರೆ ಅಲ್ಲಿಗೆ ಹೋಗಬಹುದು. ಆ ಕೋಟೆ ಯಿಂದ ನೆಟ್ಟಗೆ ಹತ್ತು ಮೈಲು ದೂರದಲ್ಲಿಯೇ ನಗರದ ಕೋಟೆ ಇದೆ. ಆದರೆ ಹೆದ್ದಾ ರಿಯು ಹದಿನೆಂಟು ಮೈಲುಗಳಿವೆ ನಗರಕೋಟೆಯು ಬಯಲು ಕೋಟೆ ; ಗಿರಿದುರ್ಗ ವಲ್ಲ. ಕೌಲೆದುರ್ಗವು ಗಿರಿದುರ್ಗ ಎತ್ತರವಾದ ಗುಡ್ಡದ ಮೇಲಿರುವುದರಿಂದ ಹಿಂದಿನ ಕಾಲದ ಪಾಳೆಯುಗಾರರಿಗೆ ಆತ್ಮರಕ್ಷಣೆಗೆ ಅನುಕೂಲವಾದ ಸ್ಥಳವಿದ್ದಿತೆನ್ನಬಹುದು

ಕೌಲೆದುರ್ಗವು ಇಕ್ಕೇರಿ ನಾಯಕರ ಕೈಕೆಳಗಿನ ಒಬ್ಬ ತುಂಡು ಪಾಳೆಯಗಾರನ ರಾಜಧಾನಿಯಾಗಿದ್ದಿತೆಂದು ಜನರು ಹೇಳುತ್ತಾರೆ ಇಕ್ಕೇರಿ ನಾಯಕರು ತಮ್ಮನ್ನು ಶತ್ರು ಗಳು ಮುತ್ತಿದಾಗ ಓಡಿ ಹೋಗಲು ಅನುಕೂಲವಾಗುವಂತೆ ನಗರದ ಕೋಟೆಯಿಂದ ಕೌಳೆದುರ್ಗದ ತನಕ ಒಂದು ಸುರಂಗವನ್ನು ಮಾಡಿಸಿರುವರೆಂದೂ, ಹೈದರನು ನಗರ ಕೋಟೆಯನ್ನು ಮುತ್ತಿದ ವೇಳೆಯಲ್ಲಿ ಇಕ್ಕೇರಿಯ ರಾಣಿಯು ಅದೇ ಸುರಂಗದ ದಾರಿ ಯಾಗಿ ಪಾರಾಗಿ ಹೋದಳೆಂದೂ ಜನರು ನುಡಿಯುತ್ತಾರೆ.

ಕೌಲೆದುರ್ಗವನ್ನು ನೋಡಿದರೆ ಅದು ಸುರಕ್ಷಿತವಾದುದೆಂದು ಖಂಡಿತವಾಗಿ ಹೇಳಬಹುದು ಅದು ಕಾರಣ ಅದನ್ನು ವಶಪಡಿಸುವುದು ಯಾರಿಂದಲೂ ಸುಲಭಸಾಧ್ಯವಾಗದಿದ್ದುದರಲ್ಲಿ ಏನೂ ಆಶ್ಚರ್ಯವಿಲ್ಲ. ಅಲ್ಲಿಯ ತುಂಡುಪಾಳೆಯಗಾರನು ಹೈದರನ ಕಾಲದ ವರೆಗೆ ರಾಜ್ಯಭಾರ ಮಾಡುತ್ತ ನೆಮ್ಮದಿಯಿಂದ ಇದ್ದನು. ಹೈದರನೊವ್ಮೆ ಅದನ್ನು ಸ್ವಾಧೀನ ಪಡಿಸಿಕೊಳ್ಳಲು ಪ್ರಯತ್ನಪಟ್ಟಾಗ ವಿಜಯಿಯಾಗದೆ ಮರಳಬೇಕಾಯಿತು ಆದರೆ ಇನ್ನೊಂದು ಸಲ ಬಂದು ಮೋಸದಿಂದ ಅದನ್ನು ವಶಪಡಿಸಿಕೊಂಡನೆಂದು ತಿಳಿದು ಬರುತ್ತದೆ. ಅದಿಂನಿಂದ ಅಂದರೆ ಸುಮಾರು ೧೬೦ ವರ್ಷಗಳಿಂದ ಹಾಳುಬಿದ್ದಿರುವ ಈ ಕೋಟೆಯ ಸ್ಥಿತಿಯು ಹೇಗಿರಬಹುದೆಂದು ನೀವೇ ಊಹಿಸಬಹುದು. ಅಲ್ಲಿ ಹೋದವರಿಗೆ ಏನೆಲ್ಲ ನೋಡಸಿಗುವುದೆಂದು ಈ ಲೇಖನದಲ್ಲಿ ನಾನು ತಿಳಿಸುವೆನು ನಾವು ನಡೆದುಹೋದ ಮಾರ್ಗವು ಮೊದಲು ಎರಡು ಗುಡ್ಡಗಳ ನಡುವಿನಿಂದ ಹಾದು ಹೋಗುತ್ತದೆ ಈ ಗುಡ್ಡಗಳಲ್ಲೊಂದರ ಮೇಲೆ ಅಂದರೆ ಬಲಗಡೆಯ ಗುಡ್ಡದ ಮೇಲೆ ಒಂದು ಚಿಕ್ಕ ಕೋಟೆಯು ಇದೆ. ಶತ್ರುಗಳ ಬರುವಿಕೆಯನ್ನು ನಿರೀಕ್ಷಿಸುವ ಸೈನ್ಯಕ್ಕಾಗಿ ಈ ಕೋಟೆಯನ್ನು ಕಟ್ಟಿಸಿದ್ದಿರಬಹುದು ಈ ಕೋಟೆಯ ಬರೇ ಗೋಡೆಗಳು ಮಾತ್ರ ಈಗ ಕಾಣಿಸುತ್ತಿವೆ. ಈ ಕೆರೆಯಲ್ಲಿ ಯಾವಾಗಲೂ ಕಮಲಗಳಿರುವುದನ್ನು ಕಾಣಬಹುದು ಕೆರೆಯಿಂದ ಸ್ವಲ್ಪ ದೂರದಲ್ಲಿ ಹಲವು ಮಹಮದೀಯರ ಗೋರಿಗಳು ಕಾಣಸಿಗುವುವು ಅಲ್ಲಿರುವ ಎಷ್ಟೋ ಕಲ್ಲುಗಳನ್ನು ನೋಡಿದರೆ ಒಮ್ಮೆ ಹೈದರನಿಗೂ ದುರ್ಗದ ಪಾಳೆಯಗಾರನಿಗೂ ನಡೆದ ಯುದ್ಧದಲ್ಲಿ ಹಲವು ಮುಸಲ್ಮಾನರು ಮಡಿದಿರಬಹುದೆಂದು ಖಚಿತವಾಗುವುದು. ಅಲ್ಲಿಂದ ಒಂದು ಫರ್ಲಂಗು ದೂರದಲ್ಲಿ ಹಾಳುಬಿದ್ದ ಕೌಲೆದುರ್ಗದ ಪೇಟೆಯಿದೆ. ಚಿಕ್ಕಮನೆಗಳಿವೆ. ಅಂಗಡಿಗಳಿರುವುದಿಲ್ಲ ನಮಗೆ ಬೇಕಾದ ತಿಂಡಿ ಸಾಮಾನುಗಳನ್ನು ನಾವು ತೀರ್ಥಹಳ್ಳಿಯಿಂದಲೇ ಕೊಂಡೊಯ್ಯಬೇಕು ಅಲ್ಲಿ ಹಾಲು ಮಾತ್ರ ದೊರೆಯುವುದು ಅಲ್ಲಿಯ ಬಡಜನರು ಚಿಕ್ಕ ಚಿಕ್ಕ ಗುಡಿಸಲುಗಳಲ್ಲಿ ವಾಸಮಾಡುತ್ತಾರೆ

ಕೌಲೆದುರ್ಗದ ಪೇಟೆಯು ಸುಮಾರು ಎರಡು ಫರ್ಲಂಗು ಉದ್ದವಿದ್ದು ಅದರ ಕೊನೆಯಲ್ಲಿ ಮಾರಿಯಮ್ಮನ ಒಂದು ಗುಡಿಯಿದೆ. ಗುಡಿಯ ಮುಂದಿರುವ ಶಿಲಾಸ್ತಂಭದ ಬುಡದಲ್ಲಿ ಪ್ರತಿವರ್ಷವೂ ಜಾತ್ರೆಯ ಕಾಲದಲ್ಲಿ ಸಾವಿರಾರು ಕೋಳಿ, ಕುರಿ ಕೋಣಗಳು ಬಲಿಯಾಗಿ ದೇವಿಗೆ ಅರ್ಪಿಸಲ್ಪಡುವುವು ಹಿಂದಿನ ಕಾಲದಲ್ಲಂತೂ ಮನುಷ್ಯರ ಬೆನ್ನಿನ ಚರ್ಮಕ್ಕೆ ಒಂದು ಕೊಳನೆಯನ್ನು ಸಿಕ್ಕಿಸಿ ಎತ್ತರವಾದ ಕಂಬಕ್ಕೆ ತೂಗಹಾಕುವ ಶಿಡಿ ಎಂಬ ಕ್ರೂರ ಪದ್ಧತಿಯು ಇಲ್ಲಿ ಇದ್ದಿತಾದರೂ ಈಗ ಅದನ್ನು ನಿಲ್ಲಿಸಿರುವರು

ಮಾರಿಗುಡಿಯ ಹಿಂದೆ ಚಿಕ್ಕ ಮನೆಯಲ್ಲಿ ಹಿಂದಿನ ಪಾಳೆಯಗಾರರ ಕುಟುಂಬದವರು ವಾಸಿಸುತ್ತಾರೆ. ಇವರಿಗೆ ಸರ್ಕಾರದಿಂದ ಈಗಲೂ ಮಾಸಾಶನವು ದೊರೆಯುವು

ದೆಂದು ಹೇಳುತ್ತಾರೆ ಮನೆಯ ಮುಂದುಗಡೆ ಅಷ್ಟಕೋಣಾಕೃತಿಯ ಕಲ್ಲು ಕಟ್ಟಿದ ಸುಂದರವಾದೊಂದು ಕೆರೆಯಿದೆ ಈ ಕೆರೆಯ ನೀರನ್ನು ಕುಡಿಯಲು ಉಪಯೋಗಿಸ ಬಹುದು ಮಾರಿಗುಡಿಯಿಂದ ಉತ್ತರಕ್ಕೆ ನಡೆದರೆ ಕೌಲೆದುರ್ಗದ ಬುಡವನ್ನು ಸೇರಬಹುದು ಅಗಲ ಕಿರಿದಾದ ಒಂದು ಮಾರ್ಗದ ಮೇಲೆ ಕ್ರಮಿಸಿ ಹೋದಾಗ ಇಕ್ಕಡೆಗಳಲ್ಲಿಯೂ ಯಥೇಷ್ಟವಾಗಿ ಕಬ್ಬು ಬೆಳೆಯುವ ಗದ್ದೆಗಳು ಸಿಗುವುವು. ಈ ಗದ್ದೆಗಳು ಎರಡು ಫರ್ಲಾಂಗುಗಳ ವರೆಗೆ ಇವೆ. ಆ ಮೇಲೆ ಗದ್ದೆಗಳ ಬದಲು ಕಾಡು ಸಿಗುವುದು ಮಾರ್ಗದ ಎರಡು ಪಕ್ಕಗಳಲ್ಲಿಯೂ ಕಾಡು ಇದೆ ಅಲ್ಲಿಂದಲೇ ಗುಡ್ಡವನ್ನು ಏರಬೇಕು ಗುಡ್ಡದ ಮೇಲಿನ ಮಾರ್ಗಕ್ಕೆಲ್ಲ ಕಲ್ಲು ಹಾಸಿರುತ್ತಾರೆ ಅಲ್ಲಿ ಕೋಟೆಯ ಎತ್ತರವಾದ ಗೋಡೆ ಗಳು ಕಾಣುವುವು ಗೋಡೆಗಳಿಗೆ ಕೆಲವೆಡೆಗಳಲ್ಲಿ ಸಾಧಾರಣ ಕಲ್ಲನ್ನೂ ಕೆಲವೆಡೆಗಳಲ್ಲಿ ಶಿಲೆಕಲ್ಲನ್ನೂ ಉಪಯೋಗಿಸಿರುತ್ತಾರೆ

ಮೊದಲು ಸಿಗುವ ದ್ವಾರವೇ ಬಲು ಎತ್ತರವಾದುದು ಆ ದ್ವಾರದ ಎರಡು ಪಕ್ಕಗಳಲ್ಲಿಯೂ ಎರಡು ಚಿಕ್ಕ ಕೋಣೆಗಳಿವೆ ಈ ದ್ವಾರವನ್ನು ಬಿಟ್ಟು ಮುಂದೆ ಹೋದರೆ ಸುಮಾರು ಫರ್ಲಾಂಗುಗಳನ್ನು ದಾಟಿದ ಮೇಲೆ ಒಳಗಿನ ಆವರಣದ ಗೋಡೆಯು ಕಾಣುವುದು ಅಲ್ಲಿ ಇನ್ನೊಂದು ದ್ವಾರವಿದೆ ಅಲ್ಲಿಂದ ಮುಂದೆ ಏರಿಹೋಗಿ ಸುಮಾರು ೨೦ ನಿಮಿಷಗಳ ಪ್ರಯಾಣದಿಂದ ಒಂದು ಗುಡ್ಡದ ತುದಿಯನ್ನು ಸೇರುವೆವು ಅದು ಒಂದು ವಿಶಾಲವಾದ ಸ್ಥಳ ಅಲ್ಲಿಯೂ ಎತ್ತರವಾದೊಂದು ದ್ವಾರವಿದೆ. ದ್ವಾರದ ಹತ್ತಿರ ಹನುಮನ ಗುಡಿ ಆ ಗುಡಿಯ ಹೊರತು ಈ ವಿಶಾಲವಾದ ಸ್ಥಳದಲ್ಲಿ ಒಂದು ದೇವಸ್ಥಾನವಿದೆ. ದೇವಸ್ಥಾನವನ್ನು ಕಲ್ಲಿನಿಂದಲೇ ಕಟ್ಟಿಸಿರುತ್ತಾರೆ ದೇವಸ್ಥಾನವಾದರೋ ಅಷ್ಟು ದೊಡ್ಡದಲ್ಲ ಪ್ರಾಕಾರದ ಗೋಡೆಗಳು ಅಷ್ಟು ಎತ್ತರವಿಲ್ಲ. ಎದುರಿನಲ್ಲಿ ಒಂದು ಮಾನಸ್ತಂಭವಿದೆ ದೇಗುಲಕ್ಕೆ ಗೋಪುರವಿಲ್ಲ ದೇವಸ್ಥಾನದ ಮಾಡಿನ ಮೇಲೆ ನಿಂತು ನೋಡಿದರೆ ವಿಶಾಲ ವಾದೀಸ್ಥಳದ ಗಂಭೀರವಾದ ನೋಟವು ಕಾಣುವುದು ಇದು ಈಶ್ವರನ ದೇವಸ್ಥಾನ ; ಲಿಂಗಕ್ಕೆ ಪೂಜಾರಿಯೊಬ್ಬನು ಬಂದು ಪ್ರತಿದಿನವೂ ಪೂಜೆ ಮಾಡುವನಂತೆ. ದೇವಸ್ಥಾನದ ಸುತ್ತಿನಲ್ಲಿ ಅಡುಗೆಯನ್ನು ತಯಾರಿಸಲು ಅನುಕೂಲ ವಾದ ಸ್ಥಳವಿದೆ ಸುತ್ತಲೂ ಕಾಡಿನಿಂದ ಆವರಿಸಲ್ಪಟ್ಟ ಈ ಸ್ಥಳವಾದರೋ ಭೀಕರ ವಾದುದಾಗಿದೆ ಈ ಈಶ್ವರ ದೇವಸ್ಥಾನದ ಹೊರಗೆ ಸ್ವಲ್ಪ ಮೇಲಕ್ಕೆ ಹತ್ತಿಹೋದರೆ ಇನ್ನೊಂದು ಚಿಕ್ಕ ಮಂಟಪವಿರುವ ಸ್ಥಳವನ್ನು ಸೇರಬಹುದು ಇದರಲ್ಲಿಯೂ ಒಂದು ಈಶ್ವರ ಲಿಂಗವಿರುವುದು. ಇದರ ಸಮೀಪ ಕಲ್ಲಿನಿಂದಲೇ ಮಾಡಿದ ಎರಡು ಭಾವಿಗಳಿವೆ ಆರು ಅಡಿ ಚಚ್ಚೌಕವೂ ಹದಿನೈದು ಅಡಿ ಆಳವೂ ಇರುವ ಈ ಎರಡು ಭಾವಿಗಳು ಒಂದಕ್ಕೊಂದು ಹತ್ತಿರದಲ್ಲಿವೆ ಅವುಗಳ ಮೇಲ್ಭಾಗವನ್ನು ಕಲ್ಲಿನಿಂದ ಮುಚ್ಚಿರುವರು. ಒಂದೊಂದು ಚಿಕ್ಕ ಬಾಯನ್ನು ಮಾತ್ರ ಬಿಟ್ಟಿರುವರು.

ಹಿಂದಿನ ಕಾಲದಲ್ಲಿ ಈ ಭಾವಿಗಳಲ್ಲಿ ಒಂದರಲ್ಲಿ ತುಪ್ಪವನ್ನೂ ಇನ್ನೊಂದರಲ್ಲಿ ಎಣ್ಣೆಯನ್ನೂ ಸಂಗ್ರಹಿಸಿ ಇಡುತ್ತಿದ್ದರಂತೆ ಈ ಬಾವಿಯಲ್ಲಿದ್ದ ತುಪ್ಪವು ಬಲು ಪುರಾತನ ಕಾಲದ್ದಾಗಿದ್ದುದರಿಂದ ಔಷಧಿಗೆಂದು ಸುಮಾರು ಹತ್ತು ಹದಿನೈದು ವರ್ಷಗಳ ಹಿಂದಿನವರೆಗೂ ಜನರು ಕೊಂಡೊಯ್ಯುತಿದ್ದರಂತೆ ಈಗ ಈ ಬಾವಿಗಳಲ್ಲಿ ಸ್ವಚ್ಛವಾದ ನೀರು ನಿಂತಿರುತ್ತದೆ ಈ ನೀರನ್ನೇ ಅಲ್ಲಿ ಅಡುಗೆಗಾಗಿ ಉಪಯೋಗಿಸಬೇಕಾಗುವುದು.

ಈ ಮಂಟಪದಿಂದ ಸುತ್ತಲೂ ನೋಡಿದರೆ ಬಹಳ ಸುಂದರವಾದ ದೃಶ್ಯವು ಕಾಣುವುದು. ಒಂದೆಡೆ ನಾವು ಏರಿಹೋದ ಗುಡ್ಡದ ಭಾಗವು ಅದರ ಹಿಂದೆಯೇ ಇಳುಕಿನ ಮೇಲಿರುವ ಇನ್ನೊಂದು ಗುಡ್ಡ ಮತ್ತು ಕೋಟೆಯ ಶಿಖರ ಸುತ್ತಲೂ ಎತ್ತರವಾದ ಗುಡ್ಡಗಳು ಮತ್ತು ನಿರ್ಜನ ಪ್ರದೇಶ ನಾವು ಮಾತನಾಡಿದುದೇ ಪ್ರತಿಧ್ವನಿಸಿ ನಮಗೆ ಬೆರಗನ್ನುಂಟುಮಾಡುವುದು.

ಈ ಇಳುಕಿನಲ್ಲಿ ಒಂದು ಗುಡಿಸಲನ್ನು ಕಟ್ಟಿ ಒಬ್ಬ ಸನ್ಯಾಸಿಯು ವಾಸಿಸುತಿದ್ದಾನೆ ಆತನು ಯಾರೊಡನೆಯೂ ಮಾತನಾಡಲಾರನು ಏನನ್ನೂ ತೆಗೆದುಕೊಳ್ಳಲಾರನು ಆತನನ್ನು ನೋಡುವಾಗ ತುಂಬ ಸಂಚರಿಸಿದವನೆಂದು ವ್ಯಕ್ತವಾಗುತ್ತತೆ

ಈಶ್ವರನು ಗುಡಿಯನ್ನು ಬಿಟ್ಟು ಮುಂದೆ ನಡೆದರೆ ಒಂದು ದ್ವಾರವನ್ನು ಸೇರುವೆವು ಅಲ್ಲಿಂದಲೇ ಕೋಟೆಯ ಇನ್ನೊಂದು ಪ್ರಾಕಾರವು ಆರಂಭವಾಗುತ್ತದೆ ಈ ದ್ವಾರವನ್ನು ದಾಟುತ್ತಲೆ ಒಂದು ಸಮತಟ್ಟಾದ ಸ್ಥಳವಿದೆ ಇದು ಸುಮಾರು ಎರಡು ಎಕರೆ ವಿಸ್ತಾರವಾದ ಸ್ಥಳವಾಗಬಹುದು ಅಲ್ಲಿ ಮೊದಲು ಒಂದು ಅರಮನೆಯು ಇದ್ದಿರಬಹುದೆಂದು ಅದರ ಕುರುಹುಗಳಿಂದ ತಿಳಿಯುವುದು ಈಗ ಉಳಿದುದೆಂದರೆ ಅರಮನೆಯ ಕೆಲಸವೇ ಸ್ತಂಭಗಳು. ಅರಮನೆಯ ಆಕಾರವಾವುದಿದ್ದಿತೆಂಬುದನ್ನು ಕಂಡುಹಿಡಿಯಬಹದು ಒಳಗಿನ ಕೋಣೆಯಲ್ಲಿ ಒಂದು ಬಹಳ ಚೆಲುವಾದ ಬಾಯುದೆಯಾದರೂ ಅದು ಈಗ ಮುಚ್ಚಿಹೋಗಿರುವುದು ಸ್ತಂಭಗಳ ಹೊರತು ಅರಮನೆಯ ಬೇರೆ ಕುರುಹುಗಳಾವುವೂ ಉಳಿದಿಲ್ಲ.

೧೯೨೨ನೇ ಇಸವಿಗೆ ಹೋದಾಗ ಆ ಅರಮನೆಯ ಹಿಂಗಡೆಯಲ್ಲಿ ಒಂದು ಸುಂದರವಾದ ದೊಡ್ಡ ಕೆರೆಯಿದ್ದಿತು ಆ ಕೆರೆಯ ನೀರನ್ನೇ ನಾವು ಅಡುಗೆ ಮಾಡಲು ಉಪಯೋಗಿಸಿದ್ದೆವು. ಆ ಕೆರೆಯು ಕಲ್ಲಿನಿಂದಲೇ ಭವ್ಯವಾಗಿ ಕಟ್ಟಲ್ಪಟ್ಟಿದ್ದಿತು. ಕೆಳಗಿಳಿಯಲು ಮೆಟ್ಟಲುಗಳಿದ್ದುವು ಆದರ ೧೯೩೩ನೇ ಇಸವಿಯಲ್ಲಿ ಪುನಃ ನಾವು ಅಲ್ಲಿಗೆ ಹೋದಾಗ ಕೆರೆಯು ಕಾಣಸಿಗಲಿಲ್ಲ ಅದು ಮುಚ್ಚಿಹೋಗಿದ್ದಿತು ಕೆರೆಯ ಸ್ಥಾನವನ್ನು ಕೂಡಾ ಗುರುತಿಸಲು ನಮ್ಮಿಂದಾಗಲಿಲ್ಲ ಮಳೆಯ ರಭಸಕ್ಕೆ ಸಮೀಪದ ಗುಡ್ಡವು

ಕುಸಿದು ಅದರ ಮಣ್ಣು ಬಿದ್ದು ಕೆರೆಯು ಮುಚ್ಚಿಹೋಗಿರಬಹುದೆಂದು ಊಹಿಸಬಹುದಾಗಿದೆ. ಅರಮನೆಯಲ್ಲಿ ಸಿಕ್ಕಿದ ಕೆಲವು ವಿಶೇಷ ವಸ್ತುಗಳು ಮೈಸೂರಿನ ವಸ್ತು ಸಂಗ್ರಹಾಲಯದಲ್ಲಿರುವುವಂತೆ. ಅರಮನೆಯ ಸ್ಥಳದಲ್ಲೀಗ ನೀರಿಲ್ಲದ ಕೆಲವು ಬಾವಿಗಳಿವೆ ಅಲ್ಲಲ್ಲಿ ಪೊದರುಗಳು ಬೆಳೆದು ಅನೇಕ ಸ್ಥಳಗಳು ಮುಚ್ಚಿಹೋಗಿವೆ.

ಅರಮನೆಯನ್ನು ಬಿಟ್ಟು ಮುಂದೆ ನಡೆದರೆ ಕೋಟೆಯ ಒಳಗಿನ ಪ್ರಾಕಾರವು ನೋಡಸಿಗುವುದು. ಅಲ್ಲಿ ಹಲವೆಡೆಗಳಲ್ಲಿ ಅಡ್ಡಮಾರ್ಗಗಳಿವೆ. ಕೋವಿಮದ್ದನ್ನು ಹಿಡಿಸಿಡುವ ಕೋಣೆ (magazines) ಗಳಿವೆ ಅನೇಕ ಬತ್ತೇರಿ (bastions)ಗಳೂ ಅಲ್ಲಲ್ಲಿವೆ ದಾರಿಯು ಇಕ್ಕಡೆಗಳಲ್ಲಿಯೂ ದಟ್ಟವಾದ ಪೊದರುಗಳೂ ಮರಗಳೂ ಬೆಳೆದಿರುತ್ತವೆ ಹೀಗಾಗಿ ಕೋಟೆಯು ಬೇರೆ ಬೇರೆ ಭಾಗಗಳನ್ನು ನಮಗೆ ಕಾಣಲಾಗುವುದಿಲ್ಲ

ಅಲ್ಲಿಂದ ನೇರಾಗಿ ಮೂರು ಫರ್ಲಂಗ್ ಏರಿಹೋದರೆ ನಾವು ಕೋಟೆಯ ಅತಿ ಎತ್ತರವಾದ ಸ್ಥಳವನ್ನು ಸೇರುವೆವು ಅಲ್ಲಿಂದ ಗುಡ್ಡದ ಹಿಂದಿನ ಭಾಗವು ಕಾಣಸಿಗುವುದು ಅದನ್ನು ಗೋಡೆಗಳಿಂದ ಆವರಿಸಿರುತ್ತಾರೆ. ಈ ಶಿಖರದ ಮೇಲೆ ಕೆಲವು ಬಂಡೆಕಲ್ಲುಗಳಿವೆ ಒಂದು ಚಿಕ್ಕ ಮಂಟಪವೂ ಇದೆ. ಮಂಟಪದೊಳಗೆ ಈಶ್ವರಲಿಂಗವಿದೆ ಕೋಟೆಯ ಅತೀ ಎತ್ತರವಾದ ಈ ಸ್ಥಳದಿಂದ ಎಡಕ್ಕೆ ನೋಡಿದರೆ ಕೆಳಗಿನ ಈಶ್ವರ ದೇವಾಲಯವು ಕಾಣುವುದು ಪಶ್ಚಿಮಕ್ಕೆ ನೋಡಿದರೆ ಪಶ್ಚಿಮ ಘಟ್ಟಗಳ ಸಾಲು ದಿಗಂತದಲ್ಲಿ ನೀಲ ಬಣ್ಣದಿಂದ ಕಂಗೊಳಿಸುವುದು ಹಸುರು ಹಚ್ಚಗಾದ ಪ್ರದೇಶವು ಸುತ್ತಲೂ ಶೋಭಿಸುವುದು ಇಂತಹ ಎತ್ತರವಾದ ಮತ್ತು ನೋಡ ತಕ್ಕಂತಹ ಸ್ಥಳದಲ್ಲಿ ಕೋಟೆಯನ್ನು ಕಟ್ಟಿಸಿದಾತನ ಜಾಣತನವು ಶ್ಲಾಘನೀಯವಲ್ಲವೆ ? ಮೇಲಿನ ಮಂಟಪವು ಕೆಳಗಿನ ಮಂಟಪದ ಉತ್ತರ ದಿಕ್ಕಿಗಿದ್ದು ಆಕಾರದಲ್ಲಿ ಒಂದನ್ನೊಂದು ಹೋಲುತ್ತವೆ

ಈ ಮಂಟಪದ ಹತ್ತಿರವೇ ಒಂದು ಗುಹೆಯೂ ಗುಹೆಯೊಳಗೆ ಒಂದು ತಿಳಿನೀರಿನ ಕುಂಡವೂ ಇರುವುವು ಈ ಕುಂಡದೊಳಗೆ ಯಾವ ಸಮಯದಲ್ಲಾದರೂ ಎರಡಡಿ ನೀರು ನಿಲ್ಲುವುದು ಹೆಚ್ಚಾಗಲಿ ಕಡಿಮೆಯಾಗಲಿ ಆಗುವುದೇ ಇಲ್ಲವೆನ್ನುತ್ತಾರೆ ಇಷ್ಟು ಉನ್ನತವಾದ ಗುಡ್ಡದ ಮೇಲೆ ಹೀಗೆ ನೀರು ದೊರಕಿದುದು ಆಶ್ಚರ್ಯವಲ್ಲವೆ !

ಕೋಟೆಯ ನೋಡತಕ್ಕ ಇನ್ನೆಷ್ಟೋ ಭಾಗಗಳು ಈ ಗುಡ್ಡದ ಮೇಲೆ ಇರಬಹುದಾದರೂ ಅವು ಅರಣ್ಯದಲ್ಲಿ ಅಡಗಿರುವುದರಿಂದ ಅಲ್ಲಿಗೆ ನಾವು ಸುಲಭವಾಗಿ ಹೋಗಲಾರದೆ, ನೋಡುವುದು ಪ್ರಯಾಸವಾಗಿದೆ ಕ್ರೂರಮೃಗಗಳು ಸದಾ ಅಲ್ಲಿ ಇರುವುವೆಂಬುದು ನಿರ್ವಿವಾದ ಗುಡ್ಡದ ಮೇಲೆ ಯಾವಾಗಲೂ ತಂಗಾಳಿಯು ಬೀಸುವುದರಿಂದ ನಡುಮಧ್ಯಾಹ್ನದಲ್ಲಿಯೂ ಬಿಸಿಲಿನ ತಾಪದ ಅನುಭವವೇ ಅಲ್ಲಿ ಆಗುವುದಿಲ್ಲ ಇಂತಹ ಬೆಟ್ಟಗಳು ಕರ್ಣಾಟಕದಲ್ಲಿ ಹಲವು ಇವೆ ಅವುಗಳ ಪರಿಚಯವನ್ನು ನಮಗೆ ಮಾಡಿಕೊಟ್ಟರೆ ಎಷ್ಟೋ ಜನರಿಗೆ ಲಾಭವಾಗುವುದಲ್ಲವೆ ?

(ಪ್ರವಾಸಿಯಿಂದ)

# ಹಳ್ಳಿಯ ಹಾಡುಗಳು

ಇಲ್ಲಿ ಸಂಗ್ರಹಿತವಾದ ಹಳ್ಳಿಯ ಹಾಡುಗಳಲ್ಲಿ ಮಕ್ಕಳ ಮೇಲಣ ಪ್ರೇಮವು ಸ್ಪಷ್ಟವಾಗಿ ಕಂಡುಬರುತ್ತದೆ. ತಾಯಿ ಎತ್ತಿ ಮುದ್ದಿಸುವ ಮಗುವಿನ ಶೋಭೆಯನ್ನೂ ಮನೋಹರತೆಯನ್ನೂ ದೃಷ್ಟಾಂತಗೊಳಿಸುವುದಕ್ಕೆ, ಈ ಹಾಡುಗಳನ್ನು ಹಾಡುವ ತಾಯಿಗೆ ದೊರೆಯುವುದಿಲ್ಲ ಕಣ್ಣೆದುರು ಕಂಡ ಮುಗಿಲೆಡೆಯ ಎಂಚು, ಮರಕ್ಕೆ ಹಬ್ಬಿದ ಎಳೆಯ ಪಂಚಬಳ್ಳಿ ಮೊದಲಾದವುಗಳಾಗಿವೆ ಹಿರಿ ಮಗನು ತಂದೆಗೆ ಎಷ್ಟು ತಂಪಾಗಿ ತೋರುವನೆಂಬುದಕ್ಕೆ ಲೋಕಕ್ಕೆ ಚಂದ್ರ ನೊಸಲಿಗೆ ಚಂದನ ಮೊದಲಾದ ದೃಷ್ಟಾಂತಗಳೇ ಈ ತಾಯಿಗೆ ಭಾಸವಾಗುವುದು. ಬಾಲಕನ ನಗೆಯು ಚೆಲುವು, ಅಪರೂಪವಾಗಿ ಹುಟ್ಟಿ ಬೆಳೆದ ಶಿಶುವು ಎಲ್ಲಿಗೂ ಅತಿ ಚಂದವಾಗಿ ತೋರುವಿಕೆ, ಬಡವನ ಮಕ್ಕಳು ಹರದಾಡಿ ಬಂದು ಮಡಿಲಲ್ಲಿ ಕುಳಿತಾಗ ಆತನ ಬಡತನದ ಚಿಂತೆಯ ಮರವೆ, ಉಣ್ಣುವಾಗ ಉಡುವಾಗ, ಹೂ ಕೊಯ್ಯುವಾಗ, ತಾಯಿಗೆ ತನ್ನ ಮಕ್ಕಳ ನೆನಹು, ಬಲೆಗೆ ಸಿಕ್ಕಿದ ಹಕ್ಕಿಯ ಮಕ್ಕಳ (ಮರಿ ಹಕ್ಕಿಗಳ) ವಿಷಯದಲ್ಲಿ ಕನಿಕರ ಇಂತಹ ಭಾವನೆಗಳು ಈ ಹಾಡುಗಳಲ್ಲಿ ಸರಳವಾದ ರೀತಿಯಲ್ಲಿ ವ್ಯಕ್ತವಾಗಿವೆ. ಅಣ್ಣ ತಮ್ಮ ಅತ್ತಿಗೆ ಮೈದುನ ಇವರೊಳಗೆ ಪರಸ್ಪರವಾಗಿ ಎಂತಹ ಭಾವನೆಗಳು ಜಾಗ್ರತವಾಗಿರುತ್ತವೆ ಎಂಬುದೂ ಈ ಪದ್ಯಗಳಲ್ಲಿ ಕಂಡುಬರುತ್ತಿದೆ. ತಾಯಿಯ ಮನಸ್ಸಿನಲ್ಲಿ ತನ್ನ ಹೆಣ್ಣು ಮಗಳ ಮುಂದಿನ ವೈವಾಹಿಕ ಜೀವನದ ಸ್ಮರಣೆಯು ಯಾವ ಬಗೆಯ ಮನೋಭಾಗವನ್ನುಂಟು ಮಾಡುವುದೆಂಬುದು ಕೆಳಗಡೆ ಕೊಟ್ಟಿರುವ ಕಡೆಯ ಮೂರು ಪದ್ಯಗಳಲ್ಲಿ ತಕ್ಕಮಟ್ಟಿಗೆ ತೋರಿಬರುತ್ತದೆ. ಅತ್ತೆ ಒಳ್ಳೆಯವಳಾಗಿರಬೇಕು, ಹುಡುಗನು ಚಿಕ್ಕವನಾಗಿರಬೇಕು, ಅವನ ಮನೆ ದೂರವಾಗಿರದೆ ಯಾವಾಗಲೂ ಹೋಗಿ ಬರುವುದಕ್ಕೆ ಅನುಕೂಲವಾಗಿರಬೇಕು ಎಂಬಿತ್ಯಾದಿಯಾಗಿರುವ ಹೆಣ್ಣು ಮಗುವಿನ ತಾಯಿಯ ಆಸೆಯೂ, ಮಗಳ ಗಂಡನು ಉರಿಮಾರಿಯಾಗಿದ್ದರೆ. ಸೀಗೆಯ ಮೆಳೆಯಂತಹ ಆ ಗಂಡನ ಮನೆಯ ದೃಶ್ಯದ ಕಲ್ಪನೆಯೂ ಓರ್ವಳು ಬಡವೆಯಾದ ತಾಯಿಯ ಮೂಲಕ ಈ ಹಳ್ಳಿಯ ಹಾಡುಗಳಲ್ಲಿ ಹೀಗೆ ನುಡಿಸಿರುವುದು ತೋರಿಬರುತ್ತದೆ

# ಹಾಡುಗಳು

ಕಂಚಿಕ್ಕು ಕಲ್ಲೆಡೆ ಮಿಂಚಿಕ್ಕು ಮುಗಿಲೆಡೆ|
ಪಂಚ ಬಳ್ಳಿಕ್ಕು ಮರನೆಡೆ ಈ ಶಿಶು |
ಹೊಂಚಿಕ್ಕು ತಾಯ ಹೆಗಲೆಡೆ ||೧||

ಗಂಗೆ ಗಿರಿಗೆ ತಂಪು ಚಂದ್ರಲೋಕಕೆ ತಂಪು|
ಚಂದನ ತಂಪು ನೊಸಲಿಗೆ ಹಿರಿಮಗ |
ತಂದೆಗೆ ತಂಪು ಬಲು ತಂಪು ||೨||

ಮಕ್ಕಳಾಟಕೆ ಚೆಂದ ಮತ್ತೆ ಯೌವನಚೆಂದ
ಮುಪ್ಪಿನಲಿ ಚೆಂದ ನರೆಗಡ್ಡ ಬಾಲಗೆ |
ಎತ್ತನೋಡಿದರು ನಗೆ ಚಂದ ||೩||

ಎಲ್ಲಿಯಾದರು ಒಂದು ನೆಲ್ಲಿಹಣ್ಣಾದಂತೆ |
ಇಲ್ಲದರಿಗೊಂದು ಶಿಶು ಹುಟ್ಟಿ ಬೆಳದರೆ
ಎಲ್ಲರಿಗೊಮ್ಮೆ ಅತಿ ಚೆಂದ ||೪||

ಬಡವಗೆ ಮಕ್ಕಳು ನಡೆವುದೆ ಅತಿಚೆಂದ
ಹರಿದಾಡಿ ಬಂದು ಮಡಿಲಲ್ಲಿ ಕೂಕಾಗೆ |
ಬಡತನದ ಚಿಂತೆ ಅವಗಿಲ್ಲ ||೫||

ತಾಯ್ತನ್ನ ಮಕ್ಕಳ ಏಗಳು ನೆನೆವಳು|
ಉಂಬಾಗ ಮಡಿಯಾ ಉಡುವಾಗ ಹಿತ್ತಿಲ್ಲ|
ಹೂವ ಕಂಡಲ್ಲಿ ನೆನವಳು ||೬||

ಮಕ್ಕಳ ಪಾಶಕ್ಕೆ ಹಕ್ಕಿ ಕಟ್ಟಿತು ಗೂಡ|
ಸಿಕ್ಕಿತ್ತು ಶಿವನೆ ಬಲೆಯಲ್ಲಿ ಬಲೆಗಾರ|
ಮಕ್ಕಳ ತಾಯ ಕೊಲಬೇಡ ||೭||

○ ○ ○

ನಮ್ಮೂರಬಯಲಲ್ಲಿ ಹನ್ನೆರಡು ಕೊಡೆಕಂಡೆ
ನಮ್ಮಣ್ಣನಪ್ಪ ಬರುವದು, ಅತ್ತಿಗೆ !
ಸಣ್ಣಕ್ಕಿ ಎಸರನಿಡು ಬೇಗೆ ||೮||

ಅಣ್ಣನಮ್ಮನಪ್ಪ ಅತ್ತಿಗೆ ನಮ್ಮವಳಲ್ಲ|
ಬಂದೆಯ ಕೇಳ ಮಣೆ ಕೊಡ|
ಬಂದೆಯ ಕೇಳ ಮಣೆ ಕೊಡ |
ಮಣೆ ಕೊಡದ ಅತ್ತಿಗೆ ಅಣ್ಣಬಾರದೆ
ಉಣಲ್ಹೇಳ ||೯||

ಅತ್ತಿಗೆ ತಾಯಲ್ಲ ಹಿತ್ತಾಳಿ ಚಿನ್ನಲ್ಲ|
ಅತ್ತಿ ಬಂದಣಿಗೆ ಮರನಲ್ಲ|
ಹೆಣ್ಣುಮಕ್ಕಳಿಗೆ ಹುಟ್ಟಿದ ಮನೆಯು
ಸ್ಥಿರವಲ್ಲ ||೧೦||

ಅಣ್ಣ ತಮ್ಮಗೆ ವೈರಿ ಎಣ್ಣೆಕಣ್ಣಿಗೆ ವೈರಿ |
ಬೆಣ್ಣಿಂಗೆ ವೈರಿ ಬಿಸಿನೀರು ಬಡವಂಗೆ|
ತನ್ನಯ ಸೆಳಲೇ ತಾ ವೈರಿ ||೧೧||

ಅತ್ತೆ ಒಳ್ಳೆವಳಾಗಿ ಪುತ್ರ ಸಣ್ಣವನಾಗಿ|
ಅತ್ತೆ ಮಾವನು ಹಿತರಾಗಿ ಇದ್ದರೆ|
ಪುತ್ರಿ ಸಣ್ಣವಳನು ಕೊಡಲಕ್ಕು ||೧೨||

ಕೂಸು ಸಣ್ಣಕ್ಕನ ದೂರೆಲ್ಲು ಕೊಡಲಾಗ |
ಮೂಡಣ ಕೇರಿಯ ಕುವರಂಗೆ ಕೊಟ್ಟರೆ|
ಹೋಗಲಕ್ಕು ನಮಗೆ ಬರಲಕ್ಕು ||೧೩||

ಗೆಂಡನ ಮನೆಎಂದರೆ ಚೆಂಡಿ ಸೀಗೆಯಬೇಲಿ|
ಗೆಂಡನೆಂಬೋನು ಉರಿಮಾರಿ ಬಪ್ಪಾಗ|
ಕೂಸೆದ್ದು ಕಿಚ್ಚಕೆದರುಗು ||೧೪||

(ಪ್ರವಾಸಿ ಪತ್ರಿಕೆಯಿಂದ)

# ಕನಸು

ನಮ್ಮ ಮನಸ್ಸು ಎರಡು ಭಾಗವಾಗಿದೆ ನೀರಿನಲ್ಲಿ ತೇಲುತ್ತಿರುವ ಮರದ ತುಂಡಿನಂತೆ ಎನ್ನಿ ಒಂದು ಭಾಗವು ನೀರಿನಲ್ಲಿ ಮುಳುಗಿದೆ ಇನ್ನೊಂದು ಮೇಲೆ ಕಾಣಿಸುತ್ತಿದೆ ಅದರಂತೆ ಎಂದುಕೊಳ್ಳೋಣ

ಈ ಕಾಣಿಸದ ಭಾಗದಿಂದ ನಮಗೆ ಕನಸುಗಳು ಬರುವುದು ನಮ್ಮ ಹಿಂದಿನ ಚರಿತ್ರೆಯೆಲ್ಲ ಅದರಲ್ಲಿದೆ. ಅದು ಯಾವಾಗಲೂ ಕೆಲಸಮಾಡುತ್ತಿರುತ್ತದೆ. ಯಾವಾಗಲೂ ಸುಮ್ಮನಿರುವುದಿಲ್ಲ. ಆಗಾಗ ಹಿಂದಿನ ನೆನೆಪು ಮೇಲಕ್ಕೆದ್ದು ಬರುತ್ತದೆ. ಆಗ ನಮಗೆ ಈ ಕನಸುಗಳು ಬರುತ್ತವೆ.

ನಾವು ನಿದ್ದೆ ಹೋಗುವಾಗ ಈ ಕಾಣಿಸದ ಭಾಗಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ ನಮ್ಮ ಇಂದ್ರಿಯಗಳಿಗೆ ಬೇರೆ ಕೆಲಸವಿಲ್ಲವಾಗಿ, ಈ ಭಾಗಕ್ಕೆ ಹೊರಗಿನ ಅಡ್ಡಿಯೇ ಇರುವುದಿಲ್ಲ. ಆಗ ಅದುವರೆಗೆ ಮರೆಯಾಗಿದ್ದ ಭಾವನೆಗಳು ಬಂದು ತಲೆತೋರುವುವು. ಕೆಲವು ವೇಳೆ ಅವು ಹರಕು ಹರಕಾಗಿರಬಹುದು ಕೆಲವು ವೇಳೆ ಅವು ಎಲ್ಲ ಕ್ರಮವಾಗಿರಬಹುದು

ಕೆಲವು ವೇಳೆ ಅದು ತಿರುಗಮುರುಗ ಆಗಿರಬಹುದು ಒಂದುಮುಂದು ಆಗಿರಬಹುದು ಇನ್ನು ಕೆಲವು ವೇಳೆ ರಹಸ್ಯವಾಗಿರಬಹದು. ಅದರಿಂದಲೇ ನಮಗೆ ತಟ್ಟನೆ ಅರ್ಥವಾಗುವುದಿಲ್ಲ ಕೊಂಚ ಶ್ರಮಪಟ್ಟು ಹುಡುಕಿನೋಡಿದರೆ ಕ್ರಮವಾದ ಕನಸಾದರೆ ಪೂರ್ಣವಾಗಿ ಅರ್ಥವಾಗುವುದು. ಹರಕು ಮುರುಕಾದರೆ ಅರ್ಥವೇ ಆಗುವುದಿಲ್ಲ

ಕನಸಿನ ಅರ್ಥ ತಿಳಿಯುವುದಕ್ಕೆ ಅನುಭವಬೇಕು ಅಂತಹ ಅನುಭವಿಯಾದವನು ಹೇಳಿದರೆ ಕನಸು ನಮ್ಮ ಮನಸ್ಸಿನಲ್ಲಿ ಅಡಗಿ ಕುಳಿತಿದ್ದ ಆಶೆ ಇತ್ಯಾದಿಗಳು ಎಂದು ಖಚಿತವಾಗಿ ತಿಳಿದು ಬರುವುದು. ಒಟ್ಟಿನಲ್ಲಿ ಕನಸೆಂದರೆ ತಂತೀ ಆಫೀಸಿಗೆ ಬರುವ ಶಬ್ದ ಭಾಷೆಯಂತೆ ಸಂಕೇತಗಳು

ಒಬ್ಬ ಯುವಕನಿಗೆ ಬಹಳ ಕೆಲಸ ಮಾಡಿ ಆಯಾಸವಾಗಿತ್ತು ಬೇಸರವಾಗಿತ್ತು ಅವನಿಗೆ ಒಂದು ಕನಸು ಬಿತ್ತು ಅದರಲ್ಲಿ ಒಂದು ಬೆಟ್ಟದ ಮೇಲಿಂದ ಕಿಬ್ಬರಿಯೊಳಕ್ಕೆ ಒಂದು ಹಗ್ಗ ಹಿಡಿದುಕೊಂಡು ಇಳಿಯ ಬಿದ್ದಂತಿದೆ ಆ ಹಗ್ಗದ ತುದಿಯನ್ನು ಒಬ್ಬ ಸಣ್ಣ ಹುಡುಗನು ಹಿಡಿದಿದ್ದಾನೆ. ಅವನಿಗೆ ತಾನು ಬಿದ್ದುಹೋಗುವಂತಿದ್ದರೂ ದಿಗಿಲಿಲ್ಲ. ಹುಡುಗನಿದ್ದಾನೆ ಅವನನ್ನು ಕೂಗಿದರೆ ಸಾಕು ಮೇಲಕ್ಕೆ ಎಳೆದುಕೊಳ್ಳುತ್ತಾನೆ ಎಂಬ ನಂಬಿಕೆಯು ಇದೆ.

ನೈರ್ಮಲ್ಯಗಳ ನಿಯಮಗಳನ್ನು ಅವನು ಸುತರಾಂ ಅರಿಯನು ಅವನ ಆಹಾರವು ಅತ್ಯಂತ ನಿಕೃಷ್ಟ. ಅವನ ಉತ್ಪಾದನಸಾಧನಗಳು ಪ್ರಾಥಮಿಕ ಅವನು ಹೆಚ್ಚು ಹೆಚ್ಚಾಗಿ ಭೂಮಿಯನ್ನೆ ಅವಲಂಬಿಸಬೇಕಾಗಿದೆ. ಏಕೆಂದರೆ ಹೊಲದಿಂದ ಹುಟ್ಟುವ ಆದಾಯಕ್ಕೆ ಪೂರಕವಾಗುವಂತೆ ಕೆಲವು ಉದ್ಯೋಗಗಳಿಂದ ನಿಶ್ಚಿತ ವರಮಾನವು ದೊರೆಯುತ್ತಿತ್ತು ಆದರೆ ಆ ಉದ್ಯೋಗಗಳು ಗಿರಣಿಯ ಸರಕುಗಳ ಸ್ಪರ್ಧೆಯ ಮೂಲಕ ಸತ್ತುಹೋಗಿವೆ. ಆದುದರಿಂದ ಹಳ್ಳಿಗನಿಂದು ನಿಷ್ಕಿಂಚನನು ಜೀವನದಲ್ಲವನಿಗೆ ಉತ್ಸಾಹವಿಲ್ಲ. ಮಹತ್ವಾಕಾಂಕ್ಷೆಯಿಲ್ಲ ಬಡತನವನ್ನನುಸರಿಸಿ ಬೇರೆ ದುಷ್ಪರಿಣಾಮಗಳೂ ಬಂದಿವೆ. ಅಶಿಕ್ಷಿತತೆ, ಅದರ ಮೂಲಕ ಅಜ್ಞಾನ ಅಂಧವಿಶ್ವಾಸ ಋಣಭಾರ ಅದರಿಂದ ಭಯ, ದಾಸ್ಯ ಹಳ್ಳಿಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನೆಲ್ಲ ಗ್ರಾಮೋದ್ಯೋಗ ಸಂಘವು ಬಿಡಿಸಲೆಸಗುವುದು ಅಸಂಭವನೀಯವು ಅಲ್ಲದೆ ಅವುಗಳಲ್ಲಿ ಹಲವನ್ನು ಸರಕಾರವೇ ಸರಿಯಾಗಿ ಬಿಡಿಸಬಲ್ಲುದು. ಸಮಸ್ತ ಭಾರತದ ಮೇಲೆ ರಾಜಕೀಯ ಆರ್ಥಿಕ ಪ್ರಭುತ್ವವು ಬಂದ ಮೇಲೆಯೇ ಅದು ಸಾಧ್ಯ. ಆದುದರಿಂದ ವ್ಯಕ್ತಿಗತ ಕಾರ್ಯಕ್ಷೇತ್ರಕ್ಕೂ ನಿಯಂತ್ರಣಕ್ಕೂ ಸಂಬಂಧಪಟ್ಟ ಸಾಧನಗಳನ್ನು ಮಾತ್ರ ಸಂಘವು ಉಪಯೋಗಿಸಬಲ್ಲುದು. ಮತ್ತಿದಕ್ಕೆ ಪ್ರಭುತ್ವಶಕ್ತಿಯು ಮತ್ತು ಆಡಳಿತದ ಯಂತ್ರ ಸಹಾಯವು ಬೇಕಾಗಿಲ್ಲ

ಗ್ರಾಮಸಂಘಟನವೇ ಗುರಿಯಾಗಿಯುಳ್ಳ ಯಾವುದೇ ಸಂಸ್ಥೆಯು ಹಳ್ಳಿಗನ ಆರೋಗ್ಯ ಸುಧಾರಣೆಯನ್ನು ಪ್ರಥಮ ಕರ್ತವ್ಯವಾಗಿಟ್ಟುಕೊಳ್ಳುವುದು ಕ್ರಮಪ್ರಾಪ್ತವಾಗಿರುವುದು ಏಕೆಂದರೆ, ಹಳ್ಳಿಗನೇ ಹಳ್ಳಿಯ ಚಟುವಟಿಕೆಗಳೆಲ್ಲದರ ಕೇಂದ್ರಬಿಂದುವಾಗಿದ್ದು, ಅವನ ಶಾರೀರಿಕಸ್ಥಿತಿಯು ಸರಿಯಾಗಿರದಿದ್ದರೆ ಹಳ್ಳಿಯಲ್ಲಿ ಯಾವ ಸುಧಾರಣೆಯನ್ನೂ ಮಾಡಲು ಸಾಧ್ಯವಿಲ್ಲ ಆದುದರಿಂದ ಸಂಘವು ತನ್ನ ಕಾರ್ಯಕ್ರಮದಲ್ಲಿ ಗ್ರಾಮನೈರ್ಮಲ್ಯಕ್ಕೂ ಆಹಾರ ಸುಧಾರಣೆಗೂ ಪ್ರಥಮ ಸ್ಥಾನವನ್ನು ಕೊಟ್ಟಿದೆ

ನೈರ್ಮಲ್ಯದ ಬಗ್ಗೆ ಹೇಳುವುದಾದರೆ ಹಳ್ಳಿಯ ಬೀದಿಗಳು, ಸಂದಿಗಳು ಮತ್ತು ಬಯಲು ಜಾಗೆಗಳು ಸ್ವಚ್ಛವಾಗಿರಿಸಲ್ಪಡದಿದ್ದರೆ ಮತ್ತು ಶುದ್ಧನೀರಿನ ಪೂರೈಕೆಯಿರದಿದ್ದರೆ ಗ್ರಾಮವಾಸಿಗಳು ಜೇನೆ ಬೇಸರಿಕೆ ಕಜ್ಜಿ-ಜ್ವರ ಮೊದಲಾದವುಗಳಿಗೆ ತುತ್ತಾಗಿ ಇದ್ದ ಬಿದ್ದ ಅಲ್ಪ ಜೀವನದಾರ್ಢ್ಯಕ್ಕೂ ಎರವಾಗುವರೆಂಬುದು ಸ್ಪಷ್ಟವಿದೆ ಹಳ್ಳಿಗರ ಉದ್ಧಾರಕ್ಕಾಗಿ ಆತುರರಾದದರಿಗೆ ಸಂಘವು ಕೆಳಗೆ ಕಾಣಿಸಿದ ಪ್ರಥಮ ಪಾಠಗಳನ್ನು ವಿಧಿಸುತ್ತದೆ. ಹಳ್ಳಿಗಳಲ್ಲಿ ಸುಲಭರೀತಿಯಲ್ಲಿ ಮಾರ್ಗಗಳನ್ನು ತಯಾರಿಸುವುದು, ಬೀದಿಗಳಲ್ಲಿ ಅಲ್ಲಲ್ಲಿ ಸುಚಿತವಾಗಿ ನೊಣಗಳಿಗೂ ರೋಗಜಂತುಗಳಿಗೂ ಆಶ್ರಯಸ್ಥಾನವಾಗಿರುವ ಹೊಲಸಿನ ತಿಪ್ಪೆಗಳನ್ನು ಹೊತ್ತುಹಾಕುವುದು, ಮನುಷ್ಯನ ಮಲದ ಉಪಯೋಗವನ್ನು ಸುಧಾರಿಸಿದ, ಆರ್ಥಿಕದೃಷ್ಟಿಯಿಂದ ಉಪಯುಕ್ತವೆನಿಸುವ ರೀತಿಗಳಲ್ಲಿ ಮಾಡಿಕೊಳ್ಳು

ವುದು ಹಳ್ಳಿಯ ಕೆರೆಬಾವಿಗಳನ್ನು ಶುಚಿಗೊಳಿಸುವುದು, ಹಳ್ಳಿಗರಿಗೆ ನೀರನ್ನು ಉಪಯೋಗಿಸುವ ಸರಿಯಾದ ಕ್ರಮವನ್ನು ತಿಳಿಸುವುದು, ಗಾಳಿಬೆಳಕುಗಳಿಗೆ ಉಚಿತವಾಗಿ ಅವಕಾಶಕೊಡುವುದು ಬಟ್ಟೆಹಾಕಿಕೊಳ್ಳುವುದು, ಅಡಿಗೆ ಮಾಡುವುದು ಮೊದಲಾದುವುಗಳ ಬಗ್ಗೆ ಆರೋಗ್ಯಪಾಠಗಳನ್ನು ಕಲಸುವುದು ಇದಲ್ಲದೆ ಸಂಘವು, ಹಳ್ಳಿಗನಿಗೆ ಪುಷ್ಟಿದಾಯಕವಾದ ವಿವಿಧ ಜೀವನಸತ್ವಗಳನ್ನು ಉಚಿತ ಪ್ರಮಾಣದಲ್ಲುಳ್ಳ, ಅವನ ಆರ್ಥಿಕಸ್ಥಿತಿಗೆ ಭಾರವಾಗದಂತಹ ಆಹಾರವನ್ನು ಒದಗಿಸುವ ವಿಷಯದ ಕಡೆಗೆ ವಿಶ್ಶೇಷ ಲಕ್ಷ್ಯವನ್ನು ಕೊಟ್ಟಿರುವುದು. ನಿಃಸತ್ವ ಆಹಾರದಿಂದ ಹಳ್ಳಿಗನ ಸಂಪದುತ್ಪಾದನ ಸಾಮರ್ಥ್ಯವೆ ತಗ್ಗಿರುವುದು.

ಆದುದರಿಂದ ಹಳ್ಳಿಗನ ಸಾಮರ್ಥ್ಯವೆ ತಗ್ಗಿರುವುದು. ಆದುದರಿಂದ ಹಳ್ಳಿಗನ ಆಹಾರದಲ್ಲಿ ಜೀವನಶಕ್ತಿವರ್ಧಕ ಅಂಶಗಳು ಪ್ರವೇಶಿಸುವಂತೆ, ಕನಿಷ್ಠಪಕ್ಷಕ್ಕೆ ಅವನ ಆಹಾರದೊಳಗೆ ಇದ್ದಿರಬಹುದಾದ ಅಲ್ಪಸ್ವಲ್ಪ ಪೌಷ್ಟಿಕಾಂಶಗಳಾದರೂ ಹಾಗೆ ಉಳಿಯುವಂತೆ ನೋಡಿಕೊಳ್ಳುವುದು ಅಗತ್ಯವಿದೆ ಹಳ್ಳಿಗನ ಊಟವು ಬರಿ ಅನ್ನ, ಬಾಡಿಸಿಕೊಳ್ಳಲಿಕ್ಕೆ ಸ್ವಲ್ಪ ಉಪ್ಪಿನಕಾಯಿ ಇಷ್ಟು ಮಾತ್ರವಿರುತ್ತಿದ್ದರೆ, ಆ ಅನ್ನಕ್ಕುಪಯೋಗಿಸುವ ಅಕ್ಕಿಯ ಪೌಷ್ಟಿಕಾಂಶಗಳು ಸ್ವಲ್ಪವೂ ಕಡಿಮೆಯಾಗದರುವುದು ಅವಶ್ಯವಾಗುವುದು ಅಂತೆಯೆ ಅಕ್ಕಿ ಬೇಯಲು ಎಷ್ಟು ನೀರು ಬೇಕೊ ಅಷ್ಟನ್ನೆ ಹಾಕಬೇಕು. ಹೆಚ್ಚು ಹಾಕಿ ಗಂಜಿಯನ್ನು ಬಸಿದೊಗೆಯಬಾರದು ಏಕೆಂದರೆ ಗಂಜಿಯಲ್ಲಿ ಅಕ್ಕಿಯ ಸತ್ವದ ಬಹು ಭಾಗವಿಳಿದಿರುತ್ತದೆ ಎಂಬ ಮಾತನ್ನು ಅವನಿಗೆ ಕಲಿಸಬೇಕಾಗುವುದು. ಮಾತ್ರವಲ್ಲ ಕೈಯಿಂದ ಕುಟ್ಟಿದ ಅಕ್ಕಿಯನ್ನೆ ಉಪಯೋಗಿಸುವಂತೆ ಹಳ್ಳಿಗನ ಮನವೊಲಿಸಬೇಕಾಗುವುದು ಏಕೆಂದರೆ ಕಟ್ಟುವ ಉದ್ಯೋಗವು ಹಳ್ಳಿಗನಿಗೆ ಜೀವನೋಪಾಯವನ್ನು ಒದಗಿಸಿ ಅಕ್ಕಿಯ ಗಿರಣಿಗೆ ತೆತ್ತಬಹುದಾದ ಹಣವನ್ನು ಉಳಿಸುವುದಲ್ಲದೆ, ವೈದ್ಯಕೀಯ ಅ. ಪ್ರಾಯದ ಮೇರೆಗೆ, ದೊಡ್ಡ ಯಂತ್ರಗಳ ಘರ್ಷಣದಿಂದ ಹುಟ್ಟುವ ಉಷ್ಣವು 'ವ್ಹಿಟಮಿನ್ ಡಿ.'ಯ ನಾಶಕವಾಗುವುದರಿಂದ ಕೈಯಿಂದ ಕುಟ್ಟಿದ ಅಕ್ಕಿಯು ಗಿರಣಿಯ ಅಕ್ಕಿಗಿಂತ ಪೌಷ್ಟಿಕದೃಷ್ಟಿಯಿಂದ ಶ್ರೇಷ್ಠವಾಗಿದೆ ಅಕ್ಕಿಯನ್ನು ಬೆಳ್ಳಗೆ ಹೊಳೆಹೊಳೆಯುವಂತೆಯೂ ಕುಟ್ಟಬಾರದು. ಹಾಗೆ ಮಾಡುವುದರಿಂದ ದೇಹಪುಷ್ಟಿಗೆ ಅತ್ಯಂತ ಅವಶ್ಯವೂ 'ಬೆರಿ-ಬೆರಿ' ಎಂಬ ರೋಗಕ್ಕೆ ಪ್ರತಿಬಂಧಕವೂ ಆದ ಅಕ್ಕಿಯ ಮೇಲಿನ ತೌಡಿನ ಕಂದುಬಣ್ಣದ ಹೊದ್ದಿಕೆಯಲ್ಲಿರುವ 'ವ್ಹಿಟಮಿನ' ಬಿ.'ಯು ನಷ್ಟವಾಗುವುದು ತೌಡು ತರೆದುಹೋಗಿ ಶುಭ್ರವಾಗಿ ಹೊಳೆಯುವ ಅಕ್ಕಿಗಿಂತಲೂ ಹಾಗಿಲ್ಲದ ಅಕ್ಕಿಯಲ್ಲಿಯ ಸತ್ವಾಂಶಗಳು ಹೆಚ್ಚಿಗಿರುವವೆಂದು ವೈದ್ಯರು ಒಮ್ಮತದಿಂದ ಹೇಳುವರು

ಆದರಲ್ಲಿ ಪ್ರೋಟೀನುಗಳು ನೆಣ ಕ್ಷಾರಗಳು ಹೆಚ್ಚು ಸಮೃದ್ಧವಾಗಿರುವವು ಶುಭ್ರ ಅಕ್ಕಿಯಿಂದ ಮಲಬದ್ಧತೆಯಾಗುತ್ತಿದ್ದರೆ, ಇದರಿಂದೆಂದೂ ಆಗುವುದಿಲ್ಲ

(ಸಶೇಷ)